# ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಮಾಜಶಾಸ್ತ್ರ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು
**ಯರ್‍ರಿಸ್ವಾಮಿ ಈ.**

ಮಾರ್ಗದರ್ಶಕರು
**ಡಾ. ಎಲ್. ಶ್ರೀನಿವಾಸ**
ಮುಖ್ಯಸ್ಥರು ಮತ್ತು ಸಹ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ

ಸಹ ಮಾರ್ಗದರ್ಶಕರು
**ಡಾ. ಎಚ್.ಡಿ. ಪ್ರಶಾಂತ್**
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ






ಸಮಾಜ ವಿಜ್ಞಾನಗಳ ನಿಕಾಯ
**ಮಾನವಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೨೦

# ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಮಾಜಶಾಸ್ತ್ರ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
**ಯರ್ರಿಸ್ವಾಮಿ ಈ.**

ಮಾರ್ಗದರ್ಶಕರು
**ಡಾ. ಎಲ್. ಶ್ರೀನಿವಾಸ**
ಮುಖ್ಯಸ್ಥರು ಮತ್ತು ಸಹ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ

ಸಹ ಮಾರ್ಗದರ್ಶಕರು
**ಡಾ. ಎಚ್.ಡಿ. ಪ್ರಶಾಂತ್**
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ



**ಸಮಾಜ ವಿಜ್ಞಾನಗಳ ನಿಕಾಯ**
**ಮಾನವಶಾಸ್ತ್ರ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ - ೫೮೩೨೭೬**

**೨೦೨೦**

# ಪ್ರಮಾಣ ಪತ್ರ

ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ. ಎಲ್. ಶ್ರೀನಿವಾಸ ಅವರ ಮಾರ್ಗದರ್ಶನ ಹಾಗೂ ಡಾ. ಎಚ್.ಡಿ. ಪ್ರಶಾಂತ್ ಅವರ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಸಮಾಜಶಾಸ್ತ್ರ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: ೦೪.೦೯.೨೦೨೦
ಸ್ಥಳ: ವಿದ್ಯಾರಣ್ಯ

(ಯರ್ರಿಸ್ವಾಮಿ ಈ.)
ಸಂಶೋಧನಾ ವಿದ್ಯಾರ್ಥಿ
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಯರ್ರಿಸ್ವಾಮಿ ಈ.** ಇವರು **ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ**(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಸಮಾಜಶಾಸ್ತ್ರ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

ದಿನಾಂಕ: 9/9/2020.
ಸ್ಥಳ:

(ಡಾ. ಎಲ್. ಶ್ರೀನಿವಾಸ)
ಮುಖ್ಯಸ್ಥರು ಮತ್ತು ಸಹ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

# ಸಹ ಮಾರ್ಗದರ್ಶಕರ ದೃಢೀಕರಣ ಪತ್ರ

ಯರ್ರಿಸ್ವಾಮಿ ಈ. ಇವರು ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಸಹಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಸಮಾಜಶಾಸ್ತ್ರ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೮-೧೧-೨೦೨೦
ಸ್ಥಳ:

(ಎಚ್.ಡಿ. ಪ್ರಶಾಂತ್)
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

# ಪರಿವಿಡಿ

## ಕೋಷ್ಟಕಗಳ ಸೂಚಿ

# ಸಂಕ್ಷಿಪ್ತ ಅಕ್ಷರಗಳ ಸೂಚಿ

| | |
|---|---|
| ಇ ಆರ್ ಪಿ | ಎಕನಾಮಿಕ್ ರಿಕವರಿ ಪ್ರೋಗ್ರಾಮ್ |
| ಐ ಎಂ ಎಫ್ | ಇಂಟರ್‌ನ್ಯಾಷನಲ್ ಮಾನಿಟರಿ ಫಂಡ್ |
| ಕ ಸಾ ಪ | ಕನ್ನಡ ಸಾಹಿತ್ಯ ಪರಿಷತ್ತು |
| ಕ ವಿ ಹಂ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಜಂ ಅ ಸೂ | ಜಂಡರ್ ಅಸಮಾನತೆ ಸೂಚ್ಯಂಕ |
| ಜೆ ಎ ಡಿ | ಜಂಡರ್ ಆ್ಯಂಡ್ ಡೆವಲಪ್‌ಮೆಂಟ್ |
| ಜಿ ಪ | ಜಿಲ್ಲೆಯತ್ತ ಪಕ್ಷಿನೋಟ |
| ತಾ ಮ ಅ | ತಾಯಂದಿರ ಮರಣ ದರ |
| ಡಬ್ಲ್ಯೂ ಬಿ | ವರ್ಲ್ಡ್ ಬ್ಯಾಂಕ್ |
| ಡಬ್ಲೂ ಎ ಡಿ | ವುಮನ್ ಆ್ಯಂಡ್ ಡೆವಲಪ್‌ಮೆಂಟ್ |
| ಡಬ್ಲೂ ಐ ಡಿ | ವುಮನ್ ಇನ್ ಡೆವಲಪ್‌ಮೆಂಟ್ |
| ಪು ವೇ | ಪುರುಷರ ವೇತನ |
| ಪು ಸಾ | ಪುರುಷರ ಸಾಕ್ಷರತೆ |
| ಪ್ರಾ ಆ ಕೆ | ಪ್ರಾಥಮಿಕ ಆರೋಗ್ಯ ಕೇಂದ್ರ |
| ಬ ಜಿ ಅ ಅ ನೋ | ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ |
| ಮ ಫ ದ | ಮಹಿಳೆಯರ ಫಲವತ್ತತೆ ದರ |
| ಮ ಮ ದ | ಮಕ್ಕಳ ಮರಣ ದರ |
| ಮ ವೇ | ಮಹಿಳೆಯರ ವೇತನ |
| ಮ ಸಾ | ಮಹಿಳೆಯರ ಸಾಕ್ಷರತೆ |
| ಮಾ ಅ ಸೂ | ಮಾನವ ಅಭಿವೃದ್ಧಿ ಸೂಚ್ಯಂಕ |
| ಮಾ ಅ ವ | ಮಾನವ ಅಭಿವೃದ್ಧಿ ವರದಿ |
| ಯು ಎನ್ | ಯುನೈಟೆಡ್ ನೇಷನ್ಸ್ |
| ಯು ಎನ್ ಡಿ ಪಿ | ಯುನೈಟೆಡ್ ನೇಷನ್ಸ್ ಡೆವಲಪ್‌ಮೆಂಟ್ ಪ್ರೋಗ್ರಾಮ್ |
| ಯು ಎನ್ ಐ ಎಫ್ ಇ ಎಮ್ | ಯುನೈಟೆಡ್ ನೇಷನ್ಸ್ ಡೆವಲಪ್‌ಮೆಂಟ್ ಫಾರ್ ವುಮನ್ |
| ಯು ನ್ ಎಫ್ ಪಿ ಎ | ಯುನೈಟೆಡ್ ನೇಷನ್ಸ್ ಫಂಡ್ ಫಾರ್ ಪಾಪ್ಯುಲೇಷನ್ಸ್ ಆ್ಯಕ್ಟಿವಿಟೀಸ್ |
| ರಾ ಸ್ಯಾ ಸ | ರಾಷ್ಟ್ರೀಯ ಸ್ಯಾಂಪಲ್ ಸರ್ವೆ |
| ಲಿ ಸ ಅ | ಲಿಂಗ ಸಂಬಂಧಿ ಅಸಮಾನತೆ |
| ಶಿ ಮ ದ | ಶಿಶು ಮರಣ ದರ |
| ಎಸ್ ಎ ಪಿ | ಸ್ಟ್ರಕ್ಚರಲ್ ಆಡ್ಜಸ್ಟ್‌ಮೆಂಟ್ ಪ್ರೋಗ್ರಾಮ್ |

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧. ಪ್ರಸ್ತಾವನೆ
೧.೨. ಅಧ್ಯಯನದ ಉದ್ದೇಶ
೧.೩. ಅಧ್ಯಯನದ ಕ್ಷೇತ್ರ ಮತ್ತು ವ್ಯಾಪ್ತಿ
೧.೪. ಅಧ್ಯಯನದ ವೈಧಾನಿಕತೆ
೧.೫. ಅಧ್ಯಯನದ ಮಹತ್ವ
೧.೬. ಅಧ್ಯಯನದ ಸ್ವರೂಪ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

## ೧.೧. ಪ್ರಸ್ತಾವನೆ

ಪ್ರಸ್ತುತ ಅಧ್ಯಯನವು ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರವನ್ನು ಕುರಿತದ್ದು. ಈ ವಿಷಯವನ್ನು ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶವನ್ನು ಕೇಂದ್ರೀಕರಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಸದರಿ ವಿಷಯವನ್ನು ಪ್ರವೇಶಿಸುವುದಕ್ಕೆ ಎರಡು ಮಾರ್ಗಗಳಿವೆ. ಒಂದು ವಲಸೆ ಮತ್ತು ಜೀವನಾಧಾರವು ಲಿಂಗವ್ಯವಸ್ಥೆ ಮೇಲೆ ಬೀರುವ ಪರಿಣಾಮಗಳನ್ನು ಗುರುತಿಸುವುದು. ಎರಡು ಲಿಂಗವ್ಯವಸ್ಥೆ ಎಂಬುದು ಸಮಾಜ ಮತ್ತು ಸಂಸ್ಕೃತಿ ರಚನೆ ಎನ್ನುವುದನ್ನು ಒಪ್ಪಿಕೊಂಡು, ಇದು ಹೆಣ್ಣು ಲಿಂಗಕ್ಕೆ ಸೃಷ್ಟಿಸುತ್ತಿರುವ ಇಕ್ಕಟ್ಟು ಮತ್ತು ಬಿಕ್ಕಟ್ಟುಗಳಾವುವು? ಅದರಲ್ಲೂ ಜೀವನಾಧಾರಕ್ಕಾಗಿ ವಲಸೆ ಹೋದ ಮಹಿಳೆಯರು ಹಾಗೂ ವಲಸೆ ಹೋದ ಮನೆಯಲ್ಲಿನ ಮಹಿಳೆಯರ ಮೇಲೆ ಆಗಿರುವ ಪರಿಣಾಮಗಳೇನು ಎಂಬುದನ್ನು ಗುರುತಿಸುವುದು. ಈ ಅಧ್ಯಯನವು ಎರಡನೇ ಮಾರ್ಗದಿಂದ ಪ್ರವೇಶಿಸುತ್ತದೆ. ಹಾಗಾಗಿ ಲಿಂಗವ್ಯವಸ್ಥೆ ನೆಲೆಯಿಂದ ಜೀವನಾಧಾರಕ್ಕಾಗಿ ವಲಸೆ ಹೋಗುವ ಮತ್ತು ವಲಸೆ ಹೋದ ಮನೆಯ ಮಹಿಳೆಯರ ಸ್ಥಿತಿಗತಿ ಮತ್ತು ಪರಿಣಾಮಗಳನ್ನು ಶೋಧಿಸುತ್ತದೆ.

ಲಿಂಗವ್ಯವಸ್ಥೆ ಎನ್ನುವುದು ಇಂಗ್ಲಿಷ್‌ನ ಜಂಡರ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬಳಸುವ ಪರಿಭಾಷೆಯಾಗಿದೆ. ಇದನ್ನು ಸಾಂಪ್ರದಾಯಿಕ ಅಧ್ಯಯನಗಳು "ಹೆಣ್ಣನ್ನು ಅಂಡಾಣುಗಳ ಉತ್ಪತ್ತಿಕೇಂದ್ರ ಎಂದೂ, ಗಂಡನ್ನು ವೀರ್ಯಾಣು ಉತ್ಪಾದಕವೆಂದು ಹೇಳುತ್ತಿವೆ" (ಎಚ್.ಎಸ್.ಶ್ರೀಮತಿ(ಅನು), ಸಿಮೋನ್ ದ ಬೋವಾ(ಮೂಲ), ೨೦೦೭, ಪು. ೧೬-೧೭). ಅಂದರೆ ಹೆಣ್ಣು ಗಂಡುಗಳ ನಡುವೆ ತಾರತಮ್ಯವಿದೆ ಎಂಬುದನ್ನು ಒಪ್ಪಿಕೊಳ್ಳುತ್ತಿವೆ. ಆದರೆ ಹೆಣ್ಣು ಗಂಡುಗಳ ನಡುವೆ ವಿಕಾಸದ ನೆಲೆಯಲ್ಲಿಯೇ ಒಂದು ನೈಸರ್ಗಿಕವಾದ ತಾರತಮ್ಯವಿದೆ ಎಂಬ ವಾದವನ್ನು ನಿರಾಕರಿಸುವ ಸ್ತ್ರೀವಾದಿ ಆದಿ ಚಿಂತಕಿ ಸಿಮೋನ್ ದ ಬೋವಾ "ಹೆಣ್ಣಾಗಿ ಯಾರೂ ಹುಟ್ಟುವುದಿಲ್ಲ, ಅವಳನ್ನು ಸಮಾಜ ಮತ್ತು ಸಂಸ್ಕೃತಿ ಸಂರಚಿಸುತ್ತದೆ ಅಥವಾ ಕಟ್ಟುತ್ತದೆ(She is not born but She is made) ಎನ್ನುತ್ತಾಳೆ"(ಎಚ್.ಎಸ್.ಶ್ರೀಮತಿ(ಅನು), ಸಿಮೋನ್ ದ ಬೋವಾ(ಮೂಲ), ೨೦೦೭, ಪು. ೩೭). ಅಂದರೆ ಹೆಣ್ಣು ಎಂಬ ಪರಿಕಲ್ಪನೆ

ಜೈವಿಕವಾಗಿ ಹುಟ್ಟುವುದಿಲ್ಲ. ಸಮಾಜ ಸಂರಚಿಸಿದ ಪರಿಕಲ್ಪನೆ ಅದು. ಹಾಗಾದರೆ ರಚಿಸಲಾಗುವುದು ಎಂದರೇನು? ಉದಾಹರಣೆಗೆ ಒಂದು ಲ್ಯಾಪ್‌ಟ್ಯಾಪ್ ಅನ್ನು ನೋಡಿದ ತಕ್ಷಣ ಗೊತ್ತಾಗುತ್ತದೆ. it is made ಅಂತ. ಅದರ ಆಕಾರ, ಬಣ್ಣ, ಅದರ ಒಳಗಿನ ಸಂಗತಿಗಳು ಹೇಗಿರಬೇಕು, ಅದರ ಮೇಲ್ಭಾಗ ಹೇಗಿರಬೇಕು ಅನ್ನುವುದು ಪೂರ್ವ ನಿರ್ಧಾರವಾಗಿರುತ್ತದೆ. ಇದನ್ನು ಹೆಣ್ಣು ರಚಿತಳಾಗುವುದಕ್ಕೆ ಅನ್ವಯಿಸಿದರೆ, ಹೆಣ್ಣಿನ ದೇಹದ ರಚನೆಯು ಸಮಾಜದಲ್ಲಿ ಅವಳ ಬಗ್ಗೆ ಇರುವ ಒಟ್ಟು ಭಾವನೆಗಳನ್ನು, ವಿಚಾರಗಳನ್ನು ನಿಯಂತ್ರಿಸುವುದಿಲ್ಲ, ನಿರ್ದೇಶಿಸುವುದೂ ಇಲ್ಲ. ಬದಲಾಗಿ ಅವನ್ನು ಅವಳಿಗೆ ಸಮಾಜವೇ ಕೊಡುತ್ತದೆ. ಅಂದರೆ ಸಮಾಜ, ಕುಟುಂಬ, ಗಂಡಸು, ಅವನೇ ಪಳಗಿಸಿರುವ ಹೆಂಗಸರು ಎಲ್ಲರೂ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಅವಳಿಗೆ ತಿಳಿಸಿಕೊಡುತ್ತಾರೆ. ಹಾಗಾಗಿಯೇ She was made by men ಅವಳನ್ನು ಪುರುಷರು ಸೃಷ್ಟಿಸಿದರು ಎನ್ನುವುದೇ ಈ ವಾದದ ಹಿಂದಿರುವ ಆಲೋಚನೆಯಾಗಿದೆ.

ಈ ಹಿನ್ನೆಲೆಯಲ್ಲಿ ಸಮಾಜ ಮತ್ತು ಸಂಸ್ಕೃತಿಯಲ್ಲಿ ಮಹಿಳೆಯ ಸ್ಥಾನಮಾನಗಳನ್ನು ನೋಡಿದಾಗ ಹೆಣ್ಣನ್ನು ಅಧೀನವಾಗಿ, ಖಾಸಗಿಯಾಗಿ, ಕೀಳಾಗಿ, ಕನಿಷ್ಠವಾಗಿ, ಗಂಡನ್ನು ಪ್ರಧಾನವಾಗಿ, ಸಾರ್ವಜನಿಕವಾಗಿ, ಮೇಲು ಹಾಗೂ ಶ್ರೇಷ್ಠವೆಂದು ಭಾವಿಸುವ ಗ್ರಹಿಕೆಗಳಿವೆ. ಅದಕ್ಕೆ ತಾರತಮ್ಯವೇ ಕಾರಣವಾಗಿದೆ. ತಾರತಮ್ಯ ಎನ್ನುವುದು ಉದ್ದೇಶಪೂರ್ವಕವಾಗಿ ಗೊತ್ತಿದ್ದು ಒಂದು ಸಂಗತಿಯನ್ನು ನಿರ್ಲಕ್ಷಿಸುವಂತದ್ದು. ಅಂದರೆ ಮಹಿಳೆ, ಹೆಣ್ಣು ಎನ್ನುವ ಕಾರಣಕ್ಕಾಗಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾಳೆ. ಇದು ಸಮಾಜದ ಎಲ್ಲ ಸಂಸ್ಥೆಗಳಲ್ಲಿ ಸಾಂಸ್ಥೀಕರಣಗೊಂಡ ಹಿನ್ನೆಲೆಯಲ್ಲಿ ಅನೇಕ ಲಿಂಗ ಅಸಮಾನತೆಗಳ ಬವಣೆಯಲ್ಲಿ ಮಹಿಳೆಯರು ಬದುಕುತ್ತಿದ್ದಾರೆ. ಸಮಾಜದ ಇಂತಹ ಲಿಂಗ ಅಸಮಾನತೆಯನ್ನು ಅಮರ್ತ್ಯಸೇನ್ ಅವರು ಏಳು ಪ್ರಕಾರಗಳಲ್ಲಿ ಗುರುತಿಸಿದ್ದಾರೆ. "೧.ಆಯುಸ್ಸಿನಲ್ಲಿ ಅಸಮಾನತೆ ೨.ಗಂಡು ಸಂತಾನದ ಬಗ್ಗೆ ಆಕಾಂಕ್ಷೆ, ೩.ಮೂಲಭೂತ ಸೌಕರ್ಯಗಳಲ್ಲಿ ಅಸಮಾನತೆ, ೪.ವಿಶೇಷ ಸದವಕಾಶಗಳ ಅಸಮಾನತೆ, ೫.ವೃತ್ತಿಪರ ಅಸಮಾನತೆ, ೬.ಮಾಲೀಕತ್ವ ಅಸಮಾನತೆ ೭.ಮನೆ ಮಟ್ಟದಲ್ಲಿನ ಅಸಮಾನತೆ ಎಂದು ವಿಂಗಡಿಸಿರುವರು"(ಎಂ.ಸಿ. ಶೈಲಜ, ೨೦೧೨, ಪು. ೮).

ಹೀಗೆ ಸಮಾಜದಲ್ಲಿನ ಲಿಂಗ ತಾರತಮ್ಯ ಅಸಮಾನತೆಗೆ ಮಾತ್ರ ನಿಲ್ಲದೆ ಅನೇಕ ಸಮಸ್ಯೆಗಳನ್ನು ಸೃಷ್ಟಿಸುವ ಸಮಸ್ಯಾತ್ಮಕ ಚೌಕಟ್ಟಾಗಿ ನಿಂತಿದೆ. ಅಂದರೆ ಮಹಿಳೆಯಾಗಿರುವ ಕಾರಣಕ್ಕಾಗಿ ಬರುವ ಸಮಸ್ಯೆ ಮತ್ತು ಸಂಕಷ್ಟಗಳು ಅನೇಕ ಇವೆ. ಉದಾಹರಣೆಗೆ ಹೆಣ್ಣು ಭ್ರೂಣ ಹತ್ಯೆ, ಅತ್ಯಾಚಾರ, ವರದಕ್ಷಿಣೆ, ಬಾಲ್ಯವಿವಾಹ, ಲೈಂಗಿಕ ಕಿರುಕುಳ, ಕೌಟುಂಬಿಕ ಹಿಂಸೆ ಇತ್ಯಾದಿ. ಇವನ್ನು ಮಹಿಳಾಕೇಂದ್ರಿತ ಸಮಸ್ಯೆಗಳೆಂದು ಗುರುತಿಸಬಹುದು. ಇವು ಒಂದು ಬಗೆಯಾದರೆ; ಇನ್ನು ಸಮಾಜವನ್ನು ಬಾಧಿಸುವ ಅನೇಕ ವಿಷಯಗಳಿವೆ. ಉದಾಹರಣೆಗೆ

ಜಾತಿ, ವರ್ಗ, ಬಡತನ, ನಿರುದ್ಯೋಗ, ವಲಸೆ ಇತ್ಯಾದಿ. ಇವು ಸಹ ಮಹಿಳೆಯರ ಮೇಲೆ ದುಪ್ಪಟ್ಟು ನಕಾರಾತ್ಮಕ ಪರಿಣಾಮಗಳನ್ನು ಬೀರುತ್ತಿವೆ. ಇವು ಎರಡನೇ ಬಗೆಯವು. ಮೊದಲನೆಯ ಗುಂಪಿನ ಅಂದರೆ ಮಹಿಳಾಕೇಂದ್ರಿತ ಸಮಸ್ಯೆಗಳು ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಆದರೂ ಮಹಿಳೆ ಕುರಿತ ನಿರ್ವಚನಗಳು ಆಕೆ ಬದುಕುವ ಸಾಮಾಜಿಕ ನೆಲೆಗಟ್ಟಿನಲ್ಲಿ ನಡೆಯಬೇಕು. ಆಯಾ ದೇಶ, ಸಮಯ, ಕಾಲ, ಧರ್ಮ, ಶಿಕ್ಷಣ, ವರ್ಗ, ಜಾತಿ, ಪ್ರದೇಶ, ವಯಸ್ಸು ಇತ್ಯಾದಿ ಸಾಮಾಜಿಕ ಭಿನ್ನತೆಗಳನ್ನು ಒಳಗೊಳ್ಳಬೇಕಾಗಿದೆ. ಅವುಗಳ ತಾತ್ವಿಕತೆಯ ಬಗೆಗೆ ಇನ್ನಷ್ಟು ತೀವ್ರವಾದ ಚರ್ಚೆಗಳು ನಡೆಯಬೇಕು. ಅದನ್ನು ವಿಸ್ತರಿಸದೆ, ಪ್ರಸ್ತುತ ಅಧ್ಯಯನವು ಎರಡನೆಯ ವರ್ಗಕ್ಕೆ ಸಂಬಂಧಿಸಿದ್ದು. ಅಂದರೆ ಸಮಾಜವನ್ನು ಬಾಧಿಸುತ್ತಿರುವ ಸಂಗತಿಗಳು, ಮಹಿಳೆಯರ ಬದುಕನ್ನು ದುಸ್ಥಿತಿಗೆ ತಳ್ಳುತ್ತಿರುವ ವಿಷಯಗಳಲ್ಲಿ ವಲಸೆಯು ಪ್ರಮುಖವಾದ ಸಂಗತಿಯಾಗಿದೆ.

ವಲಸೆ ಕುರಿತು ಸಮಾಜ ವಿಜ್ಞಾನಿಗಳಿಂದ ಅನೇಕ ಚಿಂತನೆಗಳು ಅಭಿವ್ಯಕ್ತಿಗೊಂಡಿವೆ. ಅವು ಆರಂಭದಲ್ಲಿ ವಲಸೆಯನ್ನು ಜನಸಂಖ್ಯೆಯೊಂದಿಗೆ ಬೆಸೆದುಕೊಂಡು ವಿವರಿಸುತ್ತವೆ. ಜನಸಂಖ್ಯೆಯನ್ನು ಕುರಿತು ಚರ್ಚೆ ಮಾಡುವಾಗ ಮೊದಲಿಗೆ ಕೇಳಿ ಬರುವ ಹೆಸರು ಥಾಮಸ್ ರಾಬರ್ಟ್ ಮಾಲ್ಥಸ್. ಈತ ೧೭೯೮ರಲ್ಲಿ ತನ್ನ 'ಆನ್ ಎಸ್ಸೇ ಆನ್ ದಿ ಪ್ರಿನ್ಸಿಫಲ್ ಆಫ್ ಪಾಪ್ಯುಲೇಶನ್' ಕೃತಿಯಲ್ಲಿ ಜನಸಂಖ್ಯೆ ಬೆಳವಣಿಗೆ ಮತ್ತು ಆಹಾರೋತ್ಪಾದನೆಗಳ ನಡುವಿನ ಸಂಬಂಧದ ಆಧಾರದ ಮೇಲೆ ತನ್ನ ಸಿದ್ಧಾಂತವನ್ನು ರೂಪಿಸಿದ. "ಜನಸಂಖ್ಯೆ ಬೆಳವಣಿಗೆಯ ಗತಿ ಮತ್ತು ಜೀವನಾವಶ್ಯಕತೆಗಳ ಉತ್ಪಾದನೆಗಳ ನಡುವಿನ ಸಂಬಂಧವನ್ನು ಆಧರಿಸಿದ. ಜನಸಂಖ್ಯೆ ಬೆಳವಣಿಗೆಯನ್ನು ಪ್ರಜ್ಞಾಪೂರ್ವಕವಾಗಿ ನಿಯಂತ್ರಿಸದಿದ್ದರೆ; ಅದು ಅಭಿವೃದ್ಧಿಗೆ ಮಾರಕವಾಗಿ ಬಿಡಬಹುದೆಂಬ ವಾದವನ್ನು ಅವನು ಗಟ್ಟಿಯಾಗಿ ಮಂಡಿಸಿದ. ಜನಸಂಖ್ಯೆ ಬೆಳವಣಿಗೆಯನ್ನು ತಡೆಯದಿದ್ದರೆ ಅದು ಸಮಾಜದಲ್ಲಿ ಕ್ಷಾಮ-ಡಾಮರ, ಆಹಾರದ ಕೊರತೆಗೆ, ಮಹಾರೋಗಗಳಿಗೆ ಕಾರಣವಾಗುತ್ತದೆ ಎಂಬ ಚಿತ್ರಣವನ್ನು ನೀಡಿದ. ಅವನಿಗೆ ಜನರು ಸ್ವಂತ ತಿಳುವಳಿಕೆಯಿಂದ ಜಾಗೃತರಾಗಿ ಕುಟುಂಬದ ಗಾತ್ರವನ್ನು ಸ್ವ ಇಚ್ಛೆಯಿಂದ ಚಿಕ್ಕದು ಮಾಡಿಕೊಳ್ಳುತ್ತಾರೆಂಬ ಸಂಗತಿಯಲ್ಲಿ ನಂಬಿಕೆಯಿರಲಿಲ್ಲ. ಮಿತಿಮೀರಿದ ಜನಸಂಖ್ಯೆ ಬೆಳವಣಿಗೆಗೆ ಪ್ರಕೃತಿವಿಕೋಪವೇ ಪರಿಹಾರವೆಂಬುದು ಅವನ ನಂಬಿಕೆ. ಅವನ ಪ್ರಕಾರ ಜನಸಂಖ್ಯೆಯು ಅತ್ಯಂತ ವೇಗವಾಗಿ ಬೆಳೆದರೆ ಆಹಾರೋತ್ಪಾದನೆಯ ಬೆಳವಣಿಗೆಯು ಅತ್ಯಂತ ಮಂದಗತಿಯಲ್ಲಿರುತ್ತದೆ. ಆಹಾರೋತ್ಪಾದನೆಯ ಇಳಿಮುಖ ಸೀಮಾಂತ ಪ್ರತಿಫಲ ನಿಯಮಕ್ಕೆ ಒಳಗಾಗುವುದರಿಂದ ಅಲ್ಲಿ ಉತ್ಪನ್ನ ನಿರಂತರವಾಗಿ ಏರಿಕೆಯಾಗುತ್ತಾ ನಡೆಯುವುದಿಲ್ಲ. ಆದರೆ ಜನಸಂಖ್ಯೆಯ ಬೆಳವಣಿಗೆಗೆ ಅಂತಹ ನಿಯಮ ಅನ್ವಯವಾಗದಿರುವುದರಿಂದ ಅದು ತೀವ್ರ ಗತಿಯಲ್ಲಿ ಬೆಳೆಯುತ್ತದೆ. ಇವೆರಡರ ನಡುವಿನ ಅಸಮತೋಲನವು ಅನೇಕ ಆರ್ಥಿಕ,

ಸಾಮಾಜಿಕ, ರಾಜಕೀಯ ಸಮಸ್ಯೆಗಳಿಗೆ ಕಾರಣವಾಗಿ ಬಿಡುತ್ತದೆ ಎಂದು ಅಭಿಪ್ರಾಯ ಪಟ್ಟ" (ಚಂದ್ರಶೇಖರ ಟಿ. ಆರ್., ೨೦೧೨, ಪು. ೧೩).

ಮಾಲ್ಥಸ್ ರೂಪಿಸಿದ್ದ "ಸಂತಾನೋತ್ಪತ್ತಿ ಮತ್ತು ಆಹಾರೋತ್ಪಾದನೆಗಳ ನಡುವಿನ ಸಂಬಂಧವನ್ನು ಅಮರ್ತ್ಯಸೇನ್ ತೀವ್ರವಾಗಿ ವಿಮರ್ಶಿಸಿದ. ಹಸಿವು, ಬರ ಮತ್ತು ಆಹಾರ ನಡುವೆ ಮಾಲ್ಥಸ್ ಏರ್ಪಡಿಸಿದ ಸಂಬಂಧವನ್ನು ಸೇನ್ ಒಪ್ಪುವುದಿಲ್ಲ. ಸೇನ್ ಪ್ರಕಾರ ಆಹಾರೋತ್ಪಾದನೆಗೆ ಸಂಬಂಧಿಸಿದ ಸಮಸ್ಯೆಯಲ್ಲ. ಅದು ವಾಸ್ತವಾಗಿ ಆಹಾರೋತ್ಪಾದನೆಯ ಮೇಲೆ ಸ್ಥಾಪಿಸುವ ಜನರ ಹಕ್ಕುದಾರಿಕೆಯ ಪ್ರಶ್ನೆಯಾಗಿದೆ. ಬರಗಾಲದ ಸಂದರ್ಭದಲ್ಲಿ ಜನರು ಆಹಾರೋತ್ಪಾದನೆಯ ಮೇಲೆ ಸ್ಥಾಪಿಸುವ ಅಧಿಕಾರದಿಂದ ವಂಚಿತರಾಗುವುದರಿಂದ ಹಸಿವು ಉಂಟಾಗುತ್ತದೆ ಮತ್ತು ಜನರು ಅಸು ನೀಗುತ್ತಾರೆ"(ಚಂದ್ರಶೇಖರ ಟಿ. ಆರ್., ೨೦೧೨, ಪು. ೧೩). ಇಂತಹ ದುಸ್ಥಿತಿಯಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಜನರಿಗೆ ವಲಸೆ ಹೋಗುವುದನ್ನು ಬಿಟ್ಟು ಬೇರೆ ದಾರಿ ಕಾಣದು.

ವಿಶ್ವಸಂಸ್ಥೆಯ ಜನಸಂಖ್ಯಾಶಾಸ್ತ್ರ ಬಹುಭಾಷಾ ಶಬ್ದಕೋಶದಲ್ಲಿ "ವಲಸೆಯನ್ನು ಒಂದು ವಿಧವಾದ ಭೌಗೋಳಿಕ, ಪ್ರಾದೇಶಿಕ ಚಲನೆಯಾಗಿದ್ದು, ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಚಲಿಸಿ ಮೂಲ ವಾಸಸ್ಥಳದಿಂದ ಬೇರೆಯಾಗಿ ವಾಸಿಸಬೇಕೆಂಬ ಸ್ಥಳಕ್ಕೆ ನಿವಾಸ ಬದಲಾಯಿಸುವುದೆಂದು ವಾಖ್ಯಾನ್ಯಿಸಲಾಗಿದೆ"(ಒಡೆಯರ್ ಡಿ. ಹೆಗ್ಗಡೆ, ೨೦೦೭, ಪು. ೨೨). ಭೌಗೋಳಿಕ ಅಧ್ಯಯನಗಳು ವಲಸೆ ಪ್ರಕ್ರಿಯೆ ಈ ಹಿಂದೆ ಇತ್ತು, ಈಗಲೂ ಇದೆ ಎಂದು ತಿಳಿಸಿವೆ. ವಲಸೆ ವಾಸಸ್ಥಳದ ಬದಲಾವಣೆ ಚಲಿಸುವ ದೂರ ಮತ್ತು ನೆಲೆಸಿದ ಕಾಲವನ್ನು ಅವಲಂಬಿಸಿದೆ. ವಲಸೆ ಬಗೆಗಳು ಹೀಗಿವೆ: ೧. ಅವಧಿ ಆಧಾರದಲ್ಲಿ, ಅ. ಶಾಶ್ವತ ವಲಸೆ, ಆ. ತಾತ್ಕಾಲಿಕ ವಲಸೆ, ೨. ದೂರ ಆಧಾರದಲ್ಲಿ, ಅ. ಆಂತರಿಕ ವಲಸೆ, ಆ. ಹೊರವಲಸೆ ಎಂದು ವರ್ಗೀಕರಿಸಬಹುದು.

ಯುಎನ್ ಅಂದಾಜಿಸಿದ ಪ್ರಕಾರ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ೨೦೨೫ಕ್ಕೆ, ೧.೧. ಬಿಲಿಯನ್ ಜನರು ವಲಸಿಗರಾಗಿ, ಪ್ರಸ್ತುತ ೧೫೦ ಮಿಲಿಯನ್‌ಗಿಂತಲೂ ಹೆಚ್ಚು ಜನರು ತಮ್ಮ ತಾಯ್ನಾಡಿನಿಂದ ಹೊರಗೆ ವಾಸಿಸುತ್ತಾರೆ ಎಂದು ಅಂದಾಜಿಸಲಾಗಿದೆ. ಇದು ಪ್ರತಿವರ್ಷ ಶೇ. ೨ರಷ್ಟು ಹೆಚ್ಚಾಗುತ್ತಾ ಹೋಗುತ್ತದೆ. ವ್ಯಕ್ತಿಗಳು, ಮನೆಗಳು ಅಥವಾ ಸಮುದಾಯಗಳು ವಲಸೆಯನ್ನು ಒಂದು ಸುಸ್ಥಿರ ಜೀವನವನ್ನು ನಡೆಸಲು ಮತ್ತು ಅವರ ಆರ್ಥಿಕ ಸಾಮರ್ಥ್ಯವನ್ನು ಹೆಚ್ಚಳ ಮಾಡಿಕೊಳ್ಳಲು ಇರುವ ಒಂದು ತಂತ್ರವನ್ನಾಗಿ ಭಾವಿಸಿಕೊಂಡಿವೆ.

ಭಾರತದಲ್ಲಿ ನಗರ ಮತ್ತು ಗ್ರಾಮೀಣ ವಲಸೆ ಎರಡು ವ್ಯಾಪಕವಾಗಿವೆ. ವಿಶೇಷವಾಗಿ ಗ್ರಾಮೀಣ ವಲಸೆಯನ್ನು ಗಮನಿಸುವುದಾದರೆ ಈ ಪ್ರದೇಶದ ಜನ ವಲಸೆ ಹೋಗುವುದು ಎಲ್ಲ ಕಡೆಗಳಲ್ಲಿ ಕಂಡುಬರುವ ಸಂಗತಿ. ಇದಕ್ಕೆ ಅನೇಕ ಕಾರಣಗಳಿವೆ. ಅಂದರೆ ಗ್ರಾಮೀಣ ಜನತೆ

ಕೃಷಿಯನ್ನು ಅವಲಂಬಿಸಿರುವುದು. ಕೃಷಿ ಮಳೆ ಮೇಲೆ ನಿಂತಿದೆ. ಮಳೆ ಕಾಡನ್ನು ಅವಲಂಬಿಸಿದೆ. ಜಾಗತೀಕರಣದಿಂದಾಗಿ ಕಾರ್ಖಾನೆಗಳ ವೃದ್ಧಿ ಮತ್ತು ಬಂಡವಾಳ ಆರ್ಥಿಕತೆ ಕಾಡು ಮತ್ತು ಕೃಷಿ ಭೂಮಿಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡ ಪರಿಣಾಮ ಮಳೆ ಕಡಿತಗೊಂಡಿದೆ. ಅಂದರೆ ಕೃಷಿ ಅವಲಂಬಿತ ಜನರು ಜೀವನೋಪಾಯಕ್ಕಾಗಿ ಕಷ್ಟ ಪಡುತ್ತಿದ್ದಾರೆ. ಅಂದರೆ ಆಹಾರ, ನೀರಿಗಾಗಿ ಹೆಣಗುತ್ತಿದ್ದಾರೆ. ಗ್ರಾಮೀಣ ಜನರಿಗೆ ಕೆಲಸ ಒದಗಿಸಲು ಉದ್ಯೋಗ ಖಾತ್ರಿಯು ಸೇರಿದಂತೆ ಅನೇಕ ಯೋಜನೆಗಳು ಬಂದವು. ಮತ್ತೊಂದೆಡೆ ಕೃಷಿ ಕೂಲಿ ಕಡಿಮೆಯಾಯಿತು ಮತ್ತು ಗ್ರಾಮೀಣ ನಿರುದ್ಯೋಗದ ಪ್ರಮಾಣ ಹೆಚ್ಚಿತು ಮತ್ತು ಗ್ರಾಮೀಣ-ನಗರ ವಲಸೆಯು ಹೆಚ್ಚಿತು. ಇಷ್ಟು ಮಾತ್ರವಲ್ಲದೆ ಜಾತಿ, ಅಂತರ್‌ಜಾತಿ ವಿವಾಹ, ಸಂಘರ್ಷ(ವ್ಯಾಜ್ಯ), ಶಿಕ್ಷಣದಿಂದ ದೊರೆತ ಸಂಘಟಿತ ವಲಯದ ಉದ್ಯೋಗ ಇತ್ಯಾದಿಗಳು ಜನರನ್ನು ವಲಸೆಗೆ ತಳ್ಳುವ ಅಂಶಗಳಾಗಿವೆ. ಇದರಿಂದ ಅರ್ಥವಾಗುವುದೇನೆಂದರೆ ವಲಸೆ ಮತ್ತು ಜೀವನಾಧಾರ ಒಂದಕ್ಕೊಂದು ಸಂಬಂಧಪಟ್ಟಿವೆ. ಮಾನವನ ಸಂಚಲನೆಗೆ ಜೀವನಾಧಾರವೇ ಮೂಲ ಲಕ್ಷಣವಾಗಿದೆ.

ಮಹಿಳೆಯು ವಲಸೆ ಕಾರ್ಮಿಕರ ಕುಟುಂಬದ ಸದಸ್ಯಳಾಗಿ ವಲಸೆ ಹೋಗುವುದುಂಟು. ವಿಶೇಷವಾಗಿ ವಲಸಿಗನನ್ನು ವಿವಾಹವಾಗಿ ವಲಸೆ ಹೋಗುವುದು ಮಹಿಳೆಗೆ ಹೆಚ್ಚು ಅನ್ವಯಿಸುವುದು. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಮಹಿಳೆಯರು ಎಲ್ಲೆ ವಲಸೆ ಹೋದವರು. ಅದಕ್ಕೆ ಕಾರಣ ಜೀವನಾಧಾರವಾಗದೆ ಪಿತೃಪ್ರಧಾನ ಕುಟುಂಬಗಳ ಮುಂದುವರಿಕೆಗಾಗಿ ಸ್ಥಾನ ಬದಲಾಯಿಸುವುದು ಕಂಡುಬರುತ್ತದೆ. ಜೀವನಾಧಾರ ನೆಲೆಯಿಂದ ವಲಸೆ ಹೋಗುವವರನ್ನು ಗುರುತಿಸುವುದಾರೆ ಕಟ್ಟಡ ನಿರ್ಮಾಣದ ಕಾರ್ಮಿಕರು, ಮನೆಗೆಲಸದವರು, ಕೃಷಿ ಕೆಲಸ ಮಾಡುವವರು, ಗುತ್ತಿಗೆ ಕಾರ್ಮಿಕರು, ನರ್ಸುಗಳು, ಶಿಕ್ಷಕಿಯರು ಹಾಗೂ ಸ್ವಲ್ಪಮಟ್ಟಿಗೆ ವೈದ್ಯರು, ಲೆಕ್ಕ ಪರಿಶೋಧಕರು ವಲಸೆ ಹೋಗುತ್ತಾರೆ. ಇಂತಹದರಲ್ಲಿ ಮಹಿಳೆ ವಲಸೆ ಹೋದ ಮನೆಯ ಸದಸ್ಯಳಾಗಿ ಇರುತ್ತಾಳೆ. ಹಾಗಾಗಿ ಗ್ರಾಮೀಣ-ನಗರ ವಲಸೆ ಮತ್ತು ಅಂತಾರಾಷ್ಟ್ರೀಯ ವಲಸೆಗಳಲ್ಲಿ ಮಹಿಳೆಯರು ಸೇರಿರುವರು. ಹಾಗಾದರೆ ವಲಸೆ ಸಿದ್ಧಾಂತಗಳು ಲಿಂಗಸಂಬಂಧವನ್ನು ಒಳಗೊಂಡ ಬಗೆಯು ಸಹ ಕುತೂಹಲಕಾರಿಯಾದುದು.

೧೯೮೦ಕ್ಕಿಂತ ಮುಂಚೆ ವಲಸೆ ಪುರುಷರಿಗೆ ಸಂಬಂಧಿಸಿದ ಸಿದ್ಧಾಂತವಾಗಿತ್ತು. ಅನಂತರ "ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಉದ್ಯೋಗದ ನಿಮಿತ್ತ ಜನರು ಚಲನೆ ಮಾಡುತ್ತಿದ್ದರು. ಅದರಲ್ಲಿ ಪುರುಷರು ಪ್ರಧಾನವಾಗಿದ್ದರು"(ಉಧೃತ: ಜಸ್ಪಿನಾ ಡುಗ್ಗಾಬಜಾ, ೨೦೧೨, ಪು.೪೪) ಎಂದಿರುವರು. ೮೦ರ ನಂತರ "ವಲಸೆಯು ದ್ವಿಮುಖ ನೆಲೆಯನ್ನು ಹೊಂದಿದೆ. ಅಂದರೆ ನಗರ, ಪುರುಷ ಕಾರ್ಮಿಕರನ್ನು ಗ್ರಾಮೀಣದಿಂದ ಪಡೆದುಕೊಳ್ಳುತ್ತದೆ. ಇದೇ ಸಮಯಕ್ಕೆ ಗ್ರಾಮೀಣ-ನಗರದ ಲಿಂಗಸಂಬಂಧಿ ಸಾಂಪ್ರದಾಯಿಕ ಶ್ರಮವಿಭಜಿತ

ಕೆಲಸಗಳು ಕಾಣೆಯಾದವು. ಹಾಗಾಗಿ ಇದು ಲಿಂಗವ್ಯವಸ್ಥೆ ತಟಸ್ಥವಾದ ಪ್ರಕ್ರಿಯೆಯಾಗಿದೆ" (ಹ್ಯಾರಿಸ್ ಜೆ. ಆರ್. ಮತ್ತು ಟೊಡಾರೊ ಎಂ.ಪಿ., ೧೯೭೦, ಪು.೧೨೭). ಮತ್ತೆ ಕೆಲ ಸಂಶೋಧಕರು ವಲಸೆಯು ಜನರ ಚಲನೆಯಾಗಿದೆ, ಇದು ಲಿಂಗಸಂಬಂಧಿ ನೆಲೆಯಿಂದ ಕೂಡಿದೆ, ಏಕೆಂದರೆ ಮಹಿಳೆ ಮತ್ತು ಪುರುಷರು ಬೇರೆ ಬೇರೆ ಕಾರಣಗಳಿಗಾಗಿ ವಲಸೆ ಹೋಗುತ್ತಾರೆ. ವಲಸೆ ಮಹಿಳೆ ಮತ್ತು ಪುರುಷರನ್ನು ಕಳುಹಿಸಲು ಮತ್ತು ಬರ ಮಾಡಿಕೊಳ್ಳುವುದು ಬೇರೆ ತೆರನಾದ ಸಂಘರ್ಷವನ್ನು ಮಾಡಿಕೊಡುತ್ತದೆ. ಆಂತರಿಕ ವಲಸೆಯು ಸಬಲೀಕರಣವನ್ನು ಮಾಡುತ್ತದೆ ಅಥವಾ ಅಸಹಾಯಕತೆಗೆ, ದೌರ್ಜನ್ಯಕ್ಕೆ ಈಡು ಮಾಡುತ್ತದೆ. ಇದೇ ತೆರನಾಗಿ ವಲಸೆ ಹೋಗುತ್ತಿರುವ ಪುರುಷ ಅಥವಾ ಮಹಿಳೆಯ ಕುಟುಂಬದ ಸ್ಥಾನಮಾನ, ಪಾತ್ರದ ಪ್ರಭಾವ ಮತ್ತು ಬದಲಾವಣೆ ಎರಡೂ ಇರುವುದನ್ನು ಗುರುತಿಸಿದರು.

ಗ್ರಾಮೀಣ ಕೃಷಿ ಕುಟುಂಬಗಳ ವಲಸೆಯು ಸಾಮಾಜಿಕ-ಸಾಂಸ್ಕೃತಿಕ ಮತ್ತು ಆರ್ಥಿಕ, ಲಿಂಗ ಮತ್ತು ವಯಸ್ಸು, ವಲಸಿಗರ ಉದ್ಯೋಗ ಸಾಧ್ಯತೆಗಳು, ಮನೆಯನ್ನು ನಿರ್ವಹಣೆ ಮಾಡಲು ಕಳುಹಿಸಬೇಕಾದ ವೆಚ್ಚವನ್ನು ಆಧರಿಸಿದೆ. ವಲಸೆ ಕುರಿತಾದ ಪ್ರಮುಖ ಬೆಳವಣಿಗೆ ಎಂದರೆ ಶಿಕ್ಷಿತ ಯುವಜನರು ಗ್ರಾಮೀಣ ಪ್ರದೇಶದಿಂದ ನಗರಕ್ಕೆ ವಲಸೆ ಹೋಗುತ್ತಾರೆ. ಆದರೆ ಈ ಪ್ರಕ್ರಿಯೆಯು ಗ್ರಾಮೀಣ ಮಹಿಳೆಯರು ಮಕ್ಕಳನ್ನು, ಅಶಿಕ್ಷಿತರನ್ನು, ಹಿರಿಯರನ್ನು, ಯಾರು ಮನೆಯನ್ನು ಸುಸ್ಥಿರವಾಗಿ ನಡೆಸಿಕೊಂಡು ಹೋಗಲು ಹೆಣಗಾಡುತ್ತಾರೋ ಅಥವಾ ಸವಾಲುಗಳನ್ನು ಎದುರಿಸುತ್ತಾರೋ ಮತ್ತು ಗ್ರಾಮೀಣ ಆರ್ಥಿಕತೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸುತ್ತಾರೋ ಅವರನ್ನು ಸಿದ್ಧಾಂತಗಳು ಒಳಗೊಳ್ಳುವುದಿರುವುದು ಕಂಡುಬರುತ್ತದೆ.

ಪುರುಷ ವಲಸಿಗರು ಗ್ರಾಮೀಣ ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುವುದರಿಂದ ಜಂಡರ್ ಶ್ರಮವಿಭಜನೆಯಲ್ಲಿ ಬದಲಾವಣೆಗಳು ಆದವು, ಅದರಲ್ಲೂ ಮಹಿಳೆಯ ಮೇಲೆ ಕೃಷಿ ಕೆಲಸಗಳು ಹೆಚ್ಚಾದವು. ಇದರಿಂದ ಮನೆಯ ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಮಹಿಳೆಯ ಪಾತ್ರ ಮತ್ತು ಜವಾಬ್ದಾರಿ ಹೆಚ್ಚುತ್ತಾ ಹೋಯಿತು, ವಿಸ್ತೃತ ಕುಟುಂಬಗಳಲ್ಲಿ ಅಂತರ ಅವಲಂಬನೆ ಹೆಚ್ಚಾಗುತ್ತಾ ಮಹಿಳೆಯರಿಗೆ ಅವಕಾಶ ಲಭಿಸಿತು. ಆದರೂ ಸಹ ಪುರುಷಪ್ರಧಾನ ವ್ಯವಸ್ಥೆ ಮಹಿಳೆಯ ಮೇಲೆ ಹೆಚ್ಚಿನ ನಿಯಂತ್ರಣ, ಕಡಿಮೆ ಸ್ವಾಯತ್ತತೆ, ನಿರ್ಧಾರ ಕೈಗೊಳ್ಳುವಿಕೆಗೆ ಕಡಿಮೆ ಅಧಿಕಾರ ಮತ್ತು ಹೆಚ್ಚಿನ ಕೆಲಸದ ಹೊರೆಯನ್ನು ನೀಡಿತು. ಈ ತೆರನಾದ ಪ್ರಕರಣಗಳು ಪುರುಷರು ವಲಸೆ ಹೋದ ನಂತರ ಮನೆಯ ಜವಾಬ್ದಾರಿಯನ್ನು ಮನೆಯ ಇತರ ಪುರುಷ ಸದಸ್ಯರಾದ ಮಾವ ಅಥವಾ ಭಾವ/ಮೈದುನ ನಿರ್ವಹಿಸುತ್ತಿದ್ದರು. ಇಂತಹ ಪ್ರಕರಣಗಳಲ್ಲಿ ಪುರುಷ ಸಂಬಂಧಿಕರು ಮಹಿಳೆಯ ಮೇಲೆ ನಿಯಂತ್ರಣ, ಮನೆಯ ಹಣದ ಹರಿವಿನ ಮೇಲೆ ನಿಯಂತ್ರಣವನ್ನು ಮಾಡುತ್ತಿದ್ದರು.

ಈ ಚರ್ಚೆಯಿಂದ ತಿಳಿದುಬರುವುದೇನೆಂದರೆ ವಲಸೆ ಸಂಬಂಧಿತ ಜ್ಞಾನದಲ್ಲಿ ಮಹಿಳೆ ಮತ್ತು ಪುರುಷರಿಗೆ ಸಮಾನ ಗಮನವನ್ನು ಪರಿಗಣಿಸಿಲ್ಲ. ಅಂದರೆ ವಲಸೆಯಲ್ಲಿ ಮಹಿಳೆಯರನ್ನು ಸಮಾನವಾದ ಪಾತ್ರಧಾರಿಗಳನ್ನಾಗಿ ನೋಡಿಲ್ಲ. ವಲಸೆ ಮಹಿಳೆಯರ ಸಂಖ್ಯೆಯನ್ನು ಸರಿಯಾಗಿ ದಾಖಲಿಸಿಲ್ಲ. ವಲಸೆಯಲ್ಲಿ ಲಿಂಗಸಂಬಂಧಿ ಆಯಾಮವನ್ನು ನಿರ್ಲಕ್ಷಿಸಿರುವುದು ದತ್ತಾಂಶಗಳ ಸಂಗ್ರಹ ಮತ್ತು ವಿಶ್ಲೇಷಣೆಯಲ್ಲಿ ಪ್ರತಿಫಲಿಸುತ್ತದೆ ಎಂದು ಹೇಳಬಹುದು.

ವಲಸೆ ಮತ್ತು ಜೀವನಾಧಾರದಲ್ಲಿ ಲಿಂಗವನ್ನು ನಿರ್ಲಕ್ಷ್ಯ ಮಾಡಿರುವುದರಿಂದ ನೀತಿಗಳು ವಿವಿಧ ಗುಂಪುಗಳ ಅಗತ್ಯತೆ, ಮೂಲಭೂತ ಸೌಲಭ್ಯಗಳನ್ನು ಗುರುತಿಸುವಲ್ಲಿ ವಿಫಲವಾಗುತ್ತವೆ. ಈ ರೀತಿಯ ಸ್ಥಿತಿಯಿಂದಾಗಿ ವಲಸೆ ಮತ್ತು ಗ್ರಾಮೀಣ ಜೀವನಾಧಾರದ ವಿವಿಧ ಮುಖಗಳು ವ್ಯಕ್ತವಾಗದೆ ಹಾಗೇ ಉಳಿದಿವೆ. ಲಿಂಗವ್ಯವಸ್ಥೆ ಮತ್ತು ಆರ್ಥಿಕ ನೀತಿಗಳ ಬಗ್ಗೆ ಕೆಲಸ ಮಾಡಿರುವ ಸಂಶೋಧಕರಾದ ಡೈನಿ ಎಲ್‌ಸನ್ ತಮ್ಮ ಸಿದ್ಧಾಂತ ರೂಪಿಕೆಯಲ್ಲಿ ವಲಸೆ ನೀತಿಗಳು 'ಪುರುಷರ ಪರವಾಗಿವೆ' ಎಂದು ಹೇಳಿದ್ದಾರೆ. ಗ್ರಾಮೀಣ ಪ್ರದೇಶದ ಜೀವನಾಧಾರದ ಪ್ರಮುಖ ಮೂಲ ಕೃಷಿ. ಈ ಕೃಷಿಯು ಪುರುಷರ ಪರವಾಗಿ, ಲಿಂಗ ಸಂಬಂಧಿ ಕುರುಡುತನದಿಂದ ಕೂಡಿದೆ. ಸಾಮಾನ್ಯವಾಗಿ ಕೃಷಿಕರು ಎಂದರೆ ಪುರುಷರು ಎಂದೇ ನೀತಿ ರೂಪಿಸುವವರು ಎಂದು ಅರ್ಥೈಸಿಕೊಳ್ಳುತ್ತಾರೆ. ಆದ್ದರಿಂದ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಳ ಮಾಡುವ ಕೃಷಿ ಉಪಕರಣಗಳು, ಮೌಲ್ಯಯುತ ಸಂಪನ್ಮೂಲಗಳನ್ನು ಅಂದರೆ ಭೂಮಿ, ಕ್ರೆಡಿಟ್ ಮತ್ತು ಇತರ ಕೃಷಿ ಸಾಧನಗಳನ್ನು, ತಂತ್ರಜ್ಞಾನ, ವಿಸ್ತರಣೆ, ತರಬೇತಿ ಮತ್ತು ಸೇವೆಗಳಲ್ಲಿ ಲಿಂಗಸೂಕ್ಷ್ಮತೆ ತರಲು ಕಷ್ಟವಾಗುತ್ತದೆ.

ಇಆರ್‌ಪಿ  ನಡೆಸಿದ ಅಧ್ಯಯನದ ಪ್ರಕಾರ ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಕೃಷಿ ವಲಯದಲ್ಲಿ ಮಹಿಳೆಯರು ಕೊನೆಯ ಫಲಾನುಭವಿಗಳಾಗಿದ್ದಾರೆ ಎಂದು ತಿಳಿಸಿದೆ. ಲಿಂಗ ಸಂಬಂಧ ಮಾಹಿತಿಯ ಕೊರತೆ, ಕೃಷಿಗೆ ಮಹಿಳೆಯರ ಕೊಡುಗೆಯನ್ನು ತುಂಬಾ ಕನಿಷ್ಠವಾಗಿ ಅರ್ಥ ಮಾಡಿಕೊಂಡಿರುವುದರಿಂದ, ಅವರು ನಿಗದಿತ ಅಗತ್ಯಗಳನ್ನು ಅಭಿವೃದ್ಧಿ ಯೋಜನೆಗಳಲ್ಲಿ ನಿರ್ಲಕ್ಷಿಸಲಾಗಿದೆ. ಜಗತ್ತಿನಲ್ಲಿ ಮಹಿಳೆಯರು ಆಹಾರವನ್ನು ಉತ್ಪಾದಿಸುವವರು ಮತ್ತು ಒದಗಿಸುವವರು ಆಗಿದ್ದಾರೆ. ಆದರೆ ಅಭಿವೃದ್ಧಿ ಭಾಗೀದಾರಿಕೆಯಲ್ಲಿ ಮಹಿಳೆಯರು 'ಅಗೋಚರ'ವಾಗಿದ್ದಾರೆ ಎಂಬುದನ್ನು ತೋರಿಸುತ್ತವೆ.

ಸಮಕಾಲೀನ ವಲಸೆಯ ಕುರಿತು ಅಧ್ಯಯನಗಳು ಹೆಚ್ಚಾಗಿವೆ. ಆದರೆ ಅದರಲ್ಲಿ ಲಿಂಗ ಸಂಬಂಧಿ ಸಂಗತಿಗಳು ಕಾಣೆಯಾಗಿದೆ ಎಂಬ ಅಂಶವನ್ನು ಸ್ತ್ರೀವಾದಿ ಸಂಶೋಧಕರು ಗುರುತಿಸಿದರು. ಲಿಂಗವ್ಯವಸ್ಥೆ ಕುರಿತ ಸಾಂಪ್ರದಾಯಿಕ ವ್ಯಾಖ್ಯೆ, ಸಂಕುಚಿತ ದೃಷ್ಟಿಕೋನಗಳಿಗೆ

ಸವಾಲುಗಳನ್ನು ಹಾಕಿ ವಲಸೆಯನ್ನು ಲಿಂಗಸಂಬಂಧ ನೆಲೆಯಿಂದ ಪರೀಕ್ಷಿಸಿಗೆ ಒಳಪಡಿಸಿ ವಿಶ್ಲೇಷಿಸುವ ಅಗತ್ಯವಿದೆ ಎಂದು ವಾಯ್ಟ್‌ಹೆಡ್ ಪ್ರತಿಪಾದಿಸುತ್ತಾರೆ.

ದೇಶದಲ್ಲಿ ನೀತಿಗಳನ್ನು ಮಾಡಲು ಮತ್ತು ಅನುಷ್ಠಾನಗೊಳಿಸಲು ಕುಟುಂಬ, ಸಮುದಾಯ ಮತ್ತು ರಾಷ್ಟ್ರ ಮಟ್ಟದಲ್ಲಿ ಲಿಂಗವ್ಯವಸ್ಥೆಯ ಆಯಾಮಗಳನ್ನು ವ್ಯವಸ್ಥಿತವಾಗಿ, ವಿಶ್ಲೇಷಿಸಿದಾಗ ಮಾತ್ರ ಸಾಧ್ಯ. ಆದ್ದರಿಂದ ಈ ಅಧ್ಯಯನದ ಗುರಿ ವಲಸೆಯು ಗ್ರಾಮೀಣ ಕುಟುಂಬಗಳ ಮೇಲೆ ಯಾವ ತೆರನಾದ ಪರಿಣಾಮವನ್ನು ಬೀರುತ್ತದೆ ಎಂಬುದನ್ನು ವಿಶ್ಲೇಷಿಸುವುದಾಗಿದೆ.

### ೧.೨. ಅಧ್ಯಯನದ ಉದ್ದೇಶ

೧. ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರಕ್ಕೆ ಇರುವ ಅಂತರ ಸಂಬಂಧವನ್ನು ಶೋಧಿಸುವುದು.

೨. ವಲಸೆ ಮನೆಗಳ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸಂಗತಿಗಳನ್ನು ತಿಳಿಯುವುದು.

೩. ಯಾರು ಗ್ರಾಮೀಣ ಪ್ರದೇಶದಿಂದ ವಲಸೆ ಹೋಗುತ್ತಾರೆ, ಅವರ ಚಲನೆಗೆ ಪ್ರೇರಣೆಯಾದ ಅಂಶಗಳು ಯಾವವು? ಎಂಬುದನ್ನು ಗುರುತಿಸುವುದು.

೪. ವಲಸೆಯು ಮಹಿಳೆಯರ ಮನೆ ಜವಾಬ್ದಾರಿಯನ್ನು ಕಡಿಮೆಗೊಳಿಸುತ್ತದೆಯೇ? ಅಥವಾ ಹೆಚ್ಚಿಸುತ್ತದೆಯೆ? ಇಂತಹ ಸ್ಪರ್ಧಾತ್ಮಕ ಪಾತ್ರಗಳನ್ನು ಅವರು ಹೇಗೆ ನಿರ್ವಹಿಸುತ್ತಾರೆ ಎಂಬುದನ್ನು ಅರಿಯುವುದು.

೫. ಮಹಿಳೆಯರು ಮತ್ತು ಪುರುಷರ ಮೇಲೆ ವಲಸೆ ಬೀರುವ ಪರಿಣಾಮಗಳನ್ನು ಶೋಧಿಸುವುದು.

### ೧.೩. ಅಧ್ಯಯನ ಕ್ಷೇತ್ರ ಮತ್ತು ವ್ಯಾಪ್ತಿ

ಹೈದರಾಬಾದ್ ಕರ್ನಾಟಕ ಭಾಗವು ರಾಜ್ಯದಲ್ಲಿ ಅತ್ಯಂತ ಹಿಂದುಳಿದ ಪ್ರದೇಶವಾಗಿದೆ. ಇದಕ್ಕೆ ಚಾರಿತ್ರಿಕ ಹಿನ್ನೆಲೆ ಇದೆ. ಕ್ರಿ.ಶ. ೧೮೫೦-೧೯೫೬ರವರೆಗೆ ಈ ಭಾಗವು ರಾಜಕೀಯ ಅಸ್ಥಿರತೆ, ಸಾಮಾಜಿಕ ವಿಷಮತೆ ಹಾಗೂ ಆರ್ಥಿಕ ದುಸ್ಥಿತಿಯನ್ನು ಅನುಭವಿಸಿತು. ದೇಶಕ್ಕೆ ೧೯೪೭ರ ಅಗಸ್ಟ್ ೧೫ರಂದು ಸ್ವಾತಂತ್ರ್ಯ ದೊರೆತರೂ ಹೈದರಾಬಾದ್ ನಿಜಾಮನ ಆಳ್ವಿಕೆಯಿಂದಾಗಿ ಈ ಭಾಗಕ್ಕೆ ೧೯೪೮ ಸೆಪ್ಟೆಂಬರ್ ೧೮ರಂದು ಸ್ವಾತಂತ್ರ್ಯ ಪಡೆಯಿತು. ಆಗ ಕರ್ನಾಟಕವು ವಿವಿಧ ವಿಭಾಗಗಳಲ್ಲಿ ವಿಂಗಡನೆಗೊಂಡಿತು. ಅವುಗಳೆಂದರೆ ಮುಂಬೈ ಪ್ರಾಂತ್ಯ, ಮದ್ರಾಸ್ ಪ್ರಾಂತ್ಯ, ಮೈಸೂರು ಪ್ರಾಂತ್ಯ, ಕೊಡುಗು ಪ್ರಾಂತ್ಯ ಹಾಗೂ ಹೈದರಾಬಾದ್ ಪ್ರಾಂತ್ಯವಾಗಿತ್ತು. ಹೀಗೆ ಐದು ಘಟಕಗಳಾಗಿ ಹಂಚಿಹೋಗಿದ್ದ ಪ್ರದೇಶಗಳು ೧೯೫೬ರಲ್ಲಿ ಭಾಷಾವಾರು ಪ್ರಾಂತ್ಯದ ರಚನೆಯಲ್ಲಿ ಏಕೀಕೃತ(ಮೈಸೂರು) ಕರ್ನಾಟಕವಾಗಿ ರೂಪು ತಾಳಿತು. ಇದರಲ್ಲಿ ಹೈದರಾಬಾದ್ ಕರ್ನಾಟಕ ತೀರಾ ಹಿಂದುಳಿದ ಪ್ರದೇಶವಾಗಿದು, ಪ್ರಾದೇಶಿಕ

ಅಸಮಾನತೆ ಜೊತೆಗೆ ಹಲವು ಕ್ಷೇತ್ರಗಳಲ್ಲಿ ಅಭಿವೃದ್ಧಿಯಿಂದ ವಂಚಿತರಾಗಿರುವುದನ್ನು ಹಲವಾರು ಅಧ್ಯಯನಗಳು ದೃಢಪಡಿಸಿವೆ.

ಇದನ್ನು ಮನಗಂಡ ಕರ್ನಾಟಕ ಸರ್ಕಾರವು ೨೦೦೦ನೇ ಇಸ್ವವಿಯಲ್ಲಿ ಡಿ.ಎಂ. ನಂಜುಡಪ್ಪ ಅವರ ಅಧ್ಯಕ್ಷತೆಯಲ್ಲಿ ಪ್ರಾದೇಶಿಕ ಅಸಮಾನತೆ ಕುರಿತ ಅಧ್ಯಯನ ಸಮಿತಿ ರಚಿಸಿತು. ಈ ಸಮಿತಿಯು ತನ್ನ ವರದಿಯಲ್ಲಿ ಈ ಭಾಗದ ಪ್ರಾದೇಶಿಕ ಅಸಮಾನತೆ ಮತ್ತು ಅಭಿವೃದ್ಧಿಯನ್ನು ಗುರುತಿಸಿ ಅನೇಕ ಶಿಫಾರಸ್ಸುಗಳನ್ನು ಮಾಡಿತು. ಇದಲ್ಲದೆ ೨೦೧೩ರಲ್ಲಿ ಈ ಭಾಗಕ್ಕೆ ಸಂವಿಧಾನದ ೧೧೮ನೇ ತಿದ್ದುಪಡಿ ಕಾಯ್ದೆಯಿಂದ ಸಂವಿಧಾನದ ೩೭೧(ಜೆ) ಕಾಯಿದೆ ಜಾರಿಗೆ ಬಂದಿತು. ಆದರೆ ಇಂದಿಗೂ ಇವುಗಳು ನಿರೀಕ್ಷಿತ ಮಟ್ಟದಲ್ಲಿ ಅನುಷ್ಠಾನಗೊಂಡಿಲ್ಲ. ಈ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕ ಕುರಿತು ಅಧ್ಯಯನ ಮಾಡಬೇಕಾದ ಅವಶ್ಯಕತೆಯಿದೆ. ಇದನ್ನು ಸಮಗ್ರವಾಗಿ ಅಧ್ಯಯನ ಮಾಡದೆ ಒಂದು ಜಿಲ್ಲೆಯನ್ನು ಮಾತ್ರ ಈ ಅಧ್ಯಯನ ಕೇಂದ್ರೀಕರಿಸಿದೆ. ಅಂದರೆ ಹೈದರಾಬಾದ್ ಕರ್ನಾಟಕ ಪ್ರದೇಶವು ೬ ಜಿಲ್ಲೆಗಳನ್ನು ಒಳಗೊಂಡಿದೆ. ಅವುಗಳೆಂದರೆ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿ.

ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯನ್ನು ಮಾತ್ರ ತನ್ನ ಅಧ್ಯಯನ ವ್ಯಾಪ್ತಿಯಾಗಿ ಹೊಂದಿದೆ. ಬಳ್ಳಾರಿ ಜಿಲ್ಲೆಗೆ ಐತಿಹಾಸಿಕ ಪ್ರಾಮುಖ್ಯತೆಯಿದೆ. ಇದು ಕರ್ನಾಟಕದ ಪೂರ್ವ ಭಾಗದಲ್ಲಿದೆ. ಡಿ.ಎಂ. ನಂಜುಂಡಪ್ಪ ವರದಿಯನ್ವಯ ಬಳ್ಳಾರಿ ಹಿಂದುಳಿದ ಜಿಲ್ಲೆಯಾಗಿದೆ. ಬಳ್ಳಾರಿ ಜಿಲ್ಲೆಯು ಸಾಮಾಜಿಕ, ಆರ್ಥಿಕ ಅಸಮತೋಲನದಿಂದ ಕೂಡಿದ ವಿವಿಧ ರಾಜಕೀಯ ಹಿತಾಸಕ್ತಿಗಳನ್ನು ಒಳಗೊಂಡಿರುವ ತನ್ನದೇ ಆದ ವಿಶಿಷ್ಟ ಆಡಳಿತ ವ್ಯವಸ್ಥೆ ಹೊಂದಿರುವ ಪ್ರದೇಶಗಳ ಸೇರ್ಪಡೆಯೊಂದಿಗೆ ಒಂದು ಸಮಗ್ರ ಜಿಲ್ಲೆಯಾಗಿ ಹೊರಹೊಮ್ಮಿದೆ. ಜಿಲ್ಲೆಯ ಒಟ್ಟು ಪ್ರದೇಶ ೮೪೪೭ ಚ.ಕಿ.ಮೀ. ಇದರ ಉತ್ತರಕ್ಕೆ ರಾಯಚೂರು, ಪಶ್ಚಿಮಕ್ಕೆ ಕೊಪ್ಪಳ, ದಕ್ಷಿಣಕ್ಕೆ ಚಿತ್ರದುರ್ಗ ಮತ್ತು ದಾವಣಗೆರೆ ಜಿಲ್ಲೆಗಳನ್ನು ಹಾಗೂ ಪೂರ್ವಕ್ಕೆ ಅನಂತಪುರ – ಕರ್ನೂಲ್ ಜಿಲ್ಲೆಗಳು ಇವೆ. ಬಳ್ಳಾರಿಯು ರಾಜ್ಯದ ಜನಸಂಖ್ಯೆಯಲ್ಲಿ ಆರನೆಯ ದೊಡ್ಡ ಜಿಲ್ಲೆ ಹಾಗೂ ಭೂಪ್ರದೇಶದಲ್ಲಿ ಏಳನೆಯ ಸ್ಥಾನದಲ್ಲಿದೆ. ಆಡಳಿತದ ಅನುಕೂಲಕ್ಕಾಗಿ ಜಿಲ್ಲೆಯನ್ನು ೧೧ ತಾಲೂಕುಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ ಕಂಪ್ಲಿ, ಕೊಟ್ಟೂರು ಮತ್ತು ಕುರುಗೋಡು ಮೂರು ಹೊಸ ತಾಲೂಕುಗಳು ಹಾಗೂ ಹರಪನಹಳ್ಳಿ ಒಂದು ತಾಲೂಕು ೨೦೧೯ರಲ್ಲಿ ದಾವಣಗೆರೆ ಜಿಲ್ಲೆಯಿಂದ ಬಳ್ಳಾರಿ ಜಿಲ್ಲೆಗೆ ಹೊಸದಾಗಿ ಸೇರ್ಪಡೆಯಾಗಿದೆ. ಅಂದರೆ ಒಟ್ಟು ೪ ತಾಲೂಕುಗಳು ಇತ್ತೀಚಿನವು. ಅಧ್ಯಯನದ ಖಚಿತತೆ ದೃಷ್ಟಿಯಿಂದ ೪ ತಾಲೂಕುಗಳ ಮಾಹಿತಿಯನ್ನು ಪ್ರತ್ಯೇಕವಾಗಿ ನಮೂದಿಸಿಲ್ಲ. ಏಕೆಂದರೆ ೨೦೧೧ರ ಜನಗಣತಿಯಂತೆ ೭ ತಾಲೂಕುಗಳ ಮಾಹಿತಿ ಮಾತ್ರ ಲಭ್ಯವಿದ್ದು, ಈ ಅಧ್ಯಯನವು ಸಹ ಈ ತಾಲೂಕುಗಳನ್ನು ಮಾತ್ರ ಕೇಂದ್ರೀಕರಿಸಿದೆ. ಇದು ಅಧ್ಯಯನದ ಮಿತಿಯಾಗಿದೆ.

೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯು ೧೧ ಪಟ್ಟಣಗಳನ್ನು ಮತ್ತು ೫೨೪ ಹಳ್ಳಿಗಳನ್ನು ಹೊಂದಿದೆ. ಒಟ್ಟು ಸಾಕ್ಷರತೆ ದರ ಶೇ. ೬೮ರಷ್ಟು ಇದೆ. ಅದರಲ್ಲಿ ಪುರುಷರ ಸಾಕ್ಷರತೆ ದರವನ್ನು ಮಹಿಳೆಯರ ಸಾಕ್ಷರತೆ ದರಕ್ಕೆ ಹೋಲಿಸಿದರೆ ಶೇ. ೧೯ರಷ್ಟು ಹೆಚ್ಚಿದೆ. ಲಿಂಗಾನುಪಾತ ೧೦೦೦ಕ್ಕೆ ೯೭೮ ಇದೆ. ಅದರಲ್ಲಿ ಸಂಡೂರು ತಾಲೂಕು ಜಿಲ್ಲೆಯಲ್ಲಿಯೇ ಅತಿ ಕಡಿಮೆ ಅಂದರೆ ೯೪೫ ಲಿಂಗಾನುಪಾತವನ್ನು ಹೊಂದಿದೆ. ಜನನದ ಜೀವಿತಾವಧಿ ೬೦.೩೨ ರಷ್ಟು. ಶಿಶು ಮರಣ ದರ ೧೦೦೦ ಜೀವಿತ ಜನನಕ್ಕೆ ೭೩ರಷ್ಟು. ಮಹಿಳೆಯರ ಫಲವತ್ತತೆ ದರ ೪.೮೫ರಷ್ಟು ಇದೆ. ೫ ವರ್ಷದೊಳಗಿನ ಮಕ್ಕಳ ಮರಣ ದರ ೧೯೯ ಇದೆ. ಪ್ರತಿ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಜನಸಂಖ್ಯೆ ೨೭.೬೦೦ ಮತ್ತು ಗ್ರಾಮಿಣ ಪ್ರತಿ ಉಪಕೇಂದ್ರದ ಜನಸಂಖ್ಯೆ ೬೪೮೨ ಇದೆ. ಈ ಜಿಲ್ಲೆಯನ್ನು ಬೇರೆ ಜಿಲ್ಲೆಗೆ ಹೋಲಿಸಿದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರ ಪ್ರಮಾಣ ಅಧಿಕವಾಗಿದೆ. ಅನಕ್ಷರತೆ, ಬಡತನ, ವಲಸೆ, ನಿರುದ್ಯೋಗ, ಬಾಲಕಾರ್ಮಿಕತೆ, ಬಾಲ್ಯವಿವಾಹ, ಲಿಂಗ ಅಸಮಾನತೆ, ಜಾತಿ, ವರ್ಗ ಏಣಿಶ್ರೇಣೀಕರಣಗಳು ಹೆಚ್ಚಾಗಿವೆ. ಹಾಗಾಗಿ ಈ ಜಿಲ್ಲೆಯ ಜನರು ಅನುಭವಿಸುತ್ತಿರುವ ಅಸಮಾನತೆ ನೆಲೆಗಳನ್ನು ಮತ್ತು ಜಿಲ್ಲೆಯನ್ನು ಬಾಧಿಸುತ್ತಿರುವ ಸಮಸ್ಯೆಗಳನ್ನು ಪ್ರಜ್ಞಾಪೂರ್ವಕವಾಗಿ ಶೋಧಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಈ ಜಿಲ್ಲೆಯನ್ನು ಬಾಧಿಸುವ ಸಮಸ್ಯೆಗಳಲ್ಲಿ ಒಂದಾದ ವಲಸೆಯನ್ನು ಮಹಿಳಾ ನೆಲೆಯಿಂದ ಶೋಧಿಸಲಾಗಿದೆ. ಇದು ಅಧ್ಯಯನದ ಮಿತಿ ಮತ್ತು ಶಕ್ತಿಯು ಆಗಿದೆ. ಈ ಪ್ರದೇಶದ ವಲಸೆಯನ್ನು ಅರ್ಥ ಮಾಡಿಕೊಳ್ಳಲು ಗ್ರಾಮೀಣ ಪ್ರದೇಶದ ಮಹಿಳೆಯರು ಮತ್ತು ಪುರುಷರನ್ನು ಕೇಂದ್ರೀಕರಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೧.೪. ಅಧ್ಯಯನದ ವೈಧಾನಿಕತೆ

ಇದೊಂದು ಎಂಪಿರಿಕಲ್ ಅಧ್ಯಯನವಾಗಿದೆ. ಇದು ಪ್ರಾಥಮಿಕ ಮತ್ತು ಆನುಷಂಗಿಕ ಆಕರವನ್ನು ಅವಲಂಬಿಸಿದೆ. ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಲು ಇರುವ ಪ್ರಮುಖ ಕಾರಣಗಳೆಂದರೆ ೨೦೧೪ರ ಮಾನವ ಅಭಿವೃದ್ಧಿ ವರದಿ ಪ್ರಕಾರ ಲಿಂಗಸಂಬಂಧಿ ಅಸಮಾನತೆ ಸೂಚ್ಯಂಕ ೨೯ ಸ್ಥಾನ ಪಡೆದಿದೆ ಅಂದರೆ ಲಿಂಗಸಂಬಂಧಿ ಅಸಮಾನತೆ ಸೂಚ್ಯಂಕದಲ್ಲಿ ಕೆಳಮಟ್ಟದ ಐದು ಜಿಲ್ಲೆಗಳಲ್ಲಿ ಇದು ಒಂದು ಎಂಬುದನ್ನು ಕೋಷ್ಟಕ ೧.೧. ದೃಢಪಡಿಸುತ್ತದೆ.

ಕೋಷ್ಟಕ ೧.೧.

**ಲಿಂಗಸಂಬಂಧಿ ಅಸಮಾನತೆ ಸೂಚ್ಯಂಕದಲ್ಲಿ ಕೆಳಮಟ್ಟದ ಐದು ಜಿಲ್ಲೆಗಳು**

| ಸಂ. | ಜಿಲ್ಲೆಗಳು | ಆರೋಗ್ಯ ಸೂಚ್ಯಂಕ | | ಸಶಕ್ತೀಕರಣ ಸೂಚ್ಯಂಕ | | ಕಾರ್ಮಿಕ ಮಾರುಕಟ್ಟೆ ಸೂಚ್ಯಂಕ | | ಲಿಂಗಸಂಬಂಧಿ ಅಸಮಾನತೆ ಸೂಚ್ಯಂಕ | |
|---|---|---|---|---|---|---|---|---|---|
| | | ಮೌಲ್ಯ | ಸ್ಥಾನ | ಮೌಲ್ಯ | ಸ್ಥಾನ | ಮೌಲ್ಯ | ಸ್ಥಾನ | ಮೌಲ್ಯ | ಸ್ಥಾನ |
| ೧. | ಕಲಬುರಗಿ | ೦.೬೪೮೭ | ೧೭ | ೦.೫೪೪೪ | ೨೭ | ೦.೪೦೫ | ೧೩ | ೦.೧೩೦ | ೨೬ |
| ೨. | ಬಾಗಲಕೋಟೆ | ೦.೬೪೬೪ | ೨೨ | ೦.೫೫೫ | ೨೪ | ೦.೪೫೧ | ೯ | ೦.೧೩೦ | ೨೭ |
| ೩. | ರಾಯಚೂರು | ೦.೬೦೨೮ | ೨೮ | ೦.೫೨೯ | ೨೯ | ೦.೩೦೭ | ೨೬ | ೦.೧೫೦ | ೨೮ |
| ೪. | ಬಳ್ಳಾರಿ | ೦.೬೦೨೦ | ೨೯ | ೦.೫೫೮ | ೨೨ | ೦.೧೮೭ | ೩೦ | ೦.೧೬೭ | ೨೯ |
| ೫. | ಕೊಪ್ಪಳ | ೦.೫೯೨೭ | ೩೦ | ೦.೫೫೩ | ೨೫ | ೦.೪೧೩ | ೧೦ | ೦.೧೭೯ | ೩೦ |

(ಮಾನವ ಅಭಿವೃದ್ಧಿ ವರದಿ, ೨೦೧೪, ಪು. ೩೫)

ಕರ್ನಾಟಕ ಮಾನವ ಅಭಿವೃದ್ಧಿ ವರದಿ ಉಲ್ಲೇಖದಂತೆ ಬಳ್ಳಾರಿ ಜಿಲ್ಲೆಯ ೭ ತಾಲೂಕುಗಳ ಮಾಹಿತಿಯನ್ನು ನಮೂದಿಸಲಾಗಿದೆ. ಅದರ ಲಿಂಗವಾರು ಜನಸಂಖ್ಯೆ ವಿವರ ಹೀಗಿದೆ.

ಕೋಷ್ಟಕ ೧.೨.

**ಬಳ್ಳಾರಿ ಜಿಲ್ಲೆಯ ಲಿಂಗವಾರು ತಾಲೂಕಗಳ ಜನಸಂಖ್ಯೆ ಪ್ರಮಾಣ**

| ತಾಲೂಕುಗಳು | ಜನಸಂಖ್ಯೆ | | | ಒಟ್ಟು ಜನಸಂಖ್ಯೆ %ವಾರು ಪ್ರಮಾಣ |
|---|---|---|---|---|
| | ಗಂಡಸರು | ಹೆಂಗಸರು | ಒಟ್ಟು | |
| ಬಳ್ಳಾರಿ | ೩೮೭೭೪೪ | ೩೮೩೧೮೫ | ೭೭೦೯೨೯ | ೩೧.೪೩ |
| ಹೂವಿನ ಹಡಗಲಿ | ೯೮೮೫೩ | ೯೬೩೬೬ | ೧೯೫೨೧೯ | ೭.೯೬ |
| ಹಗರಿಬೊಮ್ಮನಹಳ್ಳಿ | ೯೫೩೩೭ | ೯೨೯೦೧ | ೧೮೮೨೩೮ | ೭.೬೮ |
| ಹೊಸಪೇಟೆ | ೨೨೯೩೩೮ | ೨೩೦೬೫೩ | ೪೫೯೯೯೧ | ೧೮.೭೬ |
| ಕೂಡ್ಲಿಗಿ | ೧೫೭೪೦೨ | ೧೫೧೪೯೯ | ೩೦೮೯೦೧ | ೧೨.೫೯ |
| ಸಂಡೂರು | ೧೩೪೦೩೪ | ೧೨೬೧೭೯ | ೨೬೦೨೧೩ | ೧೦.೬೧ |
| ಸಿರಗುಪ್ಪ | ೧೩೪೨೪೬ | ೧೩೪೮೫೮ | ೨೬೯೧೦೪ | ೧೦.೯೭ |
| ಜಿಲ್ಲಾ ಒಟ್ಟು | ೧೨೩೬೯೫೪ | ೧೨೧೫೬೪೧ | ೨೪೫೨೫೯೫ | ೧೦೦ |

(ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ: ೨೦೧೭-೧೮, ೨೦೧೮, ಪು. ೧೧)

ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶವನ್ನು ಉದ್ದೇಶಪೂರ್ವಕವಾಗಿಯೇ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ, ಹೂವಿನ ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು, ಸಿರಗುಪ್ಪ. ಈ ಪ್ರತಿಯೊಂದು ತಾಲೂಕನ್ನು ಅಧ್ಯಯನವು ಒಂದು ಗುಂಪು ಎಂದು ಭಾವಿಸುತ್ತದೆ. ಅದರ ತಾಲೂಕುವಾರು ಗ್ರಾಮೀಣ ಮತ್ತು ನಗರದ ಜನಸಂಖ್ಯೆ ವಿವರ ಹೀಗಿದೆ.

ಕೋಷ್ಟಕ ೧.೩.

**ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆ ಪ್ರಮಾಣ**

| ತಾಲೂಕುಗಳು | ಜನಸಂಖ್ಯೆ | | | ಒಟ್ಟು ಜನ ಸಂಖ್ಯೆ %ವಾರು ಪ್ರಮಾಣ | ಗ್ರಾಮೀಣ ಜನ ಸಂಖ್ಯೆ %ವಾರು ಪ್ರಮಾಣ | ನಗರ ಜನ ಸಂಖ್ಯೆ %ವಾರು ಪ್ರಮಾಣ |
|---|---|---|---|---|---|---|
| | ಗ್ರಾಮೀಣ | ನಗರ | ಒಟ್ಟು | | | |
| ಬಳ್ಳಾರಿ | ೩೬೦೪೮೪ | ೪೧೦೪೪೫ | ೭೭೦೯೨೯ | ೩೧.೪೩ | ೨೩.೫೨ | ೪೪.೬೦ |
| ಹೂವಿನ ಹಡಗಲಿ | ೧೬೭೨೫೨ | ೨೭೯೬೭ | ೧೯೫೨೧೯ | ೭.೯೬ | ೧೦.೯೧ | ೩.೦೩ |
| ಹಗರಿಬೊಮ್ಮನಹಳ್ಳಿ | ೧೮೮೨೩೮ | ೦ | ೧೮೮೨೩೮ | ೭.೬೮ | ೧೨.೨೮ | ೦.೦೦ |
| ಹೊಸಪೇಟೆ | ೧೮೮೯೬೫ | ೨೭೧೦೨೬ | ೪೫೯೯೯೧ | ೧೮.೭೬ | ೧೨.೩೩ | ೨೯.೪೫ |
| ಕೂಡ್ಲಿಗಿ | ೨೫೫೯೩೨ | ೫೨೯೭೯ | ೩೦೮೯೧೧ | ೧೨.೫೯ | ೧೬.೭೦ | ೫.೭೫ |
| ಸಂಡೂರು | ೧೮೧೦೯೭ | ೭೯೧೧೬ | ೨೬೦೨೧೩ | ೧೦.೬೧ | ೧೧.೮ | ೮.೫೯ |
| ಶಿರಗುಪ್ಪ | ೧೯೦೩೮೮ | ೭೮೭೧೬ | ೨೬೯೧೦೪ | ೧೦.೯೭ | ೧೨.೪೨ | ೮.೫೫ |
| ಜಿಲ್ಲಾ ಒಟ್ಟು | ೧೫೩೨೩೫೬ | ೯೨೦೨೩೯ | ೨೪೫೨೫೯೫ | ೧೦೦ | ೧೦೦ | ೧೦೦ |

(ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ: ೨೦೧೭–೧೮, ೨೦೧೮, ಪು. ೩೭)

**ನಮೂನೆ ಆಯ್ಕೆ:** ಸಮಾಜವಿಜ್ಞಾನಗಳಲ್ಲಿ ನಮೂನೆ ಆಯ್ಕೆಗೆ ಗಣಿತದ ಅನೇಕ ಸೂತ್ರಗಳಿವೆ. ಈ ಅಧ್ಯಯನ ಚಿಂತಕ ತರೂ ಯಮನೆ ಅವರ ಪ್ರತಿಪಾದಿತ ಸೂತ್ರವನ್ನು ಅನುಸರಿಸಿದೆ.

ಬಳ್ಳಾರಿ ಜಿಲ್ಲೆ ಗ್ರಾಮೀಣ ಪ್ರದೇಶದ ಒಟ್ಟು ಜನಸಂಖ್ಯೆ: ೧೫೩೨೩೫೬

ಶೇಕಡವಾರು : ೬೨.೪೭

| S.S.F | n= | N | = | 1532356 |
|---|---|---|---|---|
| | | $1+n(e)^2$ | | $1+1532356(0.05)^2$ |

$$= \frac{1532356}{1+1532356*0.0025}$$

$$= \frac{1532356}{1+3830.89}$$

$$= \frac{1532356}{3831.89} = 399.89$$

ಒಟ್ಟಾರೆ ೪೦೦ ನಮೂನೆ ಗಾತ್ರವನ್ನು ಅಧ್ಯಯನವು ಆಯ್ಕೆ ಮಾಡಿಕೊಂಡಿದೆ.

ಕೋಷ್ಟಕ ೧.೪.

**ಬಳ್ಳಾರಿ ಜಿಲ್ಲೆಯ ತಾಲೂಕುವಾರು ನಮೂನೆ ಆಯ್ಕೆ ವಿವರ**

| ಕ್ರಮ ಸಂಖ್ಯೆ | ತಾಲೂಕುಗಳು | ನಮೂನೆ | ಮಹಿಳಾ ಮುಖ್ಯಸ್ಥ ಕುಟುಂಬಗಳು | ಪುರುಷ ಮುಖ್ಯಸ್ಥ ಕುಟುಂಬಗಳು |
|---|---|---|---|---|
| ೧ | ಬಳ್ಳಾರಿ | ೯೬ | ೪೮ | ೪೮ |
| ೨ | ಹೂವಿನ ಹಡಗಲಿ | ೪೪ | ೨೨ | ೨೨ |
| ೩ | ಹಗರಿ ಬೊಮ್ಮನಹಳ್ಳಿ | ೪೮ | ೨೪ | ೨೪ |
| ೪ | ಹೊಸಪೇಟೆ | ೪೮ | ೨೪ | ೨೪ |
| ೫ | ಕೂಡ್ಲಿಗಿ | ೬೮ | ೩೪ | ೩೪ |
| ೬ | ಸಂಡೂರು | ೪೮ | ೨೪ | ೨೪ |
| ೭ | ಸಿರುಗುಪ್ಪ | ೪೮ | ೨೪ | ೨೪ |

ಈ ಆಯ್ಕೆಯನ್ನು ಸ್ನೊ ಬಾಲ್ ನಮೂನೆ ಬಳಸಿ, ವಿವಿಧ ಸಾಮಾಜಿಕ ಹಿನ್ನೆಲೆಯಿಂದ ವಲಸೆ ಹೋದ ೪೦೦ ಮನೆಗಳನ್ನು ಪ್ರಶ್ನಾವಳಿಯೊಂದಿಗೆ ಸಂದರ್ಶನದ ಮೂಲಕ ಗುಣಾತ್ಮಕ ಮತ್ತು ಪರಿಮಾಣಾತ್ಮಕ ಮಾಪನಗಳ ಆಧಾರದಲ್ಲಿ ಪ್ರಾಥಮಿಕ ದತ್ತಾಂಶವನ್ನು ಸಂಗ್ರಹಿಸಲಾಗಿದೆ. ದತ್ತಾಂಶವನ್ನು ಸಮಾಜಶಾಸ್ತ್ರೀಯ ಅಧ್ಯಯನ ಕ್ರಮಗಳ ಮೂಲಕ ವಿಶ್ಲೇಷಣೆ ಮಾಡಲಾಗಿದೆ.

### ೧.೫. ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಎರಡು ಆಯಾಮಗಳಲ್ಲಿ ಮಹತ್ವ ಪಡೆದಿದೆ. ಒಂದು ವಲಸೆ ಬಗ್ಗೆ ಈಗಾಗಲೇ ಸ್ಥಾಪಿತವಾದ ಜ್ಞಾನದಲ್ಲಿನ ಲಿಂಗ ಅಸೂಕ್ಷ್ಮತೆಯನ್ನು ಗುರುತಿಸಿ, ಪರಿಷ್ಕರಣೆ ಮಾಡುವ ದೃಷ್ಟಿಯನ್ನು ಹೊಂದಿದೆ. ಇನ್ನು ಎರಡನೆಯದು ಸ್ವಾತಂತ್ರ್ಯನಂತರ ಭಾರತದ ಪ್ರಜೆಗಳ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಹಲವಾರು ಕ್ರಮಗಳನ್ನು ಕೈಗೊಳ್ಳಲಾಯಿತು. ಈ ಸಂದರ್ಭದಲ್ಲಿ ಭಾರತದ ಸಂವಿಧಾನವು ಸಾಮಾಜಿಕ ಸಂಗತಿಗಳಾದ ಲಿಂಗ, ಜಾತಿ, ವರ್ಗ ಹಿನ್ನೆಲೆಯಲ್ಲಿ ಆಹಾರ, ಶಿಕ್ಷಣ, ಆಶ್ರಯ, ಆರೋಗ್ಯ; ಆರ್ಥಿಕ ಸಂಗತಿಗಳಾದ ಉದ್ಯೋಗ, ಆದಾಯ; ಸಾಂಸ್ಕೃತಿಕ ಮತ್ತು ರಾಜಕೀಯ ಸಂಗತಿಗಳಾದ ಭಾಗವಹಿಸುವಿಕೆ ಹಾಗೂ ನಿರ್ಧಾರ ಕೈಗೊಳ್ಳುವಿಕೆಯಲ್ಲಿ ಸಮಾನತೆಗಾಗಿ ಎಲ್ಲ ಸಾಮಾಜಿಕ ವಲಯದಲ್ಲಿ ವಿವಿಧ ಅವಕಾಶಗಳನ್ನು ಒದಗಿಸಲು ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ ಸಂವಿಧಾನವು ಹಕ್ಕುಗಳನ್ನು ಖಾತ್ರಿಗೊಳಿಸಿದೆ.

ಸಂವಿಧಾನದ ಅನುಚ್ಛೇದ ೧೪, ಕಾನೂನಿನ ಮುಂದೆ ಎಲ್ಲರೂ ಸಮಾನರು ಮತ್ತು ಅನುಚ್ಛೇದ ೧೫ ಯಾವುದೇ ರೀತಿಯ ತಾರತಮ್ಯವನ್ನು ನಿಷೇಧಿಸುತ್ತದೆ. ಅನುಚ್ಛೇದ ೧೫(೩) ಮಹಿಳೆ ಮತ್ತು ಮಕ್ಕಳನ್ನು ಸಶಕ್ತಗೊಳಿಸಲು ರಾಜ್ಯವು ವಿಶೇಷ ಕಾನೂನುಗಳನ್ನು ಅವರಿಗಾಗಿ ರಚಿಸಬಹುದು, ಅನುಚ್ಛೇದ ೧೬(೧) ಎಲ್ಲ ನಾಗರಿಕರಿಗೆ ಉದ್ಯೋಗ ಮತ್ತು ಸಾರ್ವಜನಿಕ ಕಛೇರಿಗಳ ನೇಮಕಾತಿಯಲ್ಲಿ ಅವಕಾಶವಿದೆ ಮತ್ತು ೧೬(೨) ಧರ್ಮ, ಲಿಂಗ, ಜನ್ಮಸ್ಥಳ, ವಾಸಸ್ಥಾನಗಳ ಆಧಾರದ ಮೇಲೆ ಸರ್ಕಾರ ಅಥವಾ ಸಾರ್ವಜನಿಕ ಇಲಾಖೆಯಲ್ಲಿ ಉದ್ಯೋಗವನ್ನು ನಿರಾಕರಿಸುವಂತಿಲ್ಲ ಎಂದು ಹೇಳುತ್ತದೆ.

ರಾಜ್ಯನೀತಿ ನಿರ್ದೇಶಕ ತತ್ವಗಳು ಸಹ ಮಹಿಳೆಯ ಸ್ಥಾನಮಾನ ಮತ್ತು ಸಶಕ್ತೀಕರಣಕ್ಕಾಗಿ ಹಲವಾರು ವಿಶೇಷ ಯೋಜನೆಗಳನ್ನು ಮಾಡಬಹುದು. ಈ ಹಿನ್ನೆಲೆಯಲ್ಲಿ ಮಹಿಳೆಯರ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯಲ್ಲಿ ಪ್ರಗತಿಯನ್ನು ತರಲು, ಶಿಕ್ಷಣದ ವಿವಿಧ ಹಂತಗಳಲ್ಲಿ ಮಹಿಳೆಯ ಭಾಗವಹಿಸುವಿಕೆಯನ್ನು ಹೆಚ್ಚಿಸಬೇಕು. ಶಿಕ್ಷಣ ಮಹಿಳೆಯರ ಹಕ್ಕು ಮತ್ತು ಕರ್ತವ್ಯಗಳನ್ನು ಕುರಿತು ಜ್ಞಾನವನ್ನು ಒದಗಿಸಲು ಇರುವ ಒಂದು ಪರಿಣಾಮಕಾರಿ ಸಾಧನ ಎಂದು ಭಾವಿಸಿತು. ಹಾಗಾಗಿ ಶಿಕ್ಷಣದ ಮೂಲಕ ವಿವಿಧ ಉದ್ಯೋಗಗಳಲ್ಲಿ ಅವರ ಭಾಗವಹಿಸುವಿಕೆಯನ್ನು ಹೆಚ್ಚಿಸುವುದು. ಇದರ ಜೊತೆಗೆ ಅನುಚ್ಛೇದ ೩೮ ರಾಜ್ಯವು ನ್ಯಾಯ, ಸಾಮಾಜಿಕ-ಆರ್ಥಿಕ ಮತ್ತು ರಾಜಕೀಯ ಅವಕಾಶಗಳನ್ನು ಜನರ ಕಲ್ಯಾಣಕ್ಕಾಗಿ ತ್ವರಿತಗೊಳಿಸುವುದು. ಇದೇ ತೆರನಾಗಿ ಅನುಚ್ಛೇದ ೩೯ ಸಮಾನ ಕೆಲಸಕ್ಕಾಗಿ ಸಮಾನ ವೇತನ, ಉದ್ಯೋಗ ಮತ್ತು ಜೀವನ ನಿರ್ವಹಣೆಗೆ ಸ್ತ್ರೀ-ಪುರುಷರಿಗೆ ಸಮಾನ ಅವಕಾಶವನ್ನು ಒದಗಿಸಬೇಕು. ಹೀಗೆ ಭಾರತದ ಸಂವಿಧಾನವು ಸಾಂಪ್ರದಾಯಿಕವಾಗಿ ನಡೆದುಕೊಂಡು ಬಂದ ಮಹಿಳೆಯರ ವಿರುದ್ಧ ನಡೆಯುವ ಎಲ್ಲ ರೀತಿಯ ತಾರತಮ್ಯ, ಆಚರಣೆ, ಮೂಢನಂಬಿಕೆ, ಮಹಿಳೆಯ ಚಲನಶೀಲತೆ ಮೇಲಿರುವ ನಿಷೇಧಗಳನ್ನು ತೊಲಗಿಸಲು ಸಂವಿಧಾನಾತ್ಮಕವಾಗಿ ಹಲವಾರು ಕ್ರಮಗಳನ್ನು ಕೈಗೊಂಡಿದೆ, ಅಲ್ಲದೆ ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸಿದೆ. ಆದರೂ ಏಕೆ ಲಿಂಗ ಸಮಾನತೆಯನ್ನು ಸಾಧಿಸಲು ಆಗಿಲ್ಲ ಎಂದು, ಅದರಲ್ಲೂ ವಲಸೆ ಮತ್ತು ಜೀವನಾಧಾರದಂತಹ ಸಂಗತಿಗಳಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ, ಅವುಗಳಿಗೆ ಪರಿಹಾರಗಳನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಅಧ್ಯಯನ ಮಹತ್ವ ಪಡೆದಿದೆ.

**೧.೬. ಅಧ್ಯಯನದ ಸ್ವರೂಪ**

ಅಧ್ಯಯನದ ಪ್ರಸ್ತಾವನೆ ಮತ್ತು ಫಲಿತಾಂಶದ ಭಾಗಗಳನ್ನು ಒಳಗೊಂಡು ಆರು ಅಧ್ಯಾಯಗಳಿವೆ. ಪ್ರಸ್ತಾವನೆ ಭಾಗದಲ್ಲಿ ಅಧ್ಯಯನ ಪ್ರವೇಶದ ಹಾದಿ, ಅಧ್ಯಯನದ ಉದ್ದೇಶಗಳು ಮತ್ತು ಅಧ್ಯಯನ ವಿಧಾನದ ವಿವರಗಳನ್ನು ನೀಡಲಾಗಿದೆ. ಎರಡನೆಯ

ಅಧ್ಯಾಯದಲ್ಲಿ ಲಿಂಗವ್ಯವಸ್ಥೆ, ವಲಸೆ ಜೀವನಾಧಾರದಂತಹ ಪರಿಭಾಷೆಗಳನ್ನು ಅಧ್ಯಯನವು ಹೇಗೆ ಗ್ರಹಿಸಿದೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ವಲಸೆ ಸಿದ್ಧಾಂತಗಳನ್ನು ಸ್ತ್ರೀವಾದಿ ದೃಷ್ಟಿಕೋನಗಳು ವಿಮರ್ಶಿಸುವ ಸ್ವರೂಪವನ್ನು ಮತ್ತು ಒಳಗೊಳ್ಳಬೇಕಾದ ಸಂಗತಿಗಳನ್ನು ಪರಿಶೀಲಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ವಲಸೆ: ಗುಣಲಕ್ಷಣ–ಪ್ರೇರಕಾಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಲಿಂಗವ್ಯವಸ್ಥೆ ಮೇಲಾಗುವ ವಲಸೆ ಪರಿಣಾಮಗಳನ್ನು ವಿಶ್ಲೇಷಿಸಲಾಗಿದೆ. ಅಧ್ಯಾಯ ಆರರಲ್ಲಿ ಅಧ್ಯಯನದ ಫಲಿತಗಳು, ಮಿತಿಗಳು, ಸಾಧ್ಯತೆಗಳನ್ನು ವಿವರಿಸಲಾಗಿದೆ. ಜೊತೆಗೆ ಅನುಬಂಧದಲ್ಲಿ ಪ್ರಶ್ನಾವಳಿ, ವಕ್ತೃ ವಿವರಗಳನ್ನು, ಛಾಯಾಚಿತ್ರಗಳನ್ನು, ಪತ್ರಿಕಾ ವರದಿಗಳನ್ನು ಹಾಗೂ ಪರಾಮರ್ಶನ ಗ್ರಂಥಸೂಚಿಯನ್ನು ನೀಡಲಾಗಿದೆ.

**ಆಕರ ಗ್ರಂಥಸೂಚಿ**

ಒಡೆಯರ್ ಡಿ. ಹೆಗ್ಗಡೆ, ೨೦೦೭, ಮಹಿಳಾ ಅಧ್ಯಯನಗಳ ಪದಕೋಶ: ಅರ್ಜುನ್ ಪಬ್ಲಿಷಿಂಗ್ ಹೌಸ್, ಮೈಸೂರು, ಪು. ೨೨.

ಚಂದ್ರಶೇಖರ ಟಿ. ಆರ್., ೨೦೧೨, ಕರ್ನಾಟಕ ಜನಗಣತಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೩.

ಜಸ್ಪಿನಾ ಡುಗ್ಗಾಬಾಜಾ, ೨೦೧೨, ಜಂಡರ್, ಲೈವ್‌ಲಿಹುಡ್ ಆ್ಯಂಡ್ ಮೈಗ್ರೇಶನ್ ಇನ್ ಆಫ್ರಿಕಾ: ಕ್ಲಿಬ್ರಿಸ್, ಕಾರ್ಪ್, ಪು. ೪೪.

ಬಳ್ಳಾರಿ ಜಿಲ್ಲಾ ಅಂಕಿ ಅಂಶಗಳ ನೋಟ: ೨೦೧೭–೧೮, ೨೦೧೮, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಬಳ್ಳಾರಿ ಪು. ೧೧.

ಮಾನವ ಅಭಿವೃದ್ಧಿ ವರದಿ–೨೦೧೪, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು ಪು. ೩೫–೩೭.

ಶೈಲಜ ಎಂ.ಸಿ., ೨೦೧೨, ಗ್ರಾಮ ಪಂಚಾಯಿತಿ ಚುನಾಯಿತ ಮಹಿಳಾ ಸದಸ್ಯರ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕೈಪಿಡಿ: ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು, ಪು. ೮–೯.

ಶ್ರೀಮತಿ ಎಚ್.ಎಸ್.(ಅನು) ಸಿಮೋನ್ ದ ಬೋವಾ(ಮೂಲ), ೨೦೦೭, ದ ಸೆಕೆಂಡ್ ಸೆಕ್ಸ್: ಅಧ್ಯಯನ ಮಂಡಲ, ಬೆಂಗಳೂರು, ಪು. ೧೬–೧೭ ಮತ್ತು ೩೭–೫೮.

ಹ್ಯಾರಿಸ್ ಜೆ. ಆರ್. ಮತ್ತು ಟೊಡಾರೊ ಎಂ.ಪಿ., ೧೯೭೦, ಮೈಗ್ರೇಶನ್, ಅನ್‌ಎಂಪ್ಲಾಯಾಮೆಂಟ್ ಆ್ಯಂಡ್ ಡೆವಲಪ್‌ಮೆಂಟ್: ಎ ಟು ಸೆಕ್ಟರ್ ಅನಾಲಿಸಿಸ್. ದ ಅಮೆರಿಕನ್ ಎಕಾನಿಮಿಕ್ ರಿವ್ಯೂ, ೬೦(೧), ಪು. ೧೨೭.

ಅಧ್ಯಾಯ ಎರಡು

## ಪರಿಭಾಷೆಗಳ ನಡುವಿನ ಸಹಸಂಬಂಧ

ಯಾವುದೇ ಜ್ಞಾನಶಾಖೆ ಸ್ವತಂತ್ರವೆಂದು ಗುರುತಿಸಿಕೊಳ್ಳುವುದು ಮೂರು ಸಂಗತಿಗಳಿಂದ. ಒಂದು ಪರಿಭಾಷೆ, ಎರಡು ಸಿದ್ಧಾಂತ, ಮೂರು ವೈಧಾನಿಕತೆ. ಇವು ಆ ಜ್ಞಾನಶಾಖೆಯ ಮೂಲಾಧಾರಗಳು. ಜ್ಞಾನ ಉತ್ಪಾದನೆಯು ಸಹಿತ ಈ ಮೂರು ಹಂತಗಳಲ್ಲಿ ನಡೆಯುತ್ತದೆ. ಅಂದರೆ ಒಂದು ಪರಿಭಾಷೆಗಳ ವ್ಯಾಖ್ಯಾನ, ಎರಡು ಸಿದ್ಧಾಂತಗಳ ವಿಮರ್ಶೆ, ಮೂರು ವೈಧಾನಿಕತೆಯ ವಿಶ್ಲೇಷಣೆ ಇರುತ್ತದೆ. ಆದ್ದರಿಂದ ಪುಸ್ತುತ ಅಧ್ಯಾಯದಲ್ಲಿ ಪರಿಭಾಷೆ ಎಂದರೇನು? ಈ ಅಧ್ಯಯನದಲ್ಲಿ ಯಾವ ಪರಿಭಾಷೆಯನ್ನು ಬಳಸಿಕೊಳ್ಳಲಾಗಿದೆ ಅವನ್ನು ಹೇಗೆ ಪರಿಭಾವಿಸಿದೆ ಎಂಬುದನ್ನು ವಿವರಿಸಲಾಗಿದೆ.

ವಿಜ್ಞಾನದಲ್ಲಿ ಪರಿಭಾಷೆಯನ್ನು ಒಂದೇ ಗುಣಲಕ್ಷಣಗಳನ್ನು ಒಳಗೊಂಡ ಸಂಗತಿಗಳನ್ನು ವಿಂಗಡಿಸುವ ಅರ್ಥದಲ್ಲಿ ಬಳಸಲಾಗಿದೆ. ಆದರೆ ಸಮಾಜವಿಜ್ಞಾನದಲ್ಲಿ ಇದೊಂದೇ ಅರ್ಥದಲ್ಲಿ ಪರಿಭಾಷೆ ಬಳಕೆಯಾಗುವುದಿಲ್ಲ. ಇದಕ್ಕಿಂತಲ್ಲೂ ಹೆಚ್ಚಿನ ಅರ್ಥ ಪರಿಭಾಷೆಗಿದೆ ಮತ್ತು ಈ ಅರ್ಥ ಸಂಶೋಧನೆಯ ವ್ಯಾಖ್ಯಾನದಿಂದ ಬಂದಿದೆ. "ದಿನನಿತ್ಯದ ಬದುಕಿನ ಅನುಭವಗಳು ಸಂಶೋಧನೆಯ ದ್ರವ್ಯಗಳು. ಏಕವ್ಯಕ್ತಿಯ ಅನುಭವದಿಂದ ಹಲವರ ಅನುಭವದತ್ತ ಸಾಗುವ ಪ್ರಕ್ರಿಯೆ ಸಂಶೋಧನೆ. ಇದೊಂದು ಆಲೋಚನೆಗಳ, ದೃಷ್ಟಿಕೋನಗಳ ವಿಚಾರಗಳ ಸಾಮಾಜೀಕರಣ ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಹುಟ್ಟಿನಿಂದ ಬಂದ ಅನುಭವ, ದೃಷ್ಟಿಕೋನ, ವಿಚಾರ ಇತ್ಯಾದಿಗಳು ಹೊರಲೋಕದ ವಿಚಾರ ಅನುಭವ ದೃಷ್ಟಿಕೋನಗಳೊಂದಿಗೆ ಸಂವಾದ ನಡೆಸುತ್ತವೆ. ಪ್ರತಿಯೊಬ್ಬರಿಗೂ ತಮ್ಮ ದೃಷ್ಟಿಕೋನಗಳು, ವಿಚಾರಗಳು, ಅನುಭವಗಳು ಸರಿ. ಆದುದರಿಂದ ಅವುಗಳಿಗೆ ಮಹತ್ವ ಸಿಗಬೇಕೆನ್ನುವ ಧೋರಣೆ ಇರುತ್ತದೆ. ಸಂಶೋಧಕರ ಅನುಭವಗಳೇ ಸರಿಯೆಂದು ಸಾಧನೆಯಾದಾಗ ಮಾತ್ರ ಸತ್ಯ ಪ್ರತಿಪಾದನೆಯಾಗುವುದಲ್ಲ: ಉಳಿದವರ ಅನುಭವಗಳು ಸರಿಯೆಂದು ಸಾಧನೆಯಾದಾಗಲೂ ಸತ್ಯ ಪ್ರತಿಪಾದನೆಯಾಗುತ್ತದೆ. ಇನ್ನಿತರ ನಿಲುವುಗಳೊಂದಿಗೆ ಸಂಶೋಧಕರ ನಿಲುವನ್ನು ಒರೆಹಚ್ಚುವ ಮೂಲಕ ಸರಿತಪ್ಪುಗಳು ತೀರ್ಮಾನವಾಗುತ್ತವೆ. ಹೀಗೆ ಸಂಶೋಧನೆಯೊಂದು ವಾದಗಳ ಸಾಮಾಜೀಕರಣ ಪ್ರಕ್ರಿಯೆ. ಇದು ಕೇವಲ ವಾದಗಳ ಸಾಮಾಜೀಕರಣ ಪ್ರಕ್ರಿಯೆಯಲ್ಲ. ವಾದಗಳನ್ನು ಮಂಡಿಸಲು ಬಳಸುವ ಭಾಷೆಯ

ಸಾಮಾಜೀಕರಣ ಪ್ರಕ್ರಿಯೆ ಕೂಡಾ ಆಗಿದೆ. ಎರಡು ದೃಷ್ಟಿಯಿಂದ ಭಾಷೆಯ ಸಾಮಾಜೀಕರಣ ನಡೆಯುತ್ತದೆ.

ಒಂದು ಪ್ರತಿಭಾಷೆಯಲ್ಲೂ ಬಳಕೆಯಾಗುವ ಪದಗಳಿಗೆ ಎರಡು ಅರ್ಥಗಳಿವೆ. ಒಂದು ಮೂಲ ಅರ್ಥ, ಮತ್ತೊಂದು ಸಂದರ್ಭ ನೀಡುವ ಅರ್ಥ. ಅಂದರೆ ದಿನನಿತ್ಯದ ಬದುಕಿನಲ್ಲಿ ಬಳಸುವ ಪದಗಳಿಗೆ ಒಂದು ಸ್ಥಿರ(ಫಿಕ್ಸ್ಡ್) ಅರ್ಥ ಇರುವುದಿಲ್ಲ; ಸಂದರ್ಭಾನುಸಾರ ಅರ್ಥ ಬದಲಾಗುತ್ತದೆ. ಇದು ಸಂಶೋಧನೆಗೆ ಉಪಯೋಗವಾಗುವುದಿಲ್ಲ. ಸಂಶೋಧನೆಯಲ್ಲಿ ಬಳಕೆಯಾಗುವ ಪದ ಮೂಲ ಅರ್ಥವನ್ನು ಕೊಡುತ್ತದೆ ಮತ್ತು ಇದನ್ನು ಪರಿಭಾಷೆ ಎನ್ನುತ್ತಾರೆ"(ಚಂದ್ರಪೂಜಾರಿ ಎಂ., ೨೦೧೪, ಪು. ೭). ಈ ಭಾಷೆಯಲ್ಲಿ ಸಂಶೋಧನೆ ನಡೆಯಬೇಕಾಗುತ್ತದೆ. ಯಾವುದೇ ಪರಿಭಾಷೆ ಇನ್ನೊಂದರ ಸೂಕ್ಷ್ಮತೆಯನ್ನು ಪ್ರಶ್ನಿಸಿ ವಿಸ್ತರಿಸುತ್ತದೆ. ಇದು ಒಂದ ತರ ಒಳಗೊಳ್ಳುವ ನೆಲೆ. ಅದು ಒಂದು ಹೊಸ ಆಲೋಚನೆ ಉತ್ಪಾದನೆಗೆ ಕಾರಣವಾಗಬಹುದು ಅಥವಾ ಸ್ಥಾಪಿತ ಜ್ಞಾನ ಪರಿಷ್ಕರಣೆಯೂ ಆಗಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಮೂರು ಪರಿಭಾಷೆಗಳನ್ನು ಅಂದರೆ ೧.ಲಿಂಗವ್ಯವಸ್ಥೆ, ೨.ವಲಸೆ, ೩.ಜೀವನಾಧಾರಗಳನ್ನು ಒಳಗೊಂಡಿದೆ. ಇವನ್ನು ಬಳಸಿಕೊಂಡು ಅಧ್ಯಯನವನ್ನು ಕಟ್ಟಿಕೊಡಲಾಗಿದೆ.

### ೨.೧. ಲಿಂಗವ್ಯವಸ್ಥೆ(ಲಿಂಗತ್ವ)

ಲಿಂಗವ್ಯವಸ್ಥೆ(ಲಿಂಗತ್ವ) ಎನ್ನುವುದು ಇಂಗ್ಲಿಷಿನ ಜಂಡರ್ ಪದಕ್ಕೆ ಸಂವಾದಿಯಾಗಿ ಬಳಸುವ ಪರಿಭಾಷೆಯಾಗಿದೆ. ಈ ಮೂಲಕವೇ ಮಹಿಳೆಯರ ಮತ್ತು ಪುರುಷರ ಸ್ಥಾನಮಾನ ಸಮಾಜ ಮತ್ತು ಸಂಸ್ಕೃತಿಯಲ್ಲಿ ಹೇಗೆ ಸ್ಥಾಪಿಸಲಾಗಿದೆ ಎಂದು ಗ್ರಹಿಸಲಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷರ ಪಾತ್ರ ಅತ್ಯಂತ ಹೆಚ್ಚಿನದಾಗಿರುವುದನ್ನು ಅನೇಕ ಸಂಗತಿಗಳು ನಿರೂಪಿಸುತ್ತವೆ. ತಂದೆಯ ಪಾತ್ರದಲ್ಲಿ ಬರುವ ಪುರುಷ ಮನೆಯ ಹೆಂಗಸರ ಮೇಲೆ, ಮಕ್ಕಳ ಮೇಲೆ ಹಾಗೂ ಆಸ್ತಿಪಾಸ್ತಿಗಳ ಮೇಲೆ ಅಧಿಕಾರವನ್ನು ಹೊಂದಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ ಆಗಿದೆ. ಅಂದರೆ ಸಾಮಾಜೀಕರಣ ಪ್ರಕ್ರಿಯೆಯಿಂದ ಜಾರಿಯಲ್ಲಿರುವ ಈ ರೀತಿಯ ಪಿತೃಪ್ರಧಾನ ವ್ಯವಸ್ಥೆಯು ಸಮಾಜದಲ್ಲಿ ಲಿಂಗತಾರತಮ್ಯ, ಲಿಂಗ ಅಸಮಾನತೆಯನ್ನು ಹುಟ್ಟುಹಾಕಿದೆ. ಇದನ್ನು ಅರಿಯುವ ಮೊದಲಿಗೆ ಅವರು ಸಾಮಾಜಿಕ ಮತ್ತು ಕೌಟುಂಬಿಕ ಜೀವನದಲ್ಲಿ ಎದುರಿಸುವ ಹಲವಾರು ಸಮಸ್ಯೆಗಳಿಗೆ ಕಾರಣವಾದ ಲಿಂಗವ್ಯವಸ್ಥೆ ಪರಿಭಾಷೆ ಬಗ್ಗೆ ತಿಳಿದುಕೊಳ್ಳಬೇಕಾದ ಅಗತ್ಯವಿದೆ. ಮೊದಲಿಗೆ ಲಿಂಗ ಹಾಗು ಲಿಂಗವ್ಯವಸ್ಥೆಯ ನಡುವಿನ ವ್ಯತ್ಯಾಸಗಳನ್ನು ಗಮನಿಸುವುದಾದರೆ 'ಲಿಂಗ' ಜೈವಿಕ ಆಧಾರದ ಮೇರೆಗೆ ಗುರುತಿಸುವ ಪದವಾಗಿದೆ. ಈ ವ್ಯತ್ಯಾಸಗಳು ವಿಶ್ವದಲ್ಲಿ ಎಲ್ಲೆಡೆ ಕಂಡುಬರುತ್ತವೆ. ಅವು ಸಾರ್ವತ್ರಿಕವಾಗಿವೆ. ಆದರೆ

ಲಿಂಗವ್ಯವಸ್ಥೆ(ಲಿಂಗತ್ವ) ಭಿನ್ನವಾದುದು. ಈ ಪದ ಕುರಿತಂತೆ ಈಗಾಗಲೇ ಪ್ರಕಟಗೊಂಡ ನಿಘಂಟು, ವಿಶ್ವಕೋಶ, ಪಾರಿಭಾಷಿಕ ಪದಕೋಶದಲ್ಲಿ ಭಿನ್ನ ಅರ್ಥಗಳಿವೆ. ಅದರಲ್ಲಿಯೂ ಗೊಂದಲಗಳಿವೆ. ಅವುಗಳನ್ನು ಹೀಗೆ ಅರ್ಥೈಸಬಹುದು.

ಇಂಗ್ಲಿಷಿನ Gender ಎನ್ನುವ ಪದಕ್ಕೆ ಕನ್ನಡದಲ್ಲಿ ಲಿಂಗವ್ಯವಸ್ಥೆ ಅಥವಾ ಲಿಂಗತ್ವ ಎನ್ನುವ ಪದಗಳನ್ನು ಬಳಸಲಾಗುತ್ತದೆ. ಕನ್ನಡ ನಿಘಂಟಿನಲ್ಲಿ "ಲಿಂಗವ್ಯವಸ್ಥೆ (ನಾ) ಪುಂ,ಸ್ತ್ರೀ, ನಪುಂಸಕ ಲಿಂಗಗಳನ್ನು ಉಪಯೋಗಿಸುವ ನಿಯಮ–ಕಟ್ಟುಪಾಡು ಎಂದು ದಾಖಲಿಸಲಾಗಿದೆ"(ಕ.ಸಾ.ಪ, ೧೯೯೩, ಪು. ೭೭೧೪). ಪ್ರಿಸಮ್ ಇಂಗ್ಲಿಷ್ ಕನ್ನಡ ನಿಘಂಟಿನಲ್ಲಿ "Gender ಲಿಂಗ (ವ್ಯಾ) ಪುಲ್ಲಿಂಗ ಸ್ತ್ರೀಲಿಂಗ ನಪುಂಸಕ ಲಿಂಗ ಎಂದು ಉಲ್ಲೇಖಿಸಲಾಗಿದೆ"(ವೆಂಕಟಸುಬ್ಬಯ್ಯ ಜಿ, ೨೦೦೬, ಪು. ೧೯೩). ಇಂಗ್ಲಿಷ್–ಇಂಗ್ಲಿಷ್ ಕನ್ನಡ ನಿಘಂಟಿನಲ್ಲಿ "Gender is grouping of words into masculine, feminine and nature ನಾ(ವ್ಯಾ) ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗ ಎಂದು ಪದಗಳ ವರ್ಗೀಕರಣವಿದೆ"(ಶೇಷಗಿರಿರಾವ್ ಎಲ್.ಎಸ್., ೨೦೦೮, ಪು. ೫೫೯). ಇಂಗ್ಲಿಷ್–ಕನ್ನಡ ನಿಘಂಟಿನಲ್ಲಿ "ಜೆಂಡರ್ ನಾ (ವ್ಯಾ) ಲಿಂಗ Masuline, feminine, common ಪುಂಸ್ತ್ರೀ ಲಿಂಗ ಉಭಯ ಲಿಂಗ, ೨. ನಾಮವಾಚಕಗಳು ಸರ್ವನಾಮಗಳ (ವಿ) ಪುಂಸ್ತ್ರೀಯಾ ನಪುಂಸಕ–ವಾಚಕ, ೩. (ಗುಣವಾಚಕಗಳ ವಿ) ವಿಶೇಷ ಅನುಗುಣ ರೂಪ ಪುಂ ಸ್ತ್ರೀಯಾ ನಪುಂಸಕ ವಾಚಕಗಳಾದ ನಾಮವಾಚಕಗಳಿಗೆ ಯಾ ಸರ್ವನಾಮಗಳಿಗೆ ಅನುರೂಪವಾದ ವಿಶೇಷಣರೂಪ, ೪. ಅದರ ಸ್ತ್ರೀಯಾ ಪುರುಷ ಜಾತಿ ವರ್ಗ ಲಿಂಗ She has a spirit more Masuline than the fist ಆಕೆಗೆ ಪುರುಷ ಜಾತಿಗೆ ಮೀರಿದ ಪುಂಸ್ತ್ವ ಇದೆ ಎಂಬ ಪ್ರಸ್ತಾಪವಿದೆ"(ಮೈಸೂರು ವಿಶ್ವವಿದ್ಯಾನಿಲಯ, ೨೦೦೭, ಪು. ೨೧೯೦). ಮಹಿಳಾ ಅಧ್ಯಯನ ಪದಕೋಶದಲ್ಲಿ "ಲಿಂಗವ್ಯವಸ್ಥೆ ಸಮಾಜದಲ್ಲಿ ವ್ಯಕ್ತಿಗಳು ಆಚರಿಸುವ ನಡವಳಿಕೆಗಳು, ತತ್ವಶಾಸ್ತ್ರೀಯ ಮತ್ತು ಭೌತಿಕ ಆಚರಣೆಗಳ ನಿರ್ದಿಷ್ಟ ಸಂರಚನೆ ಎಂದರ್ಥ. ಈ ಮೂಲಕ ಪುರುಷ ಮತ್ತು ಮಹಿಳೆ ನಡುವಿನ ಪ್ರಾಧಿಕಾರದ ಸಂಬಂಧವನ್ನು ವ್ಯಾಖ್ಯಾನಿಸಲಾಗಿದೆ. ಸಮಾಜದ ಲಿಂಗವ್ಯವಸ್ಥೆ ಮೂಲಕವೇ ಪುರುಷತ್ವ ಮತ್ತು ಸ್ತ್ರೀತನದ ಸ್ವರೂಪಗಳನ್ನು ಸೃಷ್ಟಿಸಲಾಗುವುದು. ನಂತರ ಅವುಗಳ ನಡುವಣ ಸಂಬಂಧಗಳನ್ನು ಸಂಘಟಿಸಲಾಗುವುದು"(ಒಡೆಯರ್ ಡಿ. ಹೆಗ್ಗಡೆ, ೨೦೦೭, ಪು. ೪೫೯) ಎಂಬ ನಿರೂಪಣೆಯಿದೆ.

ಸಮಾಜಶಾಸ್ತ್ರದ ಶಬ್ದಕೋಶದಲ್ಲಿ According to Ann Oakley, "who introduced the term to sociology, "gender" to the parallel and socially

unequal division into femininity and masculinity' (see Sex, Gender and Society, 1972). Gender draws attention, therefore, to the socially constructed aspects of differences between women and men. But the term gender has since become extended to refer not only to individual identity and personality but also, at the symbolic level, to cultural ideals and *stereotypes of *masculinity and *femininity and, at the structural level, to the sexual *division of labour in institutions and organizations. . .

On a lighter note, 'gender' has been criticized as a prudish way of avoiding the word 'sex'. This is clearly not the case when it is used correctly in sociology, but it is true that it has entered everyday speech in this sense, when people talk(for example) about 'the opposite gender'. Some sociologists, too, are guilty of this when they refer to 'gender roles' or 'gender discrimination'.

The term gender can be used fruitfully with some awareness of these problems. If it is recognized that there is a need to consider biological difference and structures of power in relation to the elaborate social construction of difference, then the concept of gender has the great advantages that it encourages a study of masculinity as well as femininity, the relations between the sexes as well as the social position of women, and a recognition of historical and cultural variety and change rather than a universalizing analysis"(ಜಾನ್ ಸ್ಕಾಟ್ ಆ್ಯಂಡ್ ಗೋರ್ಡಾನ್ ಮಾರ್ಷಲ್(ಇಡಿ), ೨೦೦೯, ಪು. ೨೭೬) ಎಂದು ವಿವರಿಸಲಾಗಿದೆ.

'ಸ್ತ್ರೀವಾದ ಪದಸೂಚಿ' ಎಂಬ ಕೃತಿಯಲ್ಲಿ "ಲಿಂಗತ್ವ: ಸಾಂಸ್ಕೃತಿಕವಾಗಿ ಕಲ್ಪಿತವಾದ ಕೆಲವು ಲಕ್ಷಣಗಳು ಮತ್ತು ವರ್ತನೆಗಳನ್ನು ಇವು ಗಂಡಸಿನವು ಇವು ಹೆಂಗಸಿನವು ಎಂದು ವಿಂಗಡಿಸಿ ಆರೋಪಿಸುವುದನ್ನು ಲಿಂಗತ್ವ ಎಂದು ಗುರುತಿಸಲಾಗುತ್ತದೆ. ಆ ಪ್ರಕಾರ ಗಂಡಸು ಎಂದರೆ ಹೀಗೆ, ಹೆಂಗಸು ಎಂದರೆ ಹೀಗೆ ಎಂಬ ವ್ಯಾಖ್ಯಾನಗಳೂ ಆಗುತ್ತವೆ. ದೈಹಿಕವಾಗಿ ಇರುವ ಲೈಂಗಿಕ ವ್ಯತ್ಯಾಸಗಳನ್ನು ಹಿಡಿದು ಗಂಡಸು, ಹೆಂಗಸು ಎಂದು ಗುರುತಿಸುವುದಕ್ಕೂ, ಸಾಂಸ್ಕೃತಿಕವಾಗಿ ರಚನೆಗೊಳ್ಳುವ ಗಂಡು ಹೆಣ್ಣು ಎಂಬ ವಿಂಗಡಣೆಗಳಿಗೂ ಅರ್ಥ ಸಂಬಂಧವೇ ಇಲ್ಲ. ದೈಹಿಕ ವ್ಯತ್ಯಾಸವು ಸಹಜವಾದುದಾದರೆ, ಲಿಂಗತ್ವ ಚಹರೆಯ

ವ್ಯತ್ಯಾಸವು ಉದ್ದೇಶಪೂರ್ವಕವಾಗಿ ರಚನೆಗೊಂಡದ್ದು. ಸ್ತ್ರೀವಾದಿಗಳು ಲೈಂಗಿಕ ವ್ಯತ್ಯಾಸ ಹಾಗೂ ಲಿಂಗತ್ವ ವ್ಯತ್ಯಾಸಗಳನ್ನು ಬಹಳ ಎಚ್ಚರದಿಂದ ಬೇರ್ಪಡಿಸಿ ನೋಡುತ್ತಾರೆ.

ಕೇಟ್ ಮಿಲೆಟ್ ಮತ್ತು ಶುಲಾಮಿತ್ ಫೈರ್ ಸ್ಟೋನ್ ಹೇಳಿಕೆಯಂತೆ ಲಿಂಗತ್ವವನ್ನಾಧರಿಸಿ ನಡೆದ ಭೇದಭಾವಗಳು ಹೆಂಗಸಿನ ಬದುಕಿನ ಪ್ರತಿಯೊಂದು ಸಂಗತಿಯನ್ನು ಪ್ರಭಾವಿಸುತ್ತವೆ. ಏಕೆಂದರೆ, ಇದು ಹೆಣ್ಣು ಗಂಡುಗಳನ್ನು ಪ್ರಶ್ನಾತೀತವೆಂದು ನಂಬಲಾದ ಒಂದು ಚೌಕಟ್ಟಿನಲ್ಲಿರಿಸಿ ಪರಿಭಾವಿಸುತ್ತವೆ. ಲಿಂಗತ್ವ ವ್ಯತ್ಯಾಸ ಎಂಬುದು ವಾಸ್ತವದಲ್ಲಿ ಗಂಡು ಪ್ರಾಬಲ್ಯ ಎಂಬುದನ್ನು ವ್ಯವಸ್ಥಿತವಾಗಿ ವಿಸ್ತರಿಸುವ ಒಂದು ಹುನ್ನಾರ. ಸ್ತ್ರೀವಾದವು ಸೈದ್ಧಾಂತಿಕವಾಗಿ ಈ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಬೇಕು. ಹಾಗೆಯೇ ರಾಜಕೀಯ ನಡೆ ಎಂದರೆ ಈ ವ್ಯವಸ್ಥೆಯನ್ನು ಕೊನೆಗಾಣಿಸುವುದೇ ಆಗಿದೆ.

ಲಿಂಗತ್ವ ರಚನೆಯ ಮೊದಲ ಹಂತ ಎಂದರೆ ಗಂಡು ಹೆಣ್ಣುಗಳನ್ನು ಎರಡು ಭಿನ್ನ ಧ್ರುವಗಳಲ್ಲಿರುವವರೆಂದು ಕಲ್ಪಿಸುವುದು. ಅಂದರೆ ಗಂಡು-ಹೆಣ್ಣುಗಳು ವಿರೋಧಗಳಾಗಿ ನಿಂತಿರುವವರು ಎಂಬಂತೆ. ಸಿಮೊನ್ ದ ಬೋವಾ ಮೊತ್ತಮೊದಲಿಗೆ ಹೆಣ್ಣು ಅನ್ಯಳಾಗಿ ಕಲ್ಪಿತವಾಗಿದ್ದಾಳೆ ಎಂದು ಗುರುತಿಸಿದಳು. ಅನ್ಯ ಎಂದರೆ ಗಂಡಸು ಅಲ್ಲದ್ದು ಎಂಬ ಅರ್ಥ. ಈ ಅನ್ಯತೆ ಎಂಬುದು ಹೆಣ್ಣು ಗುಣಗಳು, ಗಂಡು ಗುಣಗಳು ಎಂದು ಹೇಳುವ ಗುಣಲಕ್ಷಣಗಳ ಪಟ್ಟಿಯನ್ನು ಮಾಡಿಡಲು ನೆರವಾಗಿಬಿಟ್ಟಿತ್ತು. ಹೆಣ್ಣು ಗುಣಲಕ್ಷಣಗಳು, ಗಂಡು ಗುಣಲಕ್ಷಣಗಳು ಪರಸ್ಪರ ವಿರೋಧದ್ದಾಗಿಯೂ ನಿರೂಪಿತವಾಗುತ್ತವೆ. ಉದಾಹರಣೆಗೆ ಹೆಣ್ಣು ಹುಚ್ಚಿಯಾದರೆ ಗಂಡು ಕೋಪಿಷ್ಠ ಎಂಬಂಥವು ಸಮಾಜವು ಹೆಣ್ಣು ಗಂಡುಗಳಲ್ಲಿ ಏನನ್ನು ನಿರೀಕ್ಷಿಸುತ್ತದೆ ಎಂಬುದನ್ನು ಸೂಚಿಸುತ್ತದೆ. ಆದರೆ ಸ್ತ್ರೀವಾದಿ ಅಧ್ಯಯನಗಳು ಇಂತಹ ಪ್ರಯತ್ನಗಳನ್ನು ಟೀಕಿಸಿದವು. ಸಮಾಜವಾದಿ ಸ್ತ್ರೀವಾದಿ ಓಕ್ಲೆ ಸಮಾಜದ ಹೆಂಗಸರ ಗುಣಲಕ್ಷಣಗಳು ಜನ್ಮಸಿದ್ಧವಾದವಲ್ಲ, ಸಾಮಾಜೀಕರಣದ ಪ್ರಭಾವದಲ್ಲಿ ಹಾಗೆ ರೂಪತಳೆದವು ಎಂದು ಖಚಿತವಾಗಿ ನಿರೂಪಿಸಿದರು. ಸಾಮಾಜಿಕ ಒತ್ತಡಗಳಲ್ಲಿ ಹಾಗೂ ನಿರ್ಬಂಧಗಳಲ್ಲಿ ಒಬ್ಬ ಹೆಂಗಸು ರೂಪಗೊಳ್ಳುತ್ತಾಳೆ ಎಂದರು. ಸಾಮಾಜೀಕರಣದಲ್ಲಿ ಆಕಾರ ತಳೆಯುವ ಈ ವ್ಯಕ್ತಿತ್ವವನ್ನು ಲಿಂಗತ್ವ ಅಳವಡಿಕೆ ಎಂದು ಕರೆದಳು.

ನಮ್ಮ ಸಾಮಾಜಿಕ ಬದುಕು ಸುಗಮವಾಗಬೇಕು ಎಂದರೆ ಲಿಂಗತ್ವ ರಚನೆಯ ಪಾತ್ರವನ್ನು ಅರ್ಥ ಮಾಡಿಕೊಳ್ಳಬೇಕು ಎಂದು ಸ್ತ್ರೀವಾದಿ ಮಾನವಶಾಸ್ತ್ರಜ್ಞರು ಹೇಳುತ್ತಾರೆ. ಆಗ ಮಾತ್ರ ಮುಂದೊಂದು ದಿನ ಈ ಅಸಹಜ ವಿಂಗಡಣೆಗಳಿಲ್ಲದ ಸಮಾಜವನ್ನು ಕಾಣಬಹುದು.

ಲೈಂಗಿಕತೆ ಇರುವ ಸಾಮಾಜಿಕ ಸಂಬಂಧಗಳ ಸ್ವರೂಪದಿಂದಾಗಿಯೇ ಈ ಲಿಂಗತ್ವ ರಚನೆಗೆ ಅವಕಾಶವಾಗಿದೆ. ಇದನ್ನು ಆಗುಮಾಡಿಸುವ ಮುಖ್ಯ ಸಾಮಾಜಿಕ ಸಂಸ್ಥೆ

ವಿವಾಹವೇ. ವಿವಾಹದಲ್ಲಿ ಸಂಬಂಧಗಳ ನಿರೂಪಣೆಯಾಗುತ್ತಾ ನಡೆದು ಲಿಂಗತ್ವ ವ್ಯತ್ಯಾಸಗಳ ವ್ಯಾಖ್ಯಾನವೂ ಆಗಿ ಬಿಡುತ್ತದೆ.

ಲಿಂಗತ್ವ ಆಧಾರದಲ್ಲಿ ನಡೆದ ಶ್ರಮವಿಭಜನೆಯ ಸಾಮಾಜಿಕ ಹುನ್ನಾರವು ಬೇರು ಬಿಟ್ಟು ಗಟ್ಟಿಯಾಗಲು ಮುಖ್ಯ ಕಾರಣವಾದದ್ದು ತಾಯಿಯಾದವಳು ಶಿಶುಪಾಲನೆಯ ಪೂರ್ಣ ಜವಾಬ್ದಾರಿಯನ್ನು ಹೊರಬೇಕು ಎಂಬ ಶ್ರಮವಿಭಜನೆಯ ತಂತ್ರದ ನೆರವಿನಲ್ಲಿ. ಈ ತಂತ್ರದಲ್ಲಿ ಆ ತಾಯಿಯು ತನ್ನ ಸಂತಾನದ ವ್ಯಕ್ತಿತ್ವದಲ್ಲೂ ಲಿಂಗತ್ವ ವಿಭಜನೆಯ ಸಂಗತಿಗಳನ್ನು ತರಬೇತಿ ನೀಡಿ ಸ್ಥಾಪಿಸಿಬಿಡುತ್ತಾಳೆ. ಲಿಂಗ ಅಸಮಾನತೆಗಳು ಇಲ್ಲವಾಗಬೇಕೆಂದರೆ ಮೊದಲಿಗೆ ಈ ಲಿಂಗತ್ವ ಕಲ್ಪನೆಯ ಬೇರುಗಳು ನಾಶಗೊಳ್ಳಬೇಕು (ಚೊಡೊರೊವ್, ೧೯೭೮). ಲಿಂಗತ್ವ ಕಲ್ಪನೆಯು ಹೆಂಗಸರನ್ನು ಸಂಬಂಧಿ ನೆಲೆಗಳಲ್ಲಷ್ಟೆ ಯೋಚಿಸಲು ಒತ್ತಾಯಿಸುತ್ತದೆ. ಅವಳ ಭಾವಲೋಕವೇ ಇದರಿಂದ ತೀವ್ರವಾಗಿ ಪ್ರಭಾವಿತವಾಗಿಬಿಡುತ್ತದೆ. ಆದರೆ ಇದೇ ಲಿಂಗತ್ವ ಕಲ್ಪನೆಯು ಗಂಡಸರನ್ನು ಪ್ರತ್ಯೇಕವಾಗಿ ಸ್ವಾಯತ್ತವಾಗಿ ಉಳಿಯುವಂತೆ ಬೆಂಬಲಿಸುತ್ತದೆ(ಗಿಲಿಗನ್, ೧೯೮೨).

ಈ ಎಲ್ಲ ಚರ್ಚೆಗಳಿಂದ ಆದ ಮುಖ್ಯ ಪ್ರಯೋಜನವೆಂದರೆ, ಲಿಂಗತ್ವ ಸಂಬಂಧಗಳನ್ನು ಈಗ ಯಾರೂ ವೈಯಕ್ತಿಕ ಸಮಸ್ಯೆ ಎಂದು ಚರ್ಚಿಸಬೇಕಾಗಿಲ್ಲ. ಜಾತಿಸಮಸ್ಯೆ, ವರ್ಗ ಸಮಸ್ಯೆಗಳಿದ್ದಂತೆ ಅದೂ ಕೂಡ ಒಂದು ಸಾಮಾಜಿಕ ಸಮಸ್ಯೆ. ಹಾಗಾಗಿ ಇದರ ಪರಿಹಾರಗಳನ್ನು ಈ ಒಗ್ಗಟ್ಟಿನ ನೆಲೆಯಲ್ಲೇ ಶೋಧಿಸುವುದು ಸೂಕ್ತ. ಇದು ಹೆಣ್ಣಿಗೆ ಒಂಟಿತನದ ಭಯದಿಂದ ಮುಕ್ತವಾಗಿ ಸಮುದಾಯದ ನೆರವನ್ನು ಪಡೆಯಬಹುದು ಎಂಬ ಭರವಸೆಯನ್ನು ಕೊಡಬಹುದು ಎಂದು ವಿವರಿಸಿದ್ದಾರೆ"(ಶ್ರೀಮತಿ ಎಚ್.ಎಸ್., ೨೦೧೮, ಪು. ೨೯೪).

ಎಲ್ಲ ಉಲ್ಲೇಖಗಳನ್ನು ಗಮನಿಸುವುದಾದರೆ 'ಲಿಂಗವ್ಯವಸ್ಥೆ' ಅಂದರೆ ಗಂಡು ಎಂದರೆ ಹೀಗಿರಬೇಕು, ಈ ರೀತಿಯ ಕೆಲಸಗಳನ್ನು ನಿರ್ವಹಿಸಬೇಕು ಹಾಗೂ ಹೆಣ್ಣು ಎಂದರೆ ಹೀಗೆ ಇರಬೇಕು, ಈ ರೀತಿಯ ನಡವಳಿಕೆ ಹೊಂದಿರಬೇಕು ಎಂಬ ಚೌಕಟ್ಟನ್ನು ಸಮಾಜ ನಿರ್ಮಿಸಿದೆ. ಈ ರೀತಿಯ ಸಾಮಾಜಿಕ ಚೌಕಟ್ಟು ಸಮುದಾಯದಿಂದ ಸಮುದಾಯಕ್ಕೆ ಭಿನ್ನತೆಯನ್ನು ಹೊಂದಿದೆ. ಸಾಮಾಜೀಕರಣವು ಸಾಂಸ್ಕೃತಿಕವಾಗಿ ಮತ್ತು ನಿರ್ದಿಷ್ಟವಾದ ಪಾತ್ರಗಳಿಗೆ ಸೇರ್ಪಡೆಗೊಳ್ಳುವ ಪ್ರಕ್ರಿಯೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ಇದು ಎಲ್ಲಾ ದೇಶದಲ್ಲಿಯೂ ಏಕರೂಪದಲ್ಲಿರುವುದು, ಬಹುರೂಪಿ ನೆಲೆಯನ್ನು ಹೊಂದಿದೆ.

ಲಿಂಗಾಧಾರಿತ ಸಾಮಾಜೀಕರಣ ಪ್ರಕ್ರಿಯೆಯು ಮಕ್ಕಳಿಗೆ ತಾವು ಹೆಣ್ಣುಮಗುವಾದರೆ ಹೇಗಿರಬೇಕು? ಅಥವಾ ಗಂಡುಮಕ್ಕಳಾದರೆ ಯಾವ ರೀತಿಯ ನಡವಳಿಕೆ ಹೊಂದಿರಬೇಕು ಎಂಬುದನ್ನು ಕಲಿಸಿಕೊಡುವುದರಿಂದ ಲಿಂಗಭೇದ ಭಾವನೆ ಕಾಣಿಸಿಕೊಳ್ಳುತ್ತದೆ. ಅದರಲ್ಲೂ

ಹೆಣ್ಣಿನ ಬಗ್ಗೆ ಇರುವ ರೂಢಿಭಾವನೆಯೆಂದರೆ ಆಕೆಯ ಕೆಲಸ ಮದುವೆಯಾಗುವುದು ಹಾಗೂ ಮಕ್ಕಳನ್ನು ಹೆರುವುದು. ತನ್ನ ಸ್ವಂತ ಸುಖಸಂತೋಷಗಳನ್ನು ಬದಿಗೊತ್ತಿಯಾದರೂ ಅವಳು ಕುಟುಂಬದ ಸುಖಸಂತೋಷಗಳ ಕಡೆಗೆ ಗಮನ ಹರಿಸುವವಳು, ತ್ಯಾಗಮಯಿ, ಯಾವಾಗಲೂ ಪ್ರೀತಿಯ ಸೆಲೆಯನ್ನೇ ಸುರಿಸುತ್ತಿರುವವಳು, ಬೇರೊಬ್ಬರ ಕಷ್ಟಗಳಿಗಾಗಿ ಮರಗುವವಳು, ಎಲ್ಲರನ್ನೂ ನೋಡಿಕೊಳ್ಳುವವಳು, ಪೋಷಿಸುವವಳು ಹಾಗೂ ಸಹಾನುಭೂತಿಪರಳು ಎಂಬ ಹೆಣ್ಣಿನ ಬಗೆಗೆ ಕಲ್ಪನಾಲಹರಿ ಸಮಾಜದ ಜನರ ಮನಸ್ಸಿನಲ್ಲಿ ಕಂಡುಬರುತ್ತಿದೆ. ಅಷ್ಟೇ ಅಲ್ಲದೆ, ಹೆಣ್ಣು ತನ್ನ ಕೆಲಸಕಾರ್ಯಗಳ ನಡುವೆ ಸಮಯ ಹೊಂದಿಸಿ ತಾನು ಮೋಹಕವಾಗಿ, ಸುಂದರವಾಗಿ ಕಾಣುವಂತೆ ಅಲಂಕರಿಸಿಕೊಳ್ಳುವವಳು ಎಂಬ ಭಾವನೆ ಕೂಡ ಸಮಾಜದಲ್ಲಿ ದಟ್ಟವಾಗಿ ಕಂಡುಬರುತ್ತದೆ.

ಹಾಗೆಯೇ, ಸಮಾಜದಲ್ಲಿ ಗಂಡಿನ ಬಗೆಗೆ ಬೇರೂರಿರುವ ಭಾವನೆಯೆಂದರೆ–ಅವನು ದುಡಿದು ಸಂಪಾದನೆ ಮಾಡಿ ತರುವವನು. ಅವನು ಸ್ಪಷ್ಟವಾಗಿ ಮತ್ತು ನಿಷ್ಠುರವಾಗಿ ಮಾತಾಡಬಲ್ಲವನು, ಸ್ಪರ್ಧಾತ್ಮಕ ಮನೋಭಾವನೆ ಹೊಂದಿದವನು, ಸ್ವತಂತ್ರ, ಧೈರ್ಯಶಾಲಿ ಮತ್ತು ತನ್ನ ವ್ಯವಹಾರ ಮತ್ತು ವೃತ್ತಿಸಂಬಂಧವಾಗಿ ಯಾವಾಗಲೂ ಆಲೋಚನೆ ಮಾಡುವವನು. ಅವನು ತನ್ನ ಭಾವನೆಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಸಮರ್ಥ, ಲೈಂಗಿಕವಾಗಿ ಮೊದಲು ಮುಂದುವರಿಯುವವನು ಎಂಬ ಪರಿಗ್ರಹಿಕೆ ಇದೆ. ಇವನ್ನು ತಂದೆ ತಾಯಿಗಳು, ಶಿಕ್ಷಕರು, ಸಮ ವಯಸ್ಸಿನ ಗುಂಪಿನವರು, ಧಾರ್ಮಿಕ ಮುಖಂಡರು ಮತ್ತು ಮಾಧ್ಯಮಗಳು ತಲೆಮಾರಿನಿಂದ ತಲೆಮಾರಿಗೆ ಕೊಂಡೊಯ್ಯುವುದುಂಟು. ಈ ರೀತಿಯ ಲಿಂಗ ಸಾಮಾಜೀಕರಣ ಪ್ರಕ್ರಿಯೆಯಿಂದ ಸಮಾಜದಲ್ಲಿ ಪುರುಷಪ್ರಧಾನತೆಯ ಅಸ್ತಿತ್ವ ಉಳಿದುಕೊಂಡಿದೆ. ಇದರಿಂದಾಗಿ ಕುಟುಂಬದ ಗಂಡಸರು ಆಸ್ತಿಪಾಸ್ತಿ ಹಾಗೂ ಇತರ ಆದಾಯ ಮೂಲಗಳು, ಸಂತಾನೋತ್ಪತ್ತಿ, ಲೈಂಗಿಕತೆ ಹಾಗೂ ಚಲನಶೀಲತೆಯ ಮೇಲೆ ಹತೋಟಿ ಹೊಂದಿದ್ದು, ಅದು ಸಮಾಜದಲ್ಲಿ ಹೀಗೆ ಕಾಣಿಸಿಕೊಳ್ಳುತ್ತದೆ. ಗಂಡುಮಕ್ಕಳಿಗೆ ಹೆಚ್ಚಿನ ಪ್ರಾಶಸ್ತ್ಯ, ಆಹಾರ ವಿತರಣೆಯಲ್ಲಿ ಹೆಣ್ಣುಮಕ್ಕಳಿಗೆ ತಾರತಮ್ಯ, ಹೆಣ್ಣುಮಕ್ಕಳ ಓದು ಬರೆಹಕ್ಕಾಗಿ ಸೀಮಿತ ಅವಕಾಶ, ಮನೆಮಟ್ಟದಲ್ಲಿ ಹೆಂಗಸರ ಮೇಲೆ ಹಿಂಸಾಚಾರ, ಲೈಂಗಿಕ ಅತ್ಯಾಚಾರ ಮತ್ತು ಮಾನಭಂಗ, ಸಂತಾನೋತ್ಪತ್ತಿ ಮತ್ತು ಆಸ್ತಿಪಾಸ್ತಿಗಳ ವಿಚಾರದಲ್ಲಿ ಸೀಮಿತವಾದ ನಿಯಂತ್ರಣ ಹಾಗೂ ತೀರ್ಮಾನಗಳನ್ನು ಕೈಗೊಳ್ಳುವ ವಿಚಾರದಲ್ಲಿ ಭಾಗವಹಿಸಲು ಹೆಣ್ಣುಮಕ್ಕಳಿಗೆ ಕಡಿಮೆ ಅವಕಾಶ ಕಲ್ಪಿಸಲಾಗಿದೆ.

ಇದು ಸಮಾಜದ ಎಲ್ಲ ಸಂಸ್ಥೆಗಳಲ್ಲಿ ಸಾಂಸ್ಥೀಕರಣಗೊಂಡ ಹಿನ್ನೆಲೆಯಲ್ಲಿ ಲಿಂಗ ಅಸಮಾನತೆಗಳ ಬವಣೆಯಲ್ಲಿ ಮಹಿಳೆಯರು ಬದುಕುತ್ತಿದ್ದಾರೆ. ಇದು ವಿವಿಧ ಹಂತಗಳಲ್ಲಿ ವ್ಯಕ್ತವಾಗಿದೆ. ಇದನ್ನು ಅಮರ್ತ್ಯಸೇನ್ ಅವರು ಸಮಾಜದಲ್ಲಿ ಏಳು ರೀತಿಯ ಲಿಂಗ ಅಸಮಾನತೆ ಇರುವುದನ್ನು ಗುರುತಿಸಿದ್ದಾರೆ. ಅವು ಹೀಗಿವೆ:

೧. **"ಆಯುಸ್ಸಿನಲ್ಲಿ ಅಸಮಾನತೆ:** ಮಹಿಳೆಯರ ಹಾಗೂ ಪುರುಷರ ನಡುವೆ ಕಂಡುಬರುವ ಲಿಂಗ ಅಸಮಾನತೆ 'ಬದುಕು ಮತ್ತು ಸಾವಿ'ನಂಥ ಅಂಶಗಳನ್ನು ಒಳಗೊಂಡಿರುತ್ತದೆ. ಮಹಿಳೆಯರ ಸಾವಿನ ದರ ಅಸಾಧಾರಣವಾಗಿ ಹೆಚ್ಚಾಗಿರುತ್ತದೆ ಎಂಬ ಕಾರಣದಿಂದಾಗಿ ಒಟ್ಟು ಜನಸಂಖ್ಯೆಯಲ್ಲಿ ಪುರುಷರ ಸಂಖ್ಯೆ ಹೆಚ್ಚಾಗುತ್ತಿದೆ ಎಂದು ಭಾವಿಸುತ್ತೇವೆ. ಆದರೆ ಆರೋಗ್ಯ ರಕ್ಷಣೆ ಮತ್ತು ಪೋಷಣೆಗಳಿಗೆ ಸಂಬಂಧಿಸಿದಂತೆ ಸ್ವಲ್ಪವೂ ಭೇದವಿರದ ಅಥವಾ ಅಪರೂಪವಾಗಿ ಸ್ವಲ್ಪಮಟ್ಟಿಗೆ ಭೇದ ಕಂಡುಬರುವ ಸಮಾಜಗಳಲ್ಲಿ ಮಹಿಳೆಯರ ಸಂಖ್ಯೆ ತಕ್ಕಮಟ್ಟಿಗೆ ಹೆಚ್ಚಾಗಿರುವುದರೊಂದಿಗೆ ಆಯುಸ್ಸಿನ ಪ್ರಮಾಣ ಕೂಡ ಹೆಚ್ಚಾಗಿರುತ್ತದೆ.

೨. **ಗಂಡುಸಂತಾನದ ಬಗ್ಗೆ ಆಕಾಂಕ್ಷೆ:** ಅನೇಕ ಪುರುಷಪ್ರಧಾನ ಸಮಾಜಗಳಲ್ಲಿ ಹೆಣ್ಣುಸಂತಾನಕ್ಕೆ ಹೋಲಿಸಿದರೆ ಗಂಡುಸಂತಾನಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡುವುದರಿಂದ, ಹುಟ್ಟುವ ಮಗು ಹೆಣ್ಣಾಗಿರುವುದಕ್ಕಿಂತ ಗಂಡಾಗಿರಲಿ ಎಂಬ ಹಂಬಲವೇ ಮೂಲಭೂತವಾಗಿ ಲಿಂಗ ಅಸಮಾನತೆಗೆ ದಾರಿ ಮಾಡಿಕೊಡುತ್ತದೆ

೩. **ಮೂಲಭೂತ ಸೌಕರ್ಯ ಅಸಮಾನತೆ:** ಜನಸಂಖ್ಯಾಶಾಸ್ತ್ರದ ಅಂಕಿ ಅಂಶಗಳಿಂದ ಈ ಅಸಮಾನತೆ ಅಷ್ಟೊಂದು ವ್ಯಕ್ತವಾಗದಿದ್ದರೂ, ಹೆಣ್ಣನ್ನು ಅವಕಾಶವಂಚಿತಳಾಗಿ ಮಾಡುವುದಕ್ಕೆ ಇನ್ನೂ ಹಲವಾರು ಕಾರಣಗಳಿವೆ. ತಮ್ಮ ಸಹಜ ಕೌಶಲ್ಯಗಳನ್ನು ಬೆಳೆಸಿಕೊಳ್ಳುವುದಕ್ಕೆ ಬೇಕಾದ ಉತ್ತೇಜನದಿಂದ ಮೊದಲುಗೊಂಡು ಸಮಾಜದಲ್ಲಿ ಹೆಸರು ಮತ್ತು ಖ್ಯಾತಿ ಸಂಪಾದಿಸಬಹುದಾದ ಸಂದರ್ಭಗಳ ಪಾಲುಗೊಳ್ಳುವ ಹಂತದವರೆಗಿನ ಅವಕಾಶಗಳು ಅವಳ ಕೈತಪ್ಪಿಹೋಗುವ ಸಾಧ್ಯತೆಗಳೇ ಹೆಚ್ಚು.

೪. **ವಿಶೇಷ ಸದವಕಾಶಗಳ ಅಸಮಾನತೆ:** ಉನ್ನತ ಶಿಕ್ಷಣ ಹಾಗೂ ವೃತ್ತಿಪರ ತರಬೇತಿಗಳಿಗೆ ಸಂಬಂಧಿಸಿದಂತೆ ವಿಶ್ವದ ಕೆಲವಾರು ಅತ್ಯಂತ ಶ್ರೀಮಂತ ರಾಷ್ಟ್ರಗಳಲ್ಲೂ ಲಿಂಗ ವಿಚಾರವನ್ನು ಕುರಿತಂತೆ ಪೂರ್ವಗ್ರಹಗಳು ಕಂಡುಬರುತ್ತವೆ.

೫. **ವೃತ್ತಿಪರ ಅಸಮಾನತೆ:** ಉದ್ಯೋಗದ ವಿಚಾರದಲ್ಲಿಯಾಗಲಿ, ಕೆಲಸಕಾರ್ಯಗಳಲ್ಲಿ ದೊರಕಬೇಕಾದ ಬಡ್ತಿಯ ದೃಷ್ಟಿಯಿಂದಾಗಲಿ, ಗಂಡಸರಿಗಿಂತ ಹೆಂಗಸರು ಹೆಚ್ಚು ಸಂಕಷ್ಟಗಳನ್ನು ಎದುರಿಸುತ್ತಾರೆ.

೬. **ಮಾಲೀಕತ್ವ ಅಸಮಾನತೆ:** ಹಲವಾರು ಸಮಾಜಗಳಲ್ಲಿ ಆಸ್ತಿಪಾಸ್ತಿಗಳ ಒಡೆತನ ತುಂಬ ಅಸಮತೋಲನದಿಂದ ಕೂಡಿದೆ. ಆಸ್ತಿಗಳೆನಿಸಿಕೊಳ್ಳುವ ಮನೆ ಹಾಗೂ ಜಮೀನುಗಳು ಕೂಡ ತುಂಬ ಅಸಮವಾದ ರೀತಿಯಲ್ಲಿ ವಿತರಣೆಗೊಂಡಿರುವುದನ್ನು ನೋಡಬಹುದು. ಆಸ್ತಿಯ ಮೇಲಿನ ಹಕ್ಕನ್ನು ಸಾಧಿಸುವ ಅವಕಾಶವಿಲ್ಲದಿರುವ ಕಾರಣ ಮಹಿಳೆಯರ ದನಿ ಕುಗ್ಗಿಹೋಗುವುದು

ಮಾತ್ರವಲ್ಲದೆ ಅವರು ವಾಣಿಜ್ಯ ಸಂಬಂಧವಾದ, ಆರ್ಥಿಕ ಮತ್ತು ಹಲವಾರು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಿ ಏಳ್ಗೆ ಹೊಂದುವ ಸಾಧ್ಯತೆಗಳು ಕೂಡ ಕುಂಠಿತಗೊಳ್ಳುತ್ತವೆ.

೭. **ಮನೆಮಟ್ಟದಲ್ಲಿ ಅಸಮಾನತೆ:** ಮನೆಮಟ್ಟದಲ್ಲಿಯೂ ಲಿಂಗಭೇದ ಸಾಮಾನ್ಯವಾಗಿದ್ದು, ಇಂಥ ಮೂಲಭೂತ ಸಂಗತಿಗಳು ಅನೇಕ ರೀತಿಯಲ್ಲಿ ತಿರುಗಿಕೊಳ್ಳುತ್ತವೆ. ಸ್ಪಷ್ಟವಾದ ಸ್ತ್ರೀವಿರೋಧಿ ಗುರುತುಗಳಿಲ್ಲದಿದ್ದರೂ ಕೆಲವು ಸಂದರ್ಭಗಳಲ್ಲಿ ಗಂಡುಮಗು ಬೇಕೆಂದು ಆಸೆಪಡುವುದು, ಗಂಡು ಮಕ್ಕಳಿಗೆ ಉನ್ನತ ಶಿಕ್ಷಣ ನೀಡುವುದು, ಹೆಚ್ಚಿನ ಮಟ್ಟದ ಹುದ್ದೆಗಳಿಗೆ ಬಡ್ತಿ ನೀಡುವುದು, ಇಂಥ ಹಲವಾರು ವಿಚಾರಗಳಲ್ಲಿ ಹೆಣ್ಣಿಗೆ ಅನ್ಯಾಯವಾಗುತ್ತಲೇ ಬಂದಿದೆ. ಮನೆಗೆಲಸದ ಹೊರೆ, ಮಕ್ಕಳನ್ನು ನೋಡಿಕೊಳ್ಳುವ ಜವಾಬ್ದಾರಿ ಇವುಗಳನ್ನು ಹಂಚಿಕೊಳ್ಳುವುದರಲ್ಲಿ ಹೆಂಗಸಿನ ಮೇಲೆಯೇ ಒತ್ತಡ ಹೆಚ್ಚಾಗಿ ಬೀಳುತ್ತಿದೆ"(ಶೈಲಜ ಎಂ.ಸಿ., ೨೦೧೨, ಪು. ೮-೯).

ಹೀಗೆ ಸಮಾಜದಲ್ಲಿನ ಲಿಂಗತಾರತಮ್ಯ ಅಸಮಾನತೆಗೆ ಮಾತ್ರ ನಿಲ್ಲದೆ ಅನೇಕ ಸಮಸ್ಯೆಗಳನ್ನು ಸೃಷ್ಟಿಸುವ ಸಮಸ್ಯಾತ್ಮಕ ಚೌಕಟ್ಟಾಗಿ ನಿಂತಿದೆ. ಅಂದರೆ ಮಹಿಳೆಯಾಗಿರುವ ಕಾರಣಕ್ಕಾಗಿ ಬರುವ ಸಮಸ್ಯೆ ಮತ್ತು ಸಂಕಷ್ಟಗಳು ಒಂದೆಡೆ ಇವೆ. ಉದಾಹರಣೆಗೆ ಹೆಣ್ಣು ಲಿಂಗ ಭ್ರೂಣ ಹತ್ಯೆ, ಅತ್ಯಾಚಾರ, ವರದಕ್ಷಿಣೆ, ಬಾಲ್ಯವಿವಾಹ, ಲೈಂಗಿಕ ಕಿರುಕುಳ, ಕೌಟುಂಬಿಕ ಹಿಂಸೆ ಇತ್ಯಾದಿ. ಇವನ್ನು ಮಹಿಳಾಕೇಂದ್ರಿತ ಸಮಸ್ಯೆಗಳೆಂದು ಗುರುತಿಸಬಹುದು. ಇವು ಒಂದು ಬಗೆಯದಾದರೆ; ಇನ್ನೂ ಸಮಾಜವನ್ನು ಬಾಧಿಸುವ ಅನೇಕ ವಿಷಯಗಳಿವೆ. ಉದಾಹರಣೆಗೆ ಜಾತಿ, ವರ್ಗ, ಬಡತನ, ನಿರುದ್ಯೋಗ, ವಲಸೆ ಇತ್ಯಾದಿ. ಇವು ಸಹ ಮಹಿಳೆಯರ ಮೇಲೆ ದುಪ್ಪಟ್ಟು ನಕಾರಾತ್ಮಕ ಪರಿಣಾಮಗಳನ್ನು ಬೀರುತ್ತಿವೆ. ಇವು ಎರಡನೇ ಬಗೆಯವು. ಮೊದಲನೆಯ ಗುಂಪಿನ ಕುರಿತ ಅಧ್ಯಯನಗಳು ನಡೆದಿವೆ ಮತ್ತು ನಡೆಯುತ್ತಿವೆ. ಅವುಗಳ ತಾತ್ವಿಕತೆ ಬಗೆಗೆ ಇನ್ನಷ್ಟು ತೀವ್ರವಾದ ಚರ್ಚೆಗಳು ನಡೆಯಬೇಕು. ಅದನ್ನು ವಿಸ್ತರಿಸದೆ, ಪ್ರಸ್ತುತ ಅಧ್ಯಯನವು ಎರಡನೆಯ ವರ್ಗಕ್ಕೆ ಸಂಬಂಧಿಸಿದೆ. ಸಮಾಜವನ್ನು ಬಾಧಿಸುವ ವಿಷಯದಲ್ಲಿ ಒಂದಾದ ವಲಸೆಯನ್ನು ಕೇಂದ್ರೀಕರಿಸಿದೆ. ಎರಡು ತರಹದ ಅಧ್ಯಯನದಲ್ಲೂ ಲಿಂಗವ್ಯವಸ್ಥೆ ಕುರಿತ ಅಧ್ಯಯನಗಳು ಏಕರೂಪವಾಗಿಲ್ಲ. ಅವು ಬಹುರೂಪಿ ನೆಲೆಯನ್ನು ಪಡೆದುಕೊಂಡಿವೆ. ಅಂದರೆ ಮಹಿಳೆ ಕುರಿತ ನಿರ್ವಚನಗಳು ಆಕೆ ಬದುಕುವ ಸಾಮಾಜಿಕ ನೆಲೆಗಟ್ಟಿನಲ್ಲಿ ನಡೆಯಲಿವೆ. ಆಯಾ ದೇಶ, ಸಮಯ, ಕಾಲ ಧರ್ಮ, ಶಿಕ್ಷಣ, ವರ್ಗ, ಜಾತಿ, ಪ್ರದೇಶ, ವಯಸ್ಸು ಇತ್ಯಾದಿ ಸಾಮಾಜಿಕ ಭಿನ್ನತೆಗಳನ್ನು ಪರಿಗಣಿಸಿ ಅರ್ಥೈಸಲಾಗುತ್ತಿದೆ. ಈ ಅಧ್ಯಯನವು ಸಹ ಇದೇ ನೆಲೆಯಲ್ಲಿ ಮುಂದುವರಿದಿದೆ ಎಂದು ಹೇಳಬಹುದು.

## ೨.೨. ವಲಸೆ

'ವಲಸೆ' ಪದಕ್ಕೆ ಭಿನ್ನ ಅರ್ಥಗಳಿವೆ. ಅವನ್ನು ಗಮನಿಸುವುದಾದರೆ ಸಂಸ್ಕೃತದಲ್ಲಿ ದಿವಸ ಎಂದಿದೆ. ಅಂದರೆ ಊರಿಂದ ಹೊರಗಟ್ಟಲ್ಪಡುವುದು, ಹೊರಗಡೆ ಹೋಗುವುದು ಇತ್ಯಾದಿ. ವಸ್ ಧಾತುವಿನಿಂದ ಇದು ಆಗಿದೆ. ವಾಸವೂ ವಸತಿಯೂ ಇದರದೇ ವ್ಯುತ್ಪನ್ನ. ವಿ.ವಿಸರ್ಗ ಸೇರಿದಾಗ ನಿಷೇದಾರ್ಥಕ ಅರ್ಥ ಹೊಮ್ಮಿದೆ. ವಿವಸ್‌ನಿಂದ ವಲಸೆ. ವಲಸೆಗೆ ಗುಳೆ ಎಂಬ ಇನ್ನೊಂದು ಶಬ್ದವೂ ಇದೆ.

ಕನ್ನಡ ಇಂಗ್ಲಿಷ್ ಡಿಕ್ಷನರಿಯಲ್ಲಿ "ವಲಸೆ-Valase = ಒಲಸೆ, Flight a Removing form home for fear of a hostile army emigration ವಲಸೆ ತೆಗೆ–To leave all at once, one village and go to another for Safety ಎಂಬ ಉಲ್ಲೇಖವಿದೆ"(ಕಿಟಲ್, ೧೯೯೯, ಪು. ೧೩೮೨). ಮಹಿಳಾ ಅಧ್ಯಯನಗಳ ಪದಕೋಶದಲ್ಲಿ "ವಲಸೆಯನ್ನು ಒಂದು ವಿಧವಾದ ಭೌಗೋಳಿಕ ಅಥವಾ ಪ್ರಾದೇಶಿಕ ಚಲನೆಯಾಗಿದ್ದು, ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಚಲಿಸಿ ಮೂಲವಾಸ ಸ್ಥಳದಿಂದ ಬೇರೆಯಾಗಿ ವಾಸಿಸಬೇಕೆಂಬ ಸ್ಥಳಕ್ಕೆ ನಿವಾಸವನ್ನು ಬದಲಾಯಿಸುವುದು ಎಂದು ವ್ಯಾಖ್ಯಾನಿಸಲಾಗಿದೆ"(ಒಡೆಯರ್ ಡಿ. ಹೆಗ್ಗಡೆ, ೨೦೦೭, ಪು. ೫೦೩). ಕನ್ನಡ ನಿಘಂಟಿನಲ್ಲಿ "ವಲಸಿಗ: (ನಾ) ವಲಸೆ ಬಂದ ವ್ಯಕ್ತಿಯ ನಡವಳಿಕೆ ದೇಶಾಚಾರ : (ಇಂಥಾ ಆಚಾರ, ವಲಸಿಗ, ಪದ್ಧತಿ ಅಥವಾ ಅಭ್ಯಾಸ ಇವುಗಳಲ್ಲಿ ಮನುಷ್ಯ ಮನುಷ್ಯರಿಗೆ ಭೇದವಿದೆ), ವಲಸೆ, ಒಲಸೆ: (ನಾ) (ಆಕ್ರಮಣ, ಬರಗಾಲ ಮುಂತಾದ ಕಷ್ಟ ಪ್ರಸಂಗಗಳಲ್ಲಿ) ಜನರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ನೆಲೆಸಲು ಹೋಗುವುದು– ಗುಳೆ ಹೋಗುವುದು ಎಂದು ಹೇಳಲಾಗಿದೆ"(ಕ.ಸಾ.ಪ. ಸಂಪುಟ(ಎಂಟು), ೧೯೯೩, ಪು. ೭೮೦೪). ಪ್ರಿಸಮ್ ಇಂಗ್ಲಿಷ್ ಕನ್ನಡ ನಿಘಂಟಿನಲ್ಲಿ "Migration- ಗುಳೆ, ವಲಸೆ, ಸ್ಥಳಾಂತರಿಕೆ ಎಂಬ ಪ್ರಸ್ತಾಪವಿದೆ"(ವೆಂಕಟಸುಬ್ಬಯ್ಯ ಜಿ., ೨೦೦೬, ಪು. ೩೦೬). ಇಂಗ್ಲಿಷ್–ಇಂಗ್ಲಿಷ್–ಕನ್ನಡ ನಿಘಂಟಿನಲ್ಲಿ "Migreshion: migration/ maigreiten/ ಮೈಗ್ರೇಷನ್ act of migrating ನಾ–ವಲಸೆ, ವ್ಯಕ್ತಿ, ಪ್ರಾಣಿ ಮೊದಲಾದವು ಒಟ್ಟಿಗೆ ವಲಸೆ ಹೋಗುವುದು"(ಶೇಷಗಿರಿರಾವ್ ಎಲ್. ಎಸ್., ೨೦೦೮, ಪು. ೭೮೫). ಇಂಗ್ಲಿಷ್–ಕನ್ನಡ ನಿಘಂಟಿನಲ್ಲಿ "ಮೈಗ್ರೇಷನ್(ನಾ) ಗುಳೆ, ಪ್ರವಾಸ ವಲಸೆ, ದೇಶಾಂತರ, ಸ್ಥಳಾಂತರಿಕೆ ಎಂದು ನಮೂದಿಸಲಾಗಿದೆ"(ಮೈಸೂರು ವಿಶ್ವವಿದ್ಯಾನಿಲಯ, ೧೯೯೯, ಪು. ೩೩೨೯). ಇಂಗ್ಲಿಷ್–ಕನ್ನಡ ಪದಕೋಶದಲ್ಲಿ "Migration ವಲಸೆ ಗುಳೆ ಎಂದು"(ಶಂಕರ ಭಟ್ಟ ಡಿ.ಎನ್. ೨೦೧೫, ಪು. ೩೯೪). ಅಚ್ಚಗನ್ನಡ ನುಡಿಕೋಶದಲ್ಲಿ "ವಲಸೆ, ಒಲಸೆ ಒಂದೂರಿನಿಂದ ಇನ್ನೊಂದು ಊರಿಗೆ ಶತ್ರುಗಳಿಗೆ ಅಂಜಿ ಮನೆ ಬಿಟ್ಟು ಓಡಿ ಹೋಗುವಿಕೆ ಎಂದು"(ಪುಟ್ಟಣ್ಣ

ಗೌಡರು, ೧೯೯೩, ಪು. ೪೩೫). ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶದಲ್ಲಿ "Migration ವಲಸೆ Migration hypothesis ವಲಸೆ ಪ್ರಾಕ್‌ಕಲ್ಪನೆ ತಾನಿದ್ದ ಸಮುದಾಯದ ತಳ್ಳುವ ಅಂಶ(Push Factor)ಗಳಿಂದ ಮತ್ತು ತಾನು ಸೇರು ಸಮುದಾಯದ ಸೆಳೆಯುವ ಅಂಶ(pull factor)ಗಳಿಗೆ ವ್ಯಕ್ತಿ ವಲಸೆ ಹೋಗುತ್ತಾನೆ ಎಂದು ವ್ಯಾಖ್ಯಾನಿಸಲಾಗಿದೆ"(ಚಂದ್ರಶೇಖರ ದಾಮ್ಲೆ (ಸಂ), ೨೦೦೩, ಪು. ೨೬೩).

ಒಬ್ಬ ವ್ಯಕ್ತಿ ಅಥವಾ ಒಂದು ಗುಂಪು, ವಾಸಸ್ಥಳವನ್ನು ಶಾಶ್ವತವಾಗಿ ಬದಲಾಯಿಸುವುದನ್ನು ವಲಸೆ ಎಂದು ಸಾಧಾರಣವಾಗಿ ವ್ಯಾಖ್ಯಾನಿಸಲಾಗಿದೆ. ಈ ವ್ಯಾಖ್ಯೆಯಲ್ಲಿ ಬಳಸಲಾಗಿರುವ ಶಾಶ್ವತ ಎಂಬ ಪದಕ್ಕೆ ವಿವರಣೆ ಬೇಕಾಗುತ್ತದೆ. ಕೆಲವು ತಜ್ಞರು ಈ ವ್ಯಾಖ್ಯೆಗೆ ಇನ್ನೂ ಸೀಮಿತ ಅರ್ಥ ಕೊಡುತ್ತಾರೆ. ಇವರ ಪ್ರಕಾರ ಜನರ ಬಲವಂತದ ಸ್ಥಳಾಂತರದ ಎಲ್ಲ ಪ್ರಕರಣಗಳನ್ನು ವಲಸೆ ಪದದ ವ್ಯಾಪ್ತಿಯಿಂದ ಹೊರಗಿಡಬೇಕಾಗುತ್ತದೆ. ವಲಸೆಯಲ್ಲಿನ ಶಾಶ್ವತ ಸ್ಥಳಾಂತರದ ಲಕ್ಷಣವು ಮತ್ತೊಂದು ರೀತಿಯ ಸ್ಥಳಾಂತರದ ಪ್ರಕರಣದಿಂದ ಪ್ರತ್ಯೇಕಿಸುತ್ತದೆ. ಯಾವುದೇ ಶಾಶ್ವತ ವಾಸಸ್ಥಳವನ್ನು ಹೊಂದಿರದ ಅಲೆಮಾರಿ ಜನರ ಅಲೆಮಾರಿತನವನ್ನು ವಲಸೆ ಎಂದು ಕರೆಯಲಾಗದು. ತಮ್ಮ ಉದ್ಯೋಗದ ಪ್ರದೇಶದಿಂದ ಸಾಕಷ್ಟು ದೂರದ ಪ್ರದೇಶದಲ್ಲಿ ವಾಸಿಸುತ್ತಿದ್ದು ಪ್ರತಿನಿತ್ಯ ಅಥವಾ ಕೆಲವು ಸಂದರ್ಭಗಳಲ್ಲಿ ವಾರಕೊಮ್ಮೆ, ವಾಸಸ್ಥಳ ಅಥವಾ ಉದ್ಯೋಗದ ಸ್ಥಳಗಳ ನಡುವೆ ಓಡಾಡುವ ಪ್ರಕರಣ ಮತ್ತೊಂದು ರೀತಿಯ ಜನರ ಸ್ಥಳಾಂತರವನ್ನು ಸೂಚಿಸುತ್ತದೆ. ಆದರೆ ಇದನ್ನು ವಲಸೆ ಎಂದು ಕರೆಯುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಜನರನ್ನು ಒಳಗೊಂಡಂತಹ ಪ್ರವಾಸೋದ್ಯಮದಲ್ಲಿ ತಾತ್ಕಾಲಿಕ ಸ್ಥಳಾಂತರವನ್ನು ಗಮನಿಸಬಹುದು. ಪ್ರವಾಸೋದ್ಯಮದಲ್ಲಿನ ಸ್ಥಳಾಂತರ ವಲಸೆಯನ್ನು ಹೋಲಿಸಿದರೂ ಸಹ ಪ್ರವಾಸದಲ್ಲಿನ ತಾತ್ಕಾಲಿಕ ಸ್ಥಳಾಂತರದ ಲಕ್ಷಣ ವಲಸೆಗಿಂತ ಭಿನ್ನವೆನಿಸುತ್ತದೆ. ಒಟ್ಟಿನಲ್ಲಿ ಆರ್ಥಿಕ, ಸಾಮಾಜಿಕ ಅಥವಾ ರಾಜಕೀಯ ಈ ಯಾವುದೇ ಕಾರಣಕ್ಕೋಸ್ಕರ ಒಂದು ವಾಸಸ್ಥಳಕ್ಕೆ ಜನರ ಚಲನೆಯನ್ನು ಜನರ ವಲಸೆ ಎಂದು ಕರೆಯಬಹುದು. ಅದೇ ರೀತಿ ವಲಸೆಗಾರರು ಎಂದು ಕರೆಯಲ್ಪಡುವ ಒಂದು ಸಮೂಹ ಒಂದು ಭೌಗೋಳಿಕ ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಕೈಗೊಳ್ಳುವ ಸಾಪೇಕ್ಷ ಸ್ಥಳಾಂತರವನ್ನು ವಲಸೆ ಎಂದು ವ್ಯಾಖ್ಯಾನಿಸಬಹುದು.

ವಲಸೆ ಜನಸಂಖ್ಯೆಯ ಬದಲಾವಣೆಯಲ್ಲಿ ಮೂರನೆಯ ಮುಖ್ಯ ಅಂಶ. ಇತರ ಎರಡು ಅಂಶಗಳೆಂದರೆ ಫಲವಂತಿಕೆ ಮತ್ತು ಸಾವು. ಜನಸಂಖ್ಯೆಯ ಗಾತ್ರದ ಮೇಲೆ ವಲಸೆಯು ಪ್ರಭಾವ, ಫಲವಂತಿಕೆ ಮತ್ತು ಸಾವಿಗಿಂತ ತೀರ ಭಿನ್ನವಾದುದು. ಫಲವಂತಿಕೆ ಮತ್ತು ಸಾವು ಮೂಲತಃ ಜೈವಿಕ ಚರಗಳು. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳು, ಫಲವಂತಿಕೆ ಮತ್ತು ಸಾವಿನ ಮೇಲೆ ಪ್ರಭಾವ ಬೀರಿದರೂ ಸಹ ವಾಸ್ತವವಾಗಿ

ಇವುಗಳೆರಡೂ ಜೈವಿಕ ಚೌಕಟ್ಟಿನೊಳಗೇ ಕಾರ್ಯೋನ್ಮುಖವಾಗುವವು. ಹುಟ್ಟಿದ ಪ್ರತಿ ವ್ಯಕ್ತಿಯೂ ಒಂದು ದಿನ ಸಾಯಲೇಬೇಕು; ಇದು ಪ್ರಕೃತಿಯ ಅಭೇದ್ಯ ನಿಯಮ. ಅದೇ ರೀತಿ ಮಕ್ಕಳು ಬೇಕು ಅಥವಾ ಬೇಡ ಎನ್ನುವುದನ್ನು ಮಾನವ ನಿರ್ಧರಿಸಿ ಹತೋಟಿಯನ್ನು ಸಾಧಿಸಬಹುದಾದರೂ ಮಗುವಿನ ಸೃಷ್ಟಿಯ ಪ್ರಕ್ರಿಯೆ ಜೈವಿಕ ನಿಯಮಾವಳಿಗೆ ಬದ್ಧವಾಗಿರಬೇಕು. ಇದಕ್ಕೆ ಪ್ರತಿಯಾಗಿ ವಲಸೆಯು ವಲಸೆಯಲ್ಲಿ ಭಾಗವಹಿಸುವ ವ್ಯಕ್ತಿಗಳಿಂದ ಸಂಪೂರ್ಣವಾಗಿ ನಿರ್ಧರಿಸಲ್ಪಡುವಂತಹದು. ಕೆಲವು ವಿಶೇಷ ಸಂದರ್ಭಗಳಲ್ಲಿ ಈ ಮಾತು ಅನ್ವಯವಾಗದೇ ಇದ್ದರೂ ಸಹ ಪ್ರತಿ ವಲಸೆಯು ಸಂಬಂಧಪಟ್ಟ ವ್ಯಕ್ತಿಗಳ ನಿರ್ಧಾರದಿಂದ ಪ್ರೇರೆಪಿತವಾದ, ಉದ್ದೇಶಪೂರಿತ ಚಲನೆಯಾಗಿರುತ್ತದೆ. ಅಂತೆಯೇ ವಲಸೆಯ ಚಲನವಲನಗಳು, ಒಂದು ಪ್ರದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಭೌತಿಕ ಪರಿಸ್ಥಿತಿಗಳ ಪ್ರಭಾವದ ಫಲವೆನಿಸುತ್ತವೆ. ಒಂದು ಪರಿಸರದಲ್ಲಿನ ಆರ್ಥಿಕ, ಸಾಮಾಜಿಕ ಮತ್ತು ಜನಸಂಖ್ಯಾತ್ಮಕ ಪರಿಸ್ಥಿತಿಗಳಿಗೆ ಮಾನವ ಜೀವಿಯ ಪ್ರತಿಕ್ರಿಯೆಯೇ ವಲಸೆಯಾಗಿದೆ.

ವಲಸೆಯನ್ನು ಕುರಿತಾದ ಅಧ್ಯಯನಗಳು ಗಮನಿಸಬಹುದಾದ ಮತ್ತೊಂದು ಅಂಶವೆಂದರೆ, ಜನಸಂಖ್ಯೆಯ ಗಾತ್ರ ಮತ್ತು ರಚನೆಯಲ್ಲಿ ಫಲವಂತಿಕೆ ಮತ್ತು ಸಾವಿನಿಂದಾಗಿ ತತ್‌ಕ್ಷಣದ ಅಗಾಧ ಬದಲಾವಣೆಗಳೇನೂ ಸಂಭವಿಸುವುದಿಲ್ಲ; ಆದರೆ ಯಾವುದೇ ಅವಧಿಯಲ್ಲಿ ಅದರಲ್ಲಿಯೂ ವಿಶೇಷವಾಗಿ ಹೆಚ್ಚಿನ ಸಂಖ್ಯೆಯ ಜನರು ಒಂದು ಪ್ರದೇಶದ ಒಳಗೆ ಅಥವಾ ಒಂದು ಪ್ರದೇಶದಿಂದ ಹೊರಗೆ ವಲಸೆ ಹೊರಟಾಗ ಜನಸಂಖ್ಯೆಯ ಗಾತ್ರ ಮತ್ತು ರಚನೆಯಲ್ಲಿ ದಿಢೀರ್ ಅಗಾಧ ಬದಲಾವಣೆಯನ್ನು ತರಲು ಸಾಧ್ಯವಿದೆ.

ವಲಸೆಯನ್ನು ಕುರಿತಾದ ಅಧ್ಯಯನದ ಪ್ರಾಮುಖ್ಯತೆ ಜನಸಂಖ್ಯಾಶಾಸ್ತ್ರಜ್ಞರಿಗೆ ಮಾತ್ರವಲ್ಲ, ಇದಕ್ಕೆ ಪ್ರತಿಯಾಗಿ ಅರ್ಥಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು, ಮನಃಶಾಸ್ತ್ರಜ್ಞರು ರಾಜಕೀಯ ಶಾಸ್ತ್ರಜ್ಞರು, ಕಾನೂನು, ಯೋಜನೆ ತಜ್ಞರು, ಆಡಳಿತಗಾರರು ಇವರಿಗೆಲ್ಲ ಮಹತ್ವವುಳ್ಳದ್ದು. ಏಕೆಂದರೆ ವಲಸೆಯನ್ನು ಮೂಲಭೂತ ಸಾಮಾಜಿಕ ಸ್ಥಳಾಂತರದ ಒಂದು ಕುರುಹು ಎಂದು ಪರಿಗಣಿಸಬಹುದು. ಬಹುತೇಕ ದೇಶ ವಿಭಜನೆ ಸಂದರ್ಭ ಮತ್ತು ರಾಷ್ಟ್ರಗಳಲ್ಲಿ, ಕೈಗಾರೀಕರಣ ಮತ್ತು ಆರ್ಥಿಕ ಅಭಿವೃದ್ಧಿಯೊಂದಿಗೆ ಗ್ರಾಮದಿಂದ ನಗರಕ್ಕೆ, ನಗರಗಳಿಂದ ಇತರ ನಗರಗಳಿಗೆ ಮತ್ತು ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ದೊಡ್ಡ ಪ್ರಮಾಣದಲ್ಲಿ ಜನರ ಚಲನೆಯೂ ನಡೆದಿದೆ. ಉದಾಹರಣೆಗೆ ಭಾರತ ಮತ್ತು ಪಾಕಿಸ್ತಾನ ವಿಭಜನೆ ಸಂದರ್ಭದಲ್ಲಿ ಜನರ ಶಾಶ್ವತ ಸ್ಥಳಾಂತರವಾಗಿದೆ(ಇದು ಬಲವಂತದ ಸ್ಥಳಾಂತರ) ಹಾಗೂ ತಾಂತ್ರಿಕ ಬದಲಾವಣೆಗಳನ್ನು ಅನುಭವಿಸುತ್ತಿರುವ ಏಷ್ಯ ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕ ರಾಷ್ಟ್ರಗಳು ಗ್ರಾಮಗಳಿಂದ ನಗರಗಳಿಗೆ ಯಾವುದಾದರೂ ಒಂದು ರೀತಿಯ ವಲಸೆಯನ್ನು ಅನುಭವಿಸುತ್ತಿವೆ. ಈ ವಲಸೆ ಅಲ್ಲಿನ ಬೃಹತ್ ನಗರಗಳ ಬೆಳವಣಿಗೆಗೆ ಆಸ್ಪದ ಮಾಡಿಕೊಟ್ಟಿದೆ.

ಹಾಗೆಯೇ ವ್ಯಾಪಾರದ ಚಕ್ರ, ಕುಶಲ ಮತ್ತು ಸಾಧಾರಣ ಕಾರ್ಮಿಕರ ಪೂರೈಕೆ, ಕೈಗಾರಿಕೆಗಳ ಬೆಳವಣಿಗೆ, ವಲಸೆಗಾರ ವೃತ್ತಿಯ ಮತ್ತು ಉದ್ಯೋಗದ ಸ್ಥಿತಿಗತಿಯೊಂದಿಗೆ ವಲಸೆಯು ಸಂಬಂಧವಿರುವುದರಿಂದ ಅರ್ಥಶಾಸ್ತ್ರಜ್ಞರು ಈ ಅಧ್ಯಯನದ ಬಗ್ಗೆ ಆಸಕ್ತಿ ತಳೆಯುತ್ತಾರೆ. ರಾಷ್ಟ್ರದ ಸಾಮಾಜಿಕ-ಆರ್ಥಿಕ ಅಭಿವೃದ್ಧಿಯೊಂದಿಗೆ ವಲಸೆಯ ಸಂಬಂಧವಿರುವುದರಿಂದ ನೀತಿಯನ್ನು ರೂಪಿಸುವವರೂ ಸಹ ಈ ಅಧ್ಯಯನದಲ್ಲಿ ಆಸಕ್ತಿ ತಳೆಯುತ್ತಾರೆ. ಭಾರತ ಮತ್ತು ಇತರ ಕೆಲವು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಜನಸಂಖ್ಯೆಯ ವಿಪರೀತದ ಬೆಳವಣಿಗೆ ಹಾಗೂ ಕೈಗಾರೀಕರಣ ಮತ್ತು ಆರ್ಥಿಕ ಅಭಿವೃದ್ಧಿಯ ಪ್ರಭಾವದಿಂದ ಆಂತರಿಕ ವಲಸೆಯು ಹೆಚ್ಚುತ್ತಿದೆ. ಬೃಹತ್ ಪ್ರಮಾಣದ ವಲಸೆ, ಅದರಲ್ಲಿಯೂ ಗ್ರಾಮೀಣ-ನಗರ ವಲಸೆಯು ನೀತಿ ನಿರೂಪಕರ ಗಮನವನ್ನು ಸೆಳೆಯುತ್ತಿದೆ. ಏಕೆಂದರೆ ವಲಸೆ ಹೊರಡುವ ಪ್ರದೇಶಗಳ ಜನರಿಗೆ ಸಂಬಂಧಿಸಿದ ಹಾಗೂ ವಲಸೆ ಹೋದ ಪ್ರದೇಶದ ಜನರಿಗೆ ಸಂಬಂಧಿಸಿದ ಸಾಮಾಜಿಕ ಮತ್ತು ಮಾನಸಿಕ ಸಮಸ್ಯೆಗಳನ್ನು ಕುರಿತು ವಲಸೆಗಾರರ ವಯಸ್ಸು, ಲಿಂಗ, ಮಾತೃಭಾಷೆ, ಶಿಕ್ಷಣ ಮತ್ತು ಉದ್ಯೋಗಕ್ಕೆ ಸಂಬಂಧಿಸಿದ ಮಾಹಿತಿಯು ವಲಸೆಯಿಂದಾಗಿ ಉದ್ಭವಿಸುವ ಸಮಸ್ಯೆಗಳನ್ನು ಬಗೆಹರಿಸಲು ನೀತಿ ರೂಪಿಸುವವರಿಗೆ ನೆರವಾಗಿವೆ.

ವಲಸೆಯು ಒಂದು ಪ್ರದೇಶದ ವಾಸಸ್ಥಾನದಿಂದ ಮತ್ತೊಂದು ವಾಸಸ್ಥಾನಕ್ಕೆ ನಡೆಯುವ ಜನರ ಸ್ಥಳಾಂತರ ಮಾತ್ರವೇ ಅಲ್ಲ; ಒಂದು ಪ್ರದೇಶದ ನಿರಂತರ ಪರಿವರ್ತನೆಯನ್ನು ಅರ್ಥ ಮಾಡಿಕೊಳ್ಳಲು ಸಹಕಾರಿಯೆನಿಸುವ ಸಾಧನ. ಸಾಂಸ್ಕೃತಿಕ ಪ್ರಸರಣ ಮತ್ತು ಸಾಮಾಜಿಕ ಐಕ್ಯತೆಯ ಒಂದು ಸಾಧನ ಹಾಗೂ ಜನಸಂಖ್ಯೆಯ ಅರ್ಥಪೂರ್ಣ ಪುನರ್ ವಿಂಗಡಣೆಗೆ ಸಹಕಾರಿಯೆನಿಸುತ್ತದೆ. ಒಳ-ವಲಸೆಯ ಪ್ರದೇಶ, ಹೊರ-ವಲಸೆಯ ಪ್ರದೇಶ ಮತ್ತು ವಲಸೆಗಾರರು ಹೀಗೆ ಈ ಮೂವರ ಮೇಲೂ ವಲಸೆ ಪ್ರಭಾವ ಬೀರುತ್ತದೆ. ದೀರ್ಘ ಅಥವಾ ಅಲ್ಪ ದೂರಕ್ಕೆ ಸಂಬಂಧಿಸಿದ ವಲಸೆಯಾಗಿರಲಿ, ಲಕ್ಷಾಂತರ ಅಥವಾ ಹಲವು ನೂರು ಜನರನ್ನು ಒಳಗೊಂಡ ವಲಸೆಯಾಗಿರಲಿ ಈ ಎಲ್ಲ ಸಂದರ್ಭಗಳಲ್ಲಿಯೂ ವಲಸೆಯ ಉಗಮ ಮತ್ತು ವಲಸೆಯ ಅಂತ್ಯ ಈ ಎರಡೂ ಪ್ರದೇಶಗಳಲ್ಲಿ ಹಲವು ಮಾರ್ಪಾಡುಗಳಲ್ಲಿ ಪರ್ಯವಸಾನಗೊಳ್ಳುತ್ತದೆ. ಅಂತೆಯೇ, ವಲಸೆ ಹೊರಡುವ ಪ್ರದೇಶ ಮತ್ತು ವಲಸೆ ಹೋದ ಪ್ರದೇಶ ಹಾಗೂ ಸ್ವತಃ ವಲಸೆಗಾರರು ಮೊದಲಿನಂತೆಯೇ ಉಳಿಯುವುದಿಲ್ಲ. ಇದು ಅಧ್ಯಯನಕಾರರಿಗೆ ಆಸಕ್ತಿಯನ್ನು ಹುಟ್ಟಿಸಿದೆ.

ವಲಸೆ ವಿಧಗಳು: ಅವಧಿ, ದೂರ ಮತ್ತು ಪ್ರಚೋದನೆಯ ಅಂಶಗಳ ಆಧಾರದ ಮೇಲೆ ವಲಸೆಯನ್ನು ವಿಭಾಗಿಸುವುದುಂಟು, ಅವಧಿಯ ಹಿನ್ನೆಲೆಯಲ್ಲಿ, ವಲಸೆಗಾರರು ಒಂದೆಡೆ ನೆಲೆಸುವ ಅವಧಿಯನ್ನು ಆಧಾರಿಸಿ, ಅಲ್ಪಾವಧಿ ವಲಸೆ ಅಥವಾ ದೀರ್ಘಾವಧಿ ವಲಸೆ ಎಂದು ವಿಭಾಗಿಸಲಾಗಿದೆ. ವಲಸೆಯಲ್ಲಿ ಕ್ರಮಿಸುವ ದೂರವನ್ನು ಅವಲಂಬಿಸಿ ಅಲ್ಪ-

ದೂರ ವಲಸೆ ಅಥವಾ ಬಹು-ದೂರ ವಲಸೆ ಎಂದೂ ವಿಭಾಗಿಸಬಹುದು. ಅದೇ ರೀತಿ, ಆರ್ಥಿಕ ಕಾರಣಕ್ಕೋಸ್ಕರ ವಲಸೆ ನಡೆಯುತ್ತಿದ್ದರೆ, ಆರ್ಥಿಕ ವಲಸೆ ಎಂದೂ ಅಥವಾ ವಿವಾಹ ಕಾರಣಕ್ಕೋಸ್ಕರ ವಲಸೆ ನಡೆಯುತ್ತಿದ್ದರೆ, ವೈವಾಹಿಕ ವಲಸೆ ಎಂದೂ ವಿಭಾಗಿಸಬಹುದು. ಸಾಮಾನ್ಯವಾಗಿ ಬಳಕೆಯಲ್ಲಿರುವಂತೆ ವಲಸೆಯನ್ನು ೧. ಆಂತರಿಕ ವಲಸೆ ಮತ್ತು ೨. ಅಂತಾರಾಷ್ಟ್ರೀಯ ವಲಸೆ ಎಂದು ವಿಭಾಗಿಸಿ ಅಧ್ಯಯನ ಮಾಡುವುದು ವಾಡಿಕೆ ಇದೆ.

೧. ಆಂತರಿಕ ವಲಸೆ: ಒಂದು ರಾಷ್ಟ್ರದ ಎಲ್ಲೆಯೊಳಗಡೆ ನಡೆಯುವ ವಲಸೆಯನ್ನು ಆಂತರಿಕ ವಲಸೆ ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಒಳ-ವಲಸೆ ಮತ್ತು ಹೊರ-ವಲಸೆ ಎಂಬ ಪದಗಳನ್ನು ಬಳಸುವುದುಂಟು. ಒಂದು ನಿರ್ದಿಷ್ಟ ಪ್ರದೇಶದ ಎಲ್ಲೆಯೊಳಕ್ಕೆ ಬರುವಂತಹ ವಲಸೆಯನ್ನು ಒಳ-ವಲಸೆ ಎಂದು ಕರೆದರೆ, ಒಂದು ನಿರ್ದಿಷ್ಟ ಪ್ರದೇಶದ ಎಲ್ಲೆಯಿಂದ ಹೊರಗಡೆ ಹೋಗುವ ವಲಸೆಯನ್ನು ಹೊರ-ವಲಸೆ ಎಂದು ಕರೆಯಲಾಗುತ್ತದೆ. ಒಳ ಮತ್ತು ಹೊರ ವಲಸೆ ಇವೆರಡೂ ಒಂದು ರಾಷ್ಟ್ರದ ವ್ಯಾಪ್ತಿಯೊಳಗಡೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ನಡೆಯುವಂತಹ ವಲಸೆ; ಆದ್ದರಿಂದ ಆಂತರಿಕ ವಲಸೆಯನ್ನು ವಿವರಿಸಲು ಈ ಪದಗಳನ್ನು ಬಳಸಲಾಗುತ್ತದೆ. ಅಂತೆಯೇ ತಮಿಳುನಾಡಿನಿಂದ ಕರ್ನಾಟಕಕ್ಕೆ ವಲಸೆ ಬರುವವರು, ತಮಿಳುನಾಡಿನ ದೃಷ್ಟಿಯಲ್ಲಿ ಹೊರ ವಲಸೆಗಾರರೆನಿಸಿದರೆ ಕರ್ನಾಟಕದ ದೃಷ್ಟಿಯಿಂದ ಒಳ ವಲಸೆಗಾರರೆನಿಸಿಕೊಳ್ಳುತ್ತಾರೆ. ಪ್ರತಿ ವಲಸೆಯ ಚಲನೆಯು, ವಲಸೆ ಪ್ರಾರಂಭವಾಗುವ ಪ್ರದೇಶದ ದೃಷ್ಟಿಯಿಂದ ಹೊರ ವಲಸೆ ಎನಿಸಿಕೊಂಡರೆ, ಅದೇ ಚಲನೆ ವಲಸೆಯು ತಲುಪುವ ಪ್ರದೇಶದ ದೃಷ್ಟಿಯಿಂದ ಒಳ ವಲಸೆ ಎನಿಸಿಕೊಳ್ಳುತ್ತದೆ.

೨. ಅಂತಾರಾಷ್ಟ್ರೀಯ ವಲಸೆ: ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ಜನರ ವಲಸೆ ಹೋಗುವಿಕೆಯನ್ನು ಅಂತಾರಾಷ್ಟ್ರೀಯ ವಲಸೆ ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ದೇಶಾಂತರ ವಲಸೆ ಮತ್ತು ದೇಶಾಂತರಿಕ ವಲಸೆ ಎಂಬ ಪದಗಳನ್ನು ಬಳಸುವುದುಂಟು. ಒಂದು ರಾಷ್ಟ್ರದಿಂದ ಮತ್ತೊಂದು ರಾಷ್ಟ್ರಕ್ಕೆ ವಲಸೆ ಹೋಗುವಿಕೆಯನ್ನು ದೇಶಾಂತರ ವಲಸೆ ಎಂದು ಕರೆದರೆ, ಮತ್ತೊಂದು ರಾಷ್ಟ್ರದಿಂದ ಬರುವಿಕೆಯನ್ನು ದೇಶಾಂತರಿಕ ವಲಸೆ ಎಂದು ಕರೆಯಲಾಗುತ್ತದೆ. ಭಾರತದಿಂದ ಹೊರಟು ಇಂಗ್ಲೆಂಡಿನಲ್ಲಿ ನೆಲೆಸಲು ವಲಸೆ ಹೋಗುವವರು ಭಾರತದ ದೃಷ್ಟಿಯಲ್ಲಿ ದೇಶಾಂತರ ವಲಸೆಗಾರರು ಎನಿಸಿಕೊಳ್ಳುತ್ತಾರೆ. ಅದೇ

ವಲಸೆಗಾರರು ಇಂಗ್ಲೆಂಡಿನ ದೃಷ್ಟಿಯಲ್ಲಿ ದೇಶಾಂತರಿಕ ವಲಸೆಗಾರರು ಎನಿಸಿಕೊಳ್ಳುತ್ತಾರೆ.

ವಲಸೆಯನ್ನು ನಿರ್ಧರಿಸುವ ಅಂಶಗಳು: ವಲಸೆಯನ್ನು ಕುರಿತು ಅಧ್ಯಯನ ಮಾಡುವಾಗ, ಕೆಲವು ಜನರು ವಲಸೆ ಹೋಗುತ್ತಾರೆ, ಆದರೆ ಇನ್ನು ಕೆಲವು ಜನರು ವಲಸೆ ಹೋಗುವುದಿಲ್ಲ ಏಕೆ ಎಂಬುದನ್ನು ಕುರಿತು ವಿಶ್ಲೇಷಿಸುವುದು ಅವಶ್ಯಕ. ವಲಸೆಯನ್ನು ಪ್ರೋತ್ಸಾಹಿಸುವ ಮತ್ತು ವಲಸೆಯನ್ನು ತಡೆಗಟ್ಟುವ ಅಂಶಗಳಾವುವು ಎಂಬುದನ್ನು ಗುರುತಿಸುವುದು ಅವಶ್ಯಕ. ವಲಸೆಗೆ ಇಂತಹವುಗಳೇ ಪ್ರೇರಕ ಅಂಶಗಳೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ವಲಸೆಯ ಪ್ರಮಾಣ ಮತ್ತು ವಲಸೆಯ ದಿಕ್ಕನ್ನು ವಾಸ್ತವವಾಗಿ ಹಲವಾರು ಅಂಶಗಳು ನಿರ್ಧರಿಸುತ್ತವೆ. ಇವುಗಳನ್ನು ವಲಸೆಗೆ ಉತ್ತೇಜಕ ಅಂಶಗಳು ಮತ್ತು ವಲಸೆಗೆ ಅಡಚಣೆಗಳು ಎಂದು ವಿಭಾಗಿಸಬಹುದು.

ವಲಸೆಗೆ ಉತ್ತೇಜಕ ಅಂಶಗಳು: ಎರಡು ಪ್ರದೇಶಗಳ ನಡುವಿನ ವ್ಯತ್ಯಾಸಗಳನ್ನು ಅಂದರೆ ವಲಸೆಯ ಉಗಮ ಮತ್ತು ವಲಸೆಯ ಅಂತ್ಯದ ಪ್ರದೇಶದ ವ್ಯತ್ಯಾಸಗಳನ್ನು ಗಮನದಲ್ಲಿರಿಸಿಕೊಂಡು ಸಾಂಪ್ರದಾಯಿಕ ರೀತಿಯಲ್ಲಿ ವಲಸೆಯ ಪ್ರೇರಕ ಅಂಶಗಳನ್ನು ಗುರುತಿಸುವುದು ಒಂದು ಪದ್ಧತಿ. ಹೊರದೂಡುವ ಮತ್ತು ಸೆಳೆಯುವ ಅಂಶಗಳು ಹಾಗೂ ವಲಸೆಯ ಉಗಮದ ಪ್ರದೇಶದಲ್ಲಿ ಕಂಡುಬರುವ ಹೊರದೂಡುವ ಅಂಶಗಳು ಹಾಗೂ ವಲಸೆಯ ಅಂತ್ಯದ ಪ್ರದೇಶದ ಸೆಳೆಯುವ ಅಂಶಗಳು ವಲಸೆಗೆ ಪ್ರಮುಖ ಪ್ರೇರಕ ಅಂಶಗಳೆನಿಸುತ್ತವೆ.

ಒಂದು ಪ್ರದೇಶದಲ್ಲಿ ಉಂಟಾಗುವ ಆಹಾರದ ಸರಬರಾಜಿನಲ್ಲಿ ಇಳಿಮುಖ, ನೈಸರ್ಗಿಕ ಸಂಪನ್ಮೂಲಗಳ ಕ್ಷೀಣಿಸುವಿಕೆ ಅಥವಾ ಜನಸಂಖ್ಯೆಯ ಹೆಚ್ಚಳ, ಜನರನ್ನು ಹೊರದೂಡುವ ಅಂಶಗಳೆನಿಸಿದರೆ, ಮತ್ತೊಂದು ಪ್ರದೇಶದಲ್ಲಿ ಚಿನ್ನ ಅಥವಾ ವಜ್ರಗಳು ದೊರೆಯುತ್ತವೆಂಬ ಶೋಧನೆ ಜನರನ್ನು ಸೆಳೆಯುವ ಅಂಶವಾಗಬಹುದು. ಹೊರದೂಡುವ ಅಥವಾ ಸೆಳೆಯುವ ಅಂಶಗಳಿಂದಾಗಿಯೇ ಮೂಲತಃ ಪ್ರಚೋದನೆಗೊಂಡು ಬಹಳ ಬೇಗ ಬೃಹತ್ ಪ್ರಮಾಣವನ್ನು ತಾಳಬಹುದು. ಆದರೆ ಇದು ತಾತ್ಕಾಲಿಕ ಅವಧಿಯವರೆಗೆ ಮಾತ್ರ ಸಕ್ರಿಯವಾಗಿರುತ್ತದೆ. ಸಂಪರ್ಕ ಹೆಚ್ಚಿದಂತೆ, ವಲಸೆಗೆ ಪರ್ಯಾಯವಾದುದನ್ನು ಕಂಡು ಕೊಳ್ಳಲಾಗುತ್ತದೆ ಅಥವಾ ಭಿನ್ನ ಭಿನ್ನ ಪ್ರದೇಶಗಳ ನಡುವಿನ ಪರಿಸ್ಥಿತಿಯ ವ್ಯತ್ಯಾಸವನ್ನು ಆಧರಿಸಿ ವಲಸೆಯು ಮೊದಲಿನ ಸ್ಥಿತಿಗೆ ಹಿಂದಿರುಗುತ್ತದೆ.

ವಲಸೆಯ ಪ್ರಮಾಣ ಮತ್ತು ವಲಸೆಯ ದಿಕ್ಕನ್ನು ಇತ್ತೀಚೆಗೆ ನಿರ್ಧರಿಸುತ್ತಿರುವ ಭಿನ್ನ ಭಿನ್ನ ಪ್ರದೇಶಗಳ ನಡುವಿನ ವ್ಯತ್ಯಾಸಗಳನ್ನು ಹೀಗೆ ವಿವರಿಸಬಹುದು.

ಆರ್ಥಿಕ ಅವಕಾಶಗಳ ವ್ಯತ್ಯಾಸಗಳು: ನಿರ್ದಿಷ್ಟ ರೀತಿಯ ಕಾರ್ಮಿಕರಿಗೆ ಅಥವಾ ಒಟ್ಟು ಎಲ್ಲ ರೀತಿಯ ಕಾರ್ಮಿಕರಿಗೆ ನಿರಂತರ ಬೇಡಿಕೆ ಬಹಳ ಹಿಂದಿನಿಂದಲೂ ವಲಸೆಗೆ ಒಂದು ಮುಖ್ಯ ಪ್ರೇರಕ ಅಂಶವೆನಿಸಿದೆ. ಸಂಪನ್ಮೂಲಗಳ ಶೋಧನೆ ಅಥವಾ ಅವುಗಳ ಕ್ಷೀಣಿಸುವಿಕೆಯಿಂದಾಗಿ ಉಂಟಾಗುವ ಆರ್ಥಿಕ ಅವಕಾಶಗಳಲ್ಲಿನ ವ್ಯತ್ಯಾಸ, ತಾಂತ್ರಿಕ ಕ್ಷೇತ್ರದಲ್ಲಿನ ಪ್ರಗತಿ, ಹೊಸ ವ್ಯಾಪಾರಿ ಮಾರ್ಗಗಳು, ಶ್ರಮವಿಭಜನೆಯಲ್ಲಿ ಬದಲಾವಣೆಗಳು ಮತ್ತು ಅಭಿರುಚಿಯಲ್ಲಿ ಬದಲಾವಣೆ ಇವುಗಳು ಪ್ರೇರಕ ಅಂಶಗಳಾಗಿವೆ.

ವಾಸಸ್ಥಳದ ಪರಿಸರದಲ್ಲಿನ ವ್ಯತ್ಯಾಸಗಳು: ಗೃಹ ಮತ್ತು ವಾಸಸ್ಥಳದ ಪರಿಸರದಲ್ಲಿನ ವ್ಯತ್ಯಾಸಗಳು ಇತ್ತೀಚೆಗೆ ಗ್ರಾಮ-ನಗರ ವಲಸೆಗೆ ಪ್ರೇರಕ ಅಂಶವೆನಿಸುತ್ತದೆ. ವಾಸಸ್ಥಳದಲ್ಲಿನ ಗುಣಮಟ್ಟ, ನೆರೆಹೊರೆ, ಹವಾಗುಣ ಹಾಗೂ ನೈಸರ್ಗಿಕ ವಾತಾವರಣ ಇವುಗಳೂ ವಲಸೆಗೆ ಅದರಲ್ಲಿಯೂ ವಯಸ್ಸಾದವರ ವಲಸೆಗೆ ಪ್ರೇರೆಕಗಳೆನಿಸುತ್ತವೆ.

ಸಾಮಾಜಿಕ ಸೌಲಭ್ಯಗಳಲ್ಲಿನ ವ್ಯತ್ಯಾಸಗಳು: ಆಧುನಿಕ ಮನರಂಜನಾ ಸೌಲಭ್ಯಗಳು, ಉಚ್ಚ ಶಿಕ್ಷಣ ಸಂಸ್ಥೆಗಳು ಹಾಗೂ ಆಧುನಿಕ ಸಲಕರಣೆ ಸೌಲಭ್ಯಗಳಿಂದ ಕೂಡಿದ ಆಸ್ಪತ್ರೆಗಳು ಇತ್ಯಾದಿ ಸಾಮಾಜಿಕ ಸೌಲಭ್ಯಗಳಲ್ಲಿ ಭಿನ್ನ ಪ್ರದೇಶಗಳ ನಡುವೆ ಕಂಡುಬರುವ ವ್ಯತ್ಯಾಸಗಳು ವಲಸೆಯನ್ನು ಪ್ರೇರೇಪಿಸುತ್ತವೆ.

ಸಾಂಸ್ಕೃತಿಕ ಮತ್ತು ರಾಜಕೀಯ ವ್ಯತ್ಯಾಸಗಳು: ಸಾಂಸ್ಕೃತಿಕವಾಗಿ ಮುಂದುವರಿದ ಜೀವನ ಮತ್ತು ಒಂದು ಸಮಾಜ ಒದಗಿಸುವ ಅಂತಹ ಸೌಲಭ್ಯಗಳು ಭಿನ್ನ ಭಿನ್ನ ಪ್ರದೇಶಗಳಲ್ಲಿ ವ್ಯತ್ಯಾಸವಾಗಿದ್ದರೆ ಈ ಅಂಶವು ವಲಸೆಗೆ ಪ್ರೇರಕವಾಗಬಲ್ಲದು. ಅದೇ ರೀತಿ ರಾಜಕೀಯ ಪರಿಸ್ಥಿತಿಗಳಲ್ಲಿ ಕಂಡುಬರುವ ಏರುಪೇರುಗಳು ಪ್ರೇರಕಾಂಶವೆನಿಸುತ್ತದೆ.

ವಲಸೆಗೆ ಅಡಚಣೆಗಳು: ವಾಸ್ತವವಾಗಿ ವಲಸೆಯನ್ನು ಕೈಗೊಳ್ಳಬೇಕಾದರೆ ವಲಸೆಯು ತಲುಪುವ ಪ್ರದೇಶದಲ್ಲಿನ ಪರಿಸ್ಥಿತಿ ವಲಸೆಗಾರರ ದೃಷ್ಟಿಯಲ್ಲಿ ಹೆಚ್ಚು ಅನುಕೂಲಕರ ಎನಿಸಿರಬೇಕು. ಭಿನ್ನ ಪ್ರದೇಶಗಳ ನಡುವಿನ ವ್ಯತ್ಯಾಸ ಆಕರ್ಷಣೀಯವಲ್ಲದಿದ್ದಲ್ಲಿ, ಹಲವು ಅಂಶಗಳು ವಲಸೆಗೆ ಅಡಚಣೆಗಳಾಗಿ ಪರಿಣಮಿಸಬಹುದು.

ವೈಯಕ್ತಿಕ ಹಿತಾಸಕ್ತಿ: ಭಿನ್ನ ಪ್ರದೇಶಗಳ ನಡುವಿನ ವ್ಯತ್ಯಾಸಗಳು ಎಷ್ಟೇ ಇದ್ದರೂ ಸಹ ವಲಸೆಯ ಮೇಲೆ ನೇತ್ಯಾತ್ಮಕ ಪ್ರಭಾವ ಬೀರುವ ಅಂದರೆ ವಲಸೆಗೆ ಅಡಚಣೆಯನ್ನು ಒಡ್ಡುವ ಒಂದು ಅಂಶವೆಂದರೆ, ಅದು ವೈಯಕ್ತಿಕ ಹಿತಾಸಕ್ತಿ, ಸ್ವಂತ ಆಸ್ತಿ, ಸಂಬಂಧಿಗಳ ಜೊತೆ ಹೊಂದಾಣಿಕೆ ಮತ್ತು ಸಂಪರ್ಕ, ಸ್ಥಳೀಯ ಪ್ರದೇಶದ ಪದ್ಧತಿಗಳ ಪರಿಚಯ ಇತ್ಯಾದಿ ಕಾರಣಗಳಿಂದಾಗಿ ವಲಸೆ ಹೋಗುವಿಕೆ ಅಷ್ಟೇನೂ ಲಾಭದಾಯಕವೆನಿಸದೇ ಇರಬಹುದು. ಅಂತೆಯೇ ವೈಯಕ್ತಿಕ ಹಿತಾಸಕ್ತಿಗಳು ವಲಸೆಗೆ ಅಡಚಣೆಗಳಾಗಿ ಪರಿಣಮಿಸಬಹುದು.

ದೋಷಪೂರಿತ ಸಂಪರ್ಕ: ವಲಸೆ ತಲುಪಬೇಕಾದ ಪ್ರದೇಶದಲ್ಲಿನ ಅವಕಾಶಗಳು ಮತ್ತು ಸೌಲಭ್ಯಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲದೇ ಇರುವುದು ಅಡಚಣೆ ಎನಿಸಬಹುದು. ದೋಷಪೂರಿತ ಅಥವಾ ಅಸಮರ್ಪಕ ಸಂಪರ್ಕ ಮಾಧ್ಯಮದಿಂದಾಗಿ ಬೇರೆ ಪ್ರದೇಶಕ್ಕೆ ಸಂಬಂಧಿಸಿದ ಮಾಹಿತಿ ಅಪೂರ್ಣವೆನಿಸುತ್ತದೆ.

ಸಾರಿಗೆ ವ್ಯವಸ್ಥೆಯ ತೊಂದರೆಗಳು: ವಲಸೆ ಹೋಗಲು ಅವಶ್ಯಕವಾದ ಒಂದು ಸಾಧನವೆಂದರೆ ಅದು ಸಮರ್ಪಕ ಸಾರಿಗೆ ವ್ಯವಸ್ಥೆ. ಆದರೆ ಈ ವ್ಯವಸ್ಥೆ ಅಸಮರ್ಪಕವಾಗಿದ್ದು ತೊಂದರೆಗಳು ಹೆಚ್ಚಾಗಿದ್ದರೆ, ಅದೂ ಸಹ ಅಡಚಣೆಯಾಗಿ ವರ್ತಿಸಬಹುದು. ಅದೇ ರೀತಿ ವಲಸೆಯಲ್ಲಿ ಕ್ರಮಿಸಬೇಕಾದ ದೂರವೂ ಸಹ ಒಂದು ಮುಖ್ಯ ಅಂಶವೆನಿಸುತ್ತದೆ. ತಾಂತ್ರಿಕ ಅಡಚಣೆ ಹಾಗೂ ಆರ್ಥಿಕ ಅಡಚಣೆ ಈ ದಿಸೆಯಲ್ಲಿ ವಲಸೆಗೆ ಅಡಚಣೆಗಳಾಗಿ ವರ್ತಿಸುತ್ತವೆ. ಅಂತಾರಾಷ್ಟ್ರೀಯ ವಲಸೆಯ ವಿಷಯದಲ್ಲಿ ಪ್ರಯಾಣಕ್ಕಾಗಿ ತಗಲುವ ದುಬಾರಿ ವೆಚ್ಚ ಮತ್ತೊಂದು ಅಡಚಣೆಯೆನಿಸುತ್ತದೆ.

ದೇಶಾಂತರಿಕ ವಲಸೆಗೆ ಸಂಬಂಧಿಸಿದ ನಿರ್ಬಂಧಗಳು: ದೇಶಾಂತರ ವಲಸೆ ಸಂಬಂಧಿಸಿದಂತೆ ಕಂಡುಬರುವ ಸಾಮಾಜಿಕ ನಿಷೇಧಗಳು ಹಾಗೂ ಅಂತಾರಾಷ್ಟ್ರೀಯ ವಲಸೆಗೆ ಸಂಬಂಧಿಸಿದ, ವಿವಿಧ ರಾಷ್ಟ್ರಗಳಲ್ಲಿನ ನಿಯಮಗಳು ವಲಸೆಗೆ ಅಡಚಣೆಗಳಾಗಹುದು.

ಹೀಗೆ ಭಿನ್ನ ಪ್ರದೇಶಗಳ ನಡುವೆ ಕಂಡುಬರುವ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ನೈಸರ್ಗಿಕ ಅಂಶಗಳಲ್ಲಿನ ವ್ಯತ್ಯಾಸಗಳು ವಲಸೆಗೆ ಪ್ರೇರಕ ಅಂಶಗಳೆನಿಸಹುದು. ಈ ವ್ಯತ್ಯಾಸಗಳು ಹಲವು ಪ್ರಕರಣಗಳಲ್ಲಿ, ಹಲವು ಸಂದರ್ಭಗಳಲ್ಲಿ ಹೊರದೂಡುವ ಅಂಶವಾಗಿ ಹಾಗೂ ಕೆಲವೊಮ್ಮೆ ಸೆಳೆಯುವ ಅಂಶವಾಗಿ ಕಾರ್ಯ ನಿರ್ವಹಿಸುವುದನ್ನು ಗಮನಿಸಬಹುದು. ಇವುಗಳ ಜೊತೆಯಲ್ಲಿ ಅಡಚಣೆಯ ಅಂಶವು ಸೇರಿ, ಅಂತಿಮವಾಗಿ ವಲಸೆಯ ಚಲನೆಯನ್ನು ನಿರ್ಧರಿಸಲ್ಪಡುತ್ತದೆ.

ವಲಸೆಗೆ ಸಂಬಂಧಿಸಿದಂತೆ ಹೊರದೂಡುವ–ಸೆಳೆಯುವ ಅಂಶಗಳ ವಿಶ್ಲೇಷಣೆಯು, ವಲಸೆಯನ್ನು ನಿರ್ಧರಿಸುವ ಹಲವು ಅಂಶಗಳನ್ನು ಪಟ್ಟಿ ಮಾಡುವಲ್ಲಿ ಯಶಸ್ವಿಯೆನಿಸಿದರೂ ಸಹ, ವಲಸೆಗೆ ಸಂಬಂಧಿಸಿದ ಸಿದ್ಧಾಂತವೆನಿಸುವಷ್ಟು ಯಶಸ್ವಿಯಾಗಿಲ್ಲ, ಈ ವಿಶ್ಲೇಷಣೆಯ ಮೂಲ ಪರಿಕಲ್ಪನೆಗಳನ್ನೇ ಹಲವರು ಪ್ರಶ್ನಿಸುತ್ತಾರೆ. ಈ ವಿವರಣೆಯ ಪ್ರಕಾರ ಹೊರಗಿನ ಒಂದು ಶಕ್ತಿಯಿಂದ ಪ್ರಚೋದನೆಗೊಳ್ಳುವವರೆಗೆ ಜನರು, ಒಂದಡೆ ಸ್ಥಿರವಾಗಿ ಉಳಿಯುತ್ತಾರೆ. ಇದಲ್ಲದೆ, ಅನೇಕ ವಲಸೆಯ ಪ್ರಕರಣಗಳು ಹೊರದೂಡುವ ಅಥವಾ ಸೆಳೆಯುವ ಯಾವುದಾದರೂ ಒಂದೇ ಅಂಶದಿಂದ ಪ್ರೇರಿತವಾಗಿರದೆ ಈ ಎರಡೂ ಅಂಶಗಳ ಒಟ್ಟು ಫಲದಿಂದಾಗಿ ಉಂಟಾಗುತ್ತದೆ ಎಂಬುದು ಸ್ಪಷ್ಟ. ಅಂತಿಮವಾಗಿ ಏಕ ರೀತಿಯ

ಸಂದರ್ಭಗಳು ಇದ್ದಾಗ್ಯೂ, ಕೆಲವು ಜನರು ವಲಸೆ ಹೊರಟರೆ ಇನ್ನು ಕೆಲವು ಜನರು ವಲಸೆ ಹೋಗುವುದಿಲ್ಲವೇಕೆ ಎಂಬುದನ್ನು ಈ ವಿಶ್ಲೇಷಣೆಗಳು ತಿಳಿಸುವುದಿಲ್ಲ. ಈ ಎಲ್ಲ ಸಂಗತಿಗಳನ್ನು ಅಧ್ಯಯನವು ಪರಿಶೀಲಿಸುತ್ತದೆ.

**೨.೩. ಜೀವನಾಧಾರ**

ಕನ್ನಡದ ಜೀವನಾಧಾರ ಪದವನ್ನು ಇಂಗ್ಲಿಷಿನ Livelihood/ ಪದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಈ ಬಗೆಗಿನ ಅರ್ಥ ಮತ್ತು ವ್ಯಾಖ್ಯಾನಗಳನ್ನು ನೋಡುವುದಾದರೆ ಇಂಗ್ಲಿಷ್–ಇಂಗ್ಲಿಷ್–ಕನ್ನಡ ನಿಘಂಟಿನಲ್ಲಿ "Livelihood/ laivihud means of living (ನಾ) ಜೀವನೋಪಾಯ ಎಂದು ಉಲ್ಲೇಖಿಸಲಾಗಿದೆ"(ಶೇಷಗಿರಿರಾವ್ ಎಲ್.ಎಸ್., ೨೦೦೮, ಪು. ೭೪೦). ಕನ್ನಡ ಇಂಗ್ಲಿಷ್ ನಿಘಂಟುವಿನಲ್ಲಿ "ರೈತರು ತಮ್ಮದೇ ಭೂಮಿಯಲ್ಲಿ ತಮ್ಮ ಜೀವನೋಪಾಯಕ್ಕೆ ಬೆಳೆ ಬೆಳೆಸುವ ಪದ್ಧತಿಯನ್ನು ರೈತ ಬೇಸಾಯ ಅಥವಾ ಜೀವನಾಧಾರ ಬೇಸಾಯವೆನ್ನುವರು. ಇದನ್ನು ಅಲ್ಪ ಪ್ರಮಾಣ ಕೃಷಿ ಎಂತಲೂ ಕರೆಯುವರು"( ಕಿಟಲ್ ಎಫ್., ೧೯೯೯, ಪು. ೧೭೨). ಇಂಗ್ಲಿಷ್ ಕನ್ನಡ ನಿಘಂಟಿನಲ್ಲಿ "ಲೈವ್ ಹುಡ್ (ನಾ) ಜೀವನೋಪಾಯ ಬದುಕುವ ಸಾಧನ, ಹೊಟ್ಟೆಪಾಡು ಜೀವನಾಧಾರ ಜೀವಿಕೆ ಎಂದು ಹೇಳಲಾಗಿದೆ"(ಮೈಸೂರು ವಿಶ್ವವಿದ್ಯಾನಿಲಯ, ೧೯೯೯, ಪು. ೩೮೬೧) ಇಂಗ್ಲಿಷ್–ಇಂಗ್ಲಿಷ್–ಕನ್ನಡ ನಿಘಂಟುವಿನ ಪ್ರಕಾರ "Livelihood (ನಾ) (say lyu li hund) the way in which you earn a living ಜೀವನೋಪಾಯ: ಜೀವನ ವೃತ್ತಿ ಎಂಬ ಉಲ್ಲೇಖವಿದೆ"(ಅಜಿ ಅಗ್ಗರ್ಡ್, ೧೯೮೬, ಪು. ೩೨೨).

ಇವನ್ನು ಗಮನಿಸಿದಾಗ ಜೀವನ ನಡೆಸುವುದು ಎಂದರೆ ಬದುಕುವುದು. ಜೀವನವನ್ನು ಮೇಲುಮಟ್ಟಕ್ಕೊಯ್ಯುವ ಎಲ್ಲ ವಿಧದ ಶ್ರಮದ ಕೆಲಸಗಳು ಎಂದರ್ಥ. ಅಂದರೆ ಆಹಾರ, ವಸತಿ ಮತ್ತು ಜೀವನಕ್ಕೆ ಅಗತ್ಯವಾದ ತತ್‌ಕ್ಷಣದ ಕಾಳಜಿಯನ್ನು ಒಳಗೊಂಡಂತಹವು. ಈ ಕೆಲಸಗಳು ಹೆಚ್ಚು ಅಗತ್ಯವು, ಅನಿವಾರ್ಯವು ಮೌಲ್ಯಯುತವು ಆಗಿವೆ. ಹಾಗಾಗಿ ಜಗತ್ತಿನಲ್ಲಿರುವ ಎಲ್ಲ ಸಣ್ಣ ರೈತರು ತಮ್ಮ ಜೀವನೋಪಾಯಕ್ಕಾಗಿ ಕೆಲಸ ಮಾಡುತ್ತಾರೆ. ಅವರು ಮಾರುಕಟ್ಟೆಯಲ್ಲಿ ತಾವು ಬೆಳೆದ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಮೊದಲಿಗೆ ನೆರೆಹೊರೆಯವರು ಪರಸ್ಪರ ಸಹಾಯ, ಸಹಕಾರ, ಸ್ನೇಹದಿಂದ ಕೆಲಸ ಮಾಡುತ್ತಿದ್ದರು. ಕೊಡು–ಕೊಳ್ಳುವಿಕೆ ಸಿದ್ಧಾಂತ ಅಲ್ಲಿ ಕೆಲಸ ಮಾಡುತ್ತಿತ್ತು. ಸಣ್ಣ ರೈತರು ಮತ್ತು ಮಹಿಳೆಯರು ಕೈತೋಟದಲ್ಲಿಯೇ ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುತ್ತಿದ್ದರು. ಇಲ್ಲವೆ ಕಡಿಮೆ ಬೆಲೆಯಲ್ಲಿ ಮಾರುಕಟ್ಟೆಯಲ್ಲಿ ಕೊಂಡುತಂದು ಸಂರಕ್ಷಣೆ ಮಾಡುತ್ತಿದ್ದರು. ಅದು ಮನೆಯಾಧಾರಿತ ಚಟುವಟಿಕೆಯೇ ಆಗಿತ್ತು. ಇದರಂತೆ ಬಟ್ಟೆ ಹೊಲಿಯುವುದು, ಸಣ್ಣ–ಪುಟ್ಟ ರಿಪೇರಿ ಮಾಡಿಕೊಳ್ಳುವುದು, ಎಲ್ಲವನ್ನು ನೆರೆ–ಹೊರೆಯವರು, ಸ್ನೇಹಿತರು ಮಾಡುತ್ತಿದ್ದರು.

ಆದರೆ ಸರ್ಕಾರವು ಹೊಸ ಆರ್ಥಿಕ ಮಾದರಿಯನ್ನು ತಂದು ಕೈಗಾರಿಕೆಗಳಲ್ಲಿ ಉತ್ಪಾದನೆಯಾಗುವ ವಸ್ತುಗಳನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ವ್ಯವಸ್ಥೆ ಹುಟ್ಟಿಹಾಕಿತು. ಮೊದಲನೆಯದಾಗಿ ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರ ವೇತನವನ್ನು ಹೆಚ್ಚಿಸಲಾಯಿತು. ನಾವೇ ಮಾಡಿಕೊಂಡ ಕೆಲಸ ಅಥವಾ ವಸ್ತುಗಳಿಗೆ ದುಡ್ಡು ಕೊಟ್ಟು ಕೊಂಡುತಂದ ವಸ್ತುಗಳನ್ನು ಹೋಲಿಕೆ ಮಾಡಿದಾಗ ತುಂಬಾ ವ್ಯತ್ಯಾಸಗಳು ಕಾಣಲಾರಂಭಿಸಿದವು. ಇದರಿಂದಾಗಿ ಕ್ರಮೇಣ ಜನರು ಕೆಲಸ ಮಾಡುವುದನ್ನು ಅಥವಾ ತಾವೇ ವಸ್ತುಗಳನ್ನು ತಯಾರಿ ಮಾಡಿಕೊಳ್ಳುವುದನ್ನು ನಿಲ್ಲಿಸಿದರು. ಜನರನ್ನು ಮಾರುಕಟ್ಟೆಯನ್ನೇ ಅವಲಂಬಿಸುವಂತೆ ಮಾಡಲಾಗಿದೆ. ಇನ್ನೊಂದು ಅರ್ಥದಲ್ಲಿ ಹಣದ ಅಗತ್ಯತೆ ಹೆಚ್ಚಾಯಿತು. ಬದುಕಿನ ಎಲ್ಲ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಹಣವೇ ಮಾನದಂಡವಾಗಲು ಪ್ರಾರಂಭಿಸಿತು. ಇದು ನಮಗೆ ಬೇಕಾಗಿರುವುದನ್ನು ನಾವು ಮಾಡಲು ಸಾಧ್ಯವಿದೆ ಎಂಬ ಮನಸ್ಥಿತಿಯನ್ನೇ ಕಡಿದುಹಾಕಿತು. ಇದು ಕೇವಲ ಮನಸ್ಥಿತಿ ಮಾತ್ರವಾಗಿದ್ದರೆ ಕೌಶಲ್ಯ, ಕಲೆ, ಸೃಜನಶೀಲತೆ, ಏಕಾಂತ, ತಲ್ಲೀನತೆಯನ್ನು ಕಳೆಯುವಂತೆ ಮಾಡಿತು.

ಕೃಷಿ ಕೆಲಸ ಮತ್ತು ಬೆಳೆಗಳ ನಿರ್ವಹಣೆ ಕೆಲಸ ಕಾಲಾಂತರದಲ್ಲಿ ಕಡಿಮೆ ಆಯಿತು. ಮೊದಲು ಕೃಷಿ ಮಾಡುವುದನ್ನು ಬಿಟ್ಟು ಬದುಕುವುದು ಸಾಧ್ಯವಿಲ್ಲವೆನ್ನುತ್ತಿದ್ದ ಜನರು ಅದೇ ಸಮಯಕ್ಕೆ ಕೃಷಿ ಬಿಟ್ಟು ಬದುಕುತ್ತಿದ್ದೇವೆ ಎಂದು ಹೇಳಲು ಪ್ರಾರಂಭಿಸಿದರು. ಏಕೆಂದರೆ ಕೈಗಾರಿಕೆಗಳಲ್ಲಿ ಅವರು ಕೆಲಸ ಮಾಡಲು ಪ್ರಾರಂಭಿಸಿದ್ದರು. ಅದೇ ವೇಳೆಗೆ ಕೃಷಿ ಮಾಡುವುದೆಂದರೆ ಕನಿಷ್ಠರು, ಅನಕ್ಷರಸ್ಥರು, ಯಾವುದೇ ಉತ್ತಮ ಕೆಲಸ ಸಿಗದವರು ಎಂದು ಹೇಳಲು ಪ್ರಾರಂಭಿಸಿದರು. ಸ್ವಂತ ಭೂಮಿಯಲ್ಲಿ ಕೃಷಿ ಮಾಡುವುದಕ್ಕಿಂತ ಯಾವುದೋ ಕೈಗಾರಿಕೆಯಲ್ಲಿ ಬಂಡವಾಳಶಾಹಿಗಾರರ ಕೈಕೆಳಗೆ ಕೆಲಸ ಮಾಡುವುದೇ ಅತ್ಯುತ್ತಮ ಎಂದು ಅಂದುಕೊಳ್ಳಲು, ಅದನ್ನೇ ನಂಬಲು ಪ್ರಾರಂಭಿಸಿದರು. ಇದು ಒಂದು ಕಡೆಯಲ್ಲಿ ಕೃಷಿಯ ನಿರಾಕರಣೆಯ ಜೊತೆಗೆ ಕೈಗಾರಿಕೆಗಳಲ್ಲಿ ಕೆಲಸ ಮಾಡುವುದನ್ನು ಉತ್ತಮ ಎಂಬ ಅಭಿಪ್ರಾಯ ಮೂಡಲು, ಆ ದೃಷ್ಟಿಕೋನ ಬೆಳೆಯಲು ಪ್ರಾರಂಭಿಸಿದರೆ ಇನ್ನೊಂದೆಡೆ ಕೃಷಿಯಲ್ಲಿಯೇ ಏಕಮುಖ ಕೃಷಿಸಂಸ್ಕೃತಿಯ ಉಗಮವಾಯಿತು. ಅಂದರೆ ರಸಗೊಬ್ಬರ, ಕೀಟನಾಶಕಗಳ ಬಳಕೆ, ಯಂತ್ರಗಳನ್ನು ಬಳಸುವಂತೆ ಒತ್ತಡಗಳು ಬರತೊಡಗಿದವು. ಇದು ಇನ್ನೊಂದು ಅರ್ಥದಲ್ಲಿ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವುದಾಗಿತ್ತು ಮತ್ತು ಪೆಟ್ರೋಲ್, ಡೀಸೆಲ್ ಅನ್ಯೆಸರ್ಗಿಕ ಇಂಧನಗಳ ಮೇಲೆ ಅವಲಂಬಿತರನ್ನಾಗಿ ಮಾಡುವುದಾಗಿತ್ತು. ರೈತರು ಹಾಲು, ಬೆಣ್ಣೆ, ಮೊಸರು, ಮಜ್ಜಿಗೆ, ಮಾಂಸ, ಮೊಟ್ಟೆಯನ್ನು ಬೃಹತ್ ಪ್ರಮಾಣದಲ್ಲಿ ಉತ್ಪಾದಿಸಲು ಪ್ರಾರಂಭಿಸುವಂತೆ ಯೋಜನೆಗಳು ಬಂದವು. ಈ ಮೊದಲು ಹಾಲು, ಮೊಸರು, ಬೆಣ್ಣೆ, ಮಜ್ಜಿಗೆಯನ್ನು ಜನರು ಮಾರಾಟ ಮಾಡುತ್ತಿರಲಿಲ್ಲ. ಅವುಗಳು ಜೀವನಕ್ಕೆ

ಅಗತ್ಯವಾದವು ಎಂದು ಭಾವಿಸಲಾಗಿತ್ತು. ಯಾರ ಮನೆಯಲ್ಲಿ ಇವು ಉತ್ಪಾದನೆಯಾಗುವುದಿಲ್ಲವೊ ಅಥವಾ ಯಾರಿಗೆ ಅವುಗಳು ಅಗತ್ಯವಾಗಿದೆಯೋ ಅವರಿಗೆ ನೀಡುತ್ತಿದ್ದರು. ಇದು ಸಹಾಯ, ಸಹಕಾರ, ಸ್ನೇಹದ ಸಹಬಾಳ್ವೆಯನ್ನು ಸೂಚಿಸುತ್ತಿತ್ತು. ಆದರೆ ಸರ್ಕಾರದ ನೀತಿಯಿಂದಾಗಿ ಮನೆಯಲ್ಲಿ ಮನೆಗೋಸ್ಕರ ಉತ್ಪಾದನೆಯಾಗುತ್ತಿದ್ದ ವಸ್ತುಗಳು ಮಾರುಕಟ್ಟೆಯ ಸರಕುಗಳಾಗಿ ಉತ್ಪಾದನೆಯಾಗತೊಡಗಿದವು. ಆದರೆ ಜನರ ನಡುವೆ ಇದ್ದ ಸಾಮಾಜಿಕ, ಭಾವನಾತ್ಮಕ ಸಂಬಂಧಗಳು ಚದುರಿಹೋಗಿ ವಸ್ತುಗಳಲ್ಲಿ ಕೇಂದ್ರೀಕರಣಗೊಳ್ಳುವಂತೆ ಮಾಡಿದವು. ಪ್ರಸ್ತುತ ಮನುಷ್ಯ-ಮನುಷ್ಯರನ್ನು ಪ್ರೀತಿಸುವುದಕ್ಕಿಂತ ವಸ್ತುಗಳನ್ನು ಪ್ರೀತಿಸುವುದು, ಗೌರವಿಸುವುದು ಇದೆ. ಉದಾಹರಣೆಗೆ ಒಬ್ಬ ಸೈಕಲ್ ಬಳಸುತ್ತಿರುವ ವ್ಯಕ್ತಿಗಿಂತ ಕಾರು ಬಳಸುವ ವ್ಯಕ್ತಿಯನ್ನು ಹೆಚ್ಚು ಗೌರವಿಸಲಾಗುತ್ತದೆ. ಅಂದರೆ ವ್ಯಕ್ತಿ ಎಷ್ಟರ ಮಟ್ಟಿಗೆ ಪರಿಸರಕ್ಕೆ ಸ್ನೇಹಿಯಾಗಿದ್ದಾನೆ, ಎಷ್ಟು ಕಡಿಮೆ ಪರಿಸರ ವಿರೋಧಿಯಾಗಿದ್ದಾನೆ ಎಂದು ಯೋಚಿಸುವ ದೃಷ್ಟಿಕೋನವೇ ಮಾಯವಾಗಿದೆ. ವ್ಯಕ್ತಿಯ ಅಳೆಯುವಿಕೆ ಆತನಲ್ಲಿರುವ ವಸ್ತುಗಳನ್ನು ಅವಲಂಬಿಸಿದೆಯೇ ಹೊರತು ಆತನ ವ್ಯಕ್ತಿತ್ವ, ನಡತೆ, ಯೋಚನೆಯನ್ನು ಅಲ್ಲ ಎಂಬುದು ಸಾಬೀತಾಯಿತು.

ಇದಕ್ಕಾಗಿ ಜನರು ಹೆಚ್ಚು ಹೆಚ್ಚು ಉತ್ಪಾದನೆ ಮಾಡಲು ಸಬ್ಸಿಡಿಗಳನ್ನು ನೀಡಲು ಸರ್ಕಾರ ಪ್ರಾರಂಭಿಸಿತು. ಅಭಿವೃದ್ಧಿಶೀಲ ರಾಷ್ಟ್ರಗಳು ಈ ಅವಕಾಶವನ್ನು ಬಳಸಿಕೊಂಡವು. ಅದೇ ತೆರನಾಗಿ ಕೃಷಿ ಯೋಜನೆಯನ್ನು ಅನುಷ್ಠಾನಗೊಳಿಸಲು ಪ್ರಾರಂಭಿಸಲಾಯಿತು. ಉದಾಹರಣೆಗೆ ಹಸಿರುಕ್ರಾಂತಿಯಿಂದಾಗಿ ಸಣ್ಣ ರೈತರು ತಮ್ಮ ಕೃಷಿ ಭೂಮಿಯನ್ನು ಕಳೆದುಕೊಂಡರು. ಏಕೆಂದರೆ ಬೃಹತ್ ಪ್ರಮಾಣದ ಉತ್ಪಾದನೆ ಸಣ್ಣ ರೈತರಿಂದ ಸಾಧ್ಯವಾಗುವುದಿಲ್ಲ ಮತ್ತು ಸಾಲವನ್ನು ಮರುಪಾವತಿ ಮಾಡಲೂ ಸಾಧ್ಯವಾಗದು. ಅಂದರೆ ಒಂದು ಕಡೆ ಅವರಿಗೆ ಇರುವ ಸ್ವಲ್ಪ ಭೂಮಿಯಲ್ಲಿ ಹೆಚ್ಚು ಹೆಚ್ಚು ಉತ್ಪಾದನೆ ಮಾಡಲು ಆಗದು, ಇನ್ನೊಂದು ಕಡೆ ಇರುವ ಭೂಮಿಯಲ್ಲಿಯೇ ಜೀವನೋತ್ಪಾದನೆಗೆ ದುಡಿಯಲು ಸಾಧ್ಯವಾಗದು. ಈ ಎಲ್ಲ ಪರಿಸ್ಥಿತಿಗಳಿಂದಾಗಿ ಗ್ರಾಮೀಣ ಜನರು ತಮ್ಮ ಅಲ್ಪ-ಸ್ವಲ್ಪ ಭೂಮಿಯನ್ನು ಮಾರಾಟ ಮಾಡಿ ನಗರಗಳಿಗೆ ವಲಸೆ ಹೋದರು. ಅಲ್ಲಿಯ ಕೊಳಚೆ ಪ್ರದೇಶಗಳಲ್ಲಿ ನೆಲೆ ನಿಂತರು. ಅವರ ಪರಿಸ್ಥಿತಿ ಬಾಣಲೆಯಿಂದ ಬೆಂಕಿಗೆ ಹಾಕಿದಂತಾಯಿತು. ನಗರದಲ್ಲಿ ಅವರು ಜೀವನೋಪಾಯದ ಉತ್ಪಾದನೆಯನ್ನು ಪ್ರಯೋಗಿಸಿದರು. ಜನರು ಹೇಗಾದರೂ ಬದುಕಬೇಕಿತ್ತು. ಅವರಿಗೆ ಏನು ಮಾಡಲು ಸಾಧ್ಯವೋ ಅದೆಲ್ಲವನ್ನು ಮಾಡಲು ಪ್ರಾರಂಭಿಸಿದರು. ಅನೌಪಚಾರಿಕ ಕಾರ್ಮಿಕರಂತೆ ಕೆಲಸ ಮಾಡಿದರು.

ಈ ಮೊದಲು ಇದ್ದ ಜೀವನೋಪಾಯ ದೃಷ್ಟಿಕೋನದಲ್ಲಿ ಕೊಡು-ಕೊಳ್ಳುವಿಕೆ ಮೂಲಕ ತಮಗೆ ಬೇಕಾದನ್ನು ಪಡೆಯಬಹುದಾಗಿತ್ತು. ಇದು ಹಳೆಯದಾದರೂ ಸಕಾರಾತ್ಮಕ ದೃಷ್ಟಿಕೋನವಾಗಿತ್ತು. ಈಗಾಗಲೇ ರಚಿಸಲ್ಪಟ್ಟ/ ಆರೋಪಿಸಿಕೊಂಡ/ ಹೊರೆಸಿಕೊಂಡ

ಜೀವನಶೈಲಿಗಿಂತ ಕಡಿಮೆ ಮಟ್ಟದಲ್ಲಿ ಬದುಕುವುದು ಎಂದರೆ ನಮ್ಮ ಸಾರ್ವಭೌಮತ್ವವನ್ನು ನಾವು ಮರಳಿ ಪಡೆಯುವುದಾಗಿತ್ತು. ನಮ್ಮ ಬದುಕಿನ ಮೇಲೆ ನಮ್ಮದೇ ಅಧಿಕಾರ ಹೊಂದುವುದೇ ಹೊರತು ಕೊರತೆ ಅಲ್ಲ ಎಂದು ಭಾವಿಸಬೇಕಾಗಿತ್ತು. ಆದರೆ ಅದು ಹಾಗೆ ಆಗಲಿಲ್ಲ. ಹಾಗಾಗಿ ಭಾರತದಲ್ಲಿ ಗ್ರಾಮೀಣ ಪ್ರದೇಶದಿಂದ ನಗರದ ಕಡೆ ವಲಸೆ ಹೋಗುವುದು ಎಲ್ಲ ಕಡೆಗಳಲ್ಲಿ ಕಂಡುಬರುವ ಸಂಗತಿ. ಇದಕ್ಕೆ ಸರ್ಕಾರ ಪ್ರೇರಿತ ಅರ್ಥಿಕತೆ ಜೊತೆಗೆ ಅನೇಕ ಕಾರಣಗಳಿವೆ. ಅಂದರೆ ಗ್ರಾಮೀಣ ಜನತೆ ಕೃಷಿಯನ್ನು ಅವಲಂಬಿಸಿರುವುದು. ಕೃಷಿ ಮಳೆ ಮೇಲೆ ನಿಂತಿದೆ. ಮಳೆ ಕಾಡನ್ನು ಅವಲಂಬಿಸಿದೆ. ಜಾಗತೀಕರಣದಿಂದಾಗಿ ಕಾರ್ಖಾನೆಗಳ ವೃದ್ಧಿ ಮತ್ತು ಬಂಡವಾಳ ಆರ್ಥಿಕತೆ ಕಾಡುಭೂಮಿಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಪರಿಣಾಮ ಮಳೆ ಕಡಿತಗೊಂಡಿದೆ. ಅಂದರೆ ಕೃಷಿ ಅವಲಂಬಿತ ಜನರು ಜೀವನೋಪಾಯಕ್ಕಾಗಿ ಕಷ್ಟ ಪಡುತ್ತಿದ್ದಾರೆ. ಅಂದರೆ ಆಹಾರ, ನೀರಿಗಾಗಿ ಹೆಣಗುತ್ತಿದ್ದಾರೆ. ಗ್ರಾಮೀಣ ಜನರಿಗೆ ಕೆಲಸ ಒದಗಿಸಲು ಉದ್ಯೋಗ ಖಾತ್ರಿಯು ಸೇರಿದಂತೆ ಜನರಿಗೆ ಅನುಕೂಲ ಮಾಡಿಕೊಡಲು ಅನೇಕ ಯೋಜನೆಗಳು ಬಂದವು. ಲಿಂಗ ಅಸಮಾನತೆಯು ರಚನಾತ್ಮಕ ಹೊಂದಾಣಿಕೆ ಯೋಜನೆಗಳಲ್ಲೂ ಕಂಡುಬಂದಿತು. ಮತ್ತೊಂದಡೆ ಕೃಷಿ ಕೂಲಿ ಕಡಿಮೆಯಾಯಿತು ಮತ್ತು ಗ್ರಾಮೀಣ ನಿರುದ್ಯೋಗದ ಪ್ರಮಾಣ ಹೆಚ್ಚಿತು ಮತ್ತು ಗ್ರಾಮೀಣ–ನಗರ ವಲಸೆಯು ಹೆಚ್ಚಿತು. ಇಷ್ಟು ಮಾತ್ರವಲ್ಲದೆ ಜಾತಿ, ಅಂತರ್‌ಜಾತಿ ವಿವಾಹ, ಸಂಘರ್ಷ (ವ್ಯಾಜ್ಯ), ಶಿಕ್ಷಣದಿಂದ ದೊರೆತ ಸಂಘಟಿತ ವಲಯದ ಉದ್ಯೋಗ ಇತ್ಯಾದಿ ತಳ್ಳುವ ಅಂಶಗಳಾಗಿವೆ. ಇದರಿಂದ ಅರ್ಥವಾಗುವುದೇನೆಂದರೆ ವಲಸೆ ಮತ್ತು ಜೀವನಾಧಾರ ಒಂದಕ್ಕೊಂದು ಸಂಬಂಧಪಟ್ಟಿವೆ. ಮಾನವನ ಸಂಚಲನೆಗೆ ಜೀವನಾಧಾರವೇ ಅಗತ್ಯವಾದ ಲಕ್ಷಣವಾಗಿದೆ.

ಮಹಿಳೆಯು ವಲಸೆ ಕುಟುಂಬದ ಸದಸ್ಯಳಾಗಿ ಸಹವಲಸಿಗಳಾಗಿ ಹೋಗುವುದುಂಟು. ಜೊತೆಗೆ ವಲಸೆ ಹೋದ ಮನೆಯ ಸದಸ್ಯರಾಗಿ ಮಹಿಳೆ ಕಾರ್ಯ ನಿರ್ವಹಿಸುವುದು ಇದೆ. ಹಾಗಾಗಿ ಗ್ರಾಮೀಣ–ನಗರ ವಲಸೆ ಮತ್ತು ಅಂತಾರಾಷ್ಟ್ರೀಯ ವಲಸೆಗಳಲ್ಲಿ ಮಹಿಳೆಯರು ಇರುವುದು ಕಂಡುಬರುತ್ತದೆ. ಹಾಗಾದರೆ ವಲಸೆ ಸಿದ್ಧಾಂತಗಳು ಲಿಂಗಸಂಬಂಧವನ್ನು ಏನಾದರೂ ಪರಿಗಣಿಸಿವೆಯಾ? ಇದ್ದರೆ ಅದರ ಸ್ವರೂಪ ಯಾವುದು ಇಲ್ಲದಿದ್ದರೆ ಸ್ತ್ರೀವಾದಿಗಳು ವಲಸೆ ಸಿದ್ಧಾಂತಗಳನ್ನು ವಿಮರ್ಶಿಸುವ ನೆಲೆ ಯಾವುದು ಎಂಬುದೇ ಕುತೂಹಲ ತರುವ ಸಂಗತಿಯಾಗಿದೆ. ಅದನ್ನು ಮುಂದಿನ ಅಧ್ಯಾಯದಲ್ಲಿ ಪರಿಶೋಧಿಸಲಾಗಿದೆ.

**ಆಕರ ಗ್ರಂಥಸೂಚಿ**

ಅಜಿ ಅಗ್ಗರ್ಡ್ ೧೯೮೬, ಇಂಗ್ಲಿಷ್–ಇಂಗ್ಲಿಷ್–ಕನ್ನಡ ನಿಘಂಟು: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ಪು. ೩೨೨.

ಅಚ್ಚಗನ್ನಡ ನುಡಿಕೋಶ, ೧೯೯೩, ಪುಟ್ಟಣ್ಣಗೌಡರು ಪುಸ್ತಕ ಪ್ರಕಾಶನ, ಮೈಸೂರು, ಪು. ೪೩೫.

ಇಂಗ್ಲಿಷ್–ಕನ್ನಡ ನಿಘಂಟು(ಸಂಪುಟ ೧–೪), ೨೦೦೭, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು, ಪು. ೨೧೯೦, ೩೩೨೯.

ಒಡೆಯರ್ ಡಿ. ಹೆಗ್ಗಡೆ, ೨೦೦೭, ಮಹಿಳಾ ಅಧ್ಯಯನಗಳ ಪದಕೋಶ: ಅರ್ಥಶಾಸ್ತ್ರ ವಿಭಾಗ, ಸರ್ ಎಂ.ವಿ.ಪಿ.ಜಿ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ: ಮೈಸೂರು ಪು. ೪೫೯, ೫೦೩.

ಕನ್ನಡ ನಿಘಂಟು(ಸಂಪುಟ ೭), ೧೯೯೩, ಕ.ಸಾ.ಪ: ಚಾಮರಾಜಪೇಟೆ, ಬೆಂಗಳೂರು, ಪು. ೭೭೧೪, ೭೮೦೪.

ಚಂದ್ರಪೂಜಾರಿ ಎಂ., ೨೦೧೪, ಸಂಶೋಧನೆ ಪರಿಭಾಷೆ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೭.

ಚಂದ್ರಶೇಖರ ದಾಮ್ಲೆ(ಸಂ), ೨೦೦೩, ಸಮಾಜ ವಿಜ್ಞಾನಗಳ ಪಾರಿಭಾಷಿಕ ಪದಕೋಶ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೬೩.

ಜಾನ್ ಸ್ಕಾಟ್ ಆ್ಯಂಡ್ ಗೋರ್ಡಾನ್ ಮಾರ್ಷಲ್(ಇಡಿ), ೨೦೦೯, ಆಕ್ಸ್‌ಫರ್ಡ್ ಡಿಕ್ಷನರಿ ಆಫ್ ಸೋಷಿಯಾಲಜಿ: ಆಕ್ಸ್‌ಫರ್ಡ್ ಯೂನಿರ್ವಸಿಟಿ ಪ್ರೆಸ್, ಆಕ್ಸ್‌ಫರ್ಡ್, ಪು. ೨೭೬.

ಕಿಟ್ಟೆಲ್ ಎಫ್., ೧೯೯೯, ಕನ್ನಡ ಇಂಗ್ಲಿಷ್ ಡಿಕ್ಷನರಿ: ಏಶಿಯನ್ ಏಜುಕೇಷನಲ್ ಸರ್ವೀಸ್, ನ್ಯೂ ಡೆಲ್ಲಿ, ಪು. ೧೩೮೨, ೧೭೨.

ವೆಂಕಟಸುಬ್ಬಯ್ಯ ಜಿ., ೨೦೦೬, ಪ್ರಿಸಮ್ ಇಂಗ್ಲಿಷ್ ಕನ್ನಡ ನಿಘಂಟು: ಪ್ರಿಸಮ್ ಬುಕ್ ಪ್ರೈ. ಲಿ., ಬೆಂಗಳೂರು, ಪು. ೧೯೩, ೩೦೬.

ಶಂಕರ ಭಟ್ಟ ಡಿ.ಎನ್, ೨೦೧೫, ಇಂಗ್ಲಿಷ್ ಕನ್ನಡ ಪದಕೋಶ: ಹೊನ್ನೆಸರ, ಸಾಗರ ಪು. ೩೯೪.

ಶ್ರೀಮತಿ ಎಚ್.ಎಸ್., ೨೦೧೮, ಸ್ತ್ರೀವಾದ ಪದಸೂಚಿ: ಅಭಿನವ ಪ್ರಕಾಶನ, ಬೆಂಗಳೂರು, ಪು. ೨೯೪.

ಶೇಷಗಿರಿರಾವ್ ಎಲ್.ಎಸ್., ೨೦೦೮, ಇಂಗ್ಲಿಷ್–ಇಂಗ್ಲಿಷ್ ಕನ್ನಡ ನಿಘಂಟು: ಸುಭಾಷ್ ಸ್ಟೋರ್ಸ್ ಬುಕ್ ಕಾರ್ನರ್, ಬೆಂಗಳೂರು, ಪು. ೫೫೯, ೭೮೫, ೭೪೦.

ಶೈಲಜ ಎಂ.ಸಿ., ೨೦೧೨, ಗ್ರಾಮ ಪಂಚಾಯಿತಿ ಚುನಾಯಿತ ಮಹಿಳಾ ಸದಸ್ಯರ ಸಾಮರ್ಥ್ಯ ಅಭಿವೃದ್ಧಿ ತರಬೇತಿ ಕೈಪಿಡಿ: ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು, ಪು. ೮–೯.

## ಅಧ್ಯಾಯ ಮೂರು

# ವಲಸೆ ಮತ್ತು ಲಿಂಗವ್ಯವಸ್ಥೆ: ವಿಭಿನ್ನ ದೃಷ್ಟಿಕೋನಗಳು

ಅಧ್ಯಾಯ ಮೂರು

# ವಲಸೆ ಮತ್ತು ಲಿಂಗವ್ಯವಸ್ಥೆ: ಭಿನ್ನ ದೃಷ್ಟಿಕೋನಗಳು

ಪ್ರಸ್ತುತ ಅಧ್ಯಾಯದಲ್ಲಿ ವಲಸೆ ಸಂಬಂಧಿ ಸಾಂಪ್ರದಾಯಿಕ ಸಿದ್ಧಾಂತಗಳನ್ನು ಚರ್ಚಿಸಲಾಗಿದೆ. ಈ ಸಿದ್ಧಾಂತಗಳು ಲಿಂಗವ್ಯವಸ್ಥೆಯನ್ನು ಒಳಗೊಳ್ಳುವಲ್ಲಿ ವಿಫಲವಾಗಿರುವುದನ್ನು ಗುರುತಿಸಲಾಗಿದೆ. ನಂತರ ಮಹಿಳಾ ಅಭಿವೃದ್ಧಿಯ ಸ್ಥಿತ್ಯಂತರಗಳನ್ನು ಹಾಗೂ ಭಾರತದಲ್ಲಿ ಮಹಿಳಾ ವಲಸೆಯ ಸಂಬಂಧಿ ಚಿಂತನೆಗಳನ್ನು ಚರ್ಚಿಸಲಾಗಿದೆ.

## ೩.೧. ವಲಸೆ ಕುರಿತ ದೃಷ್ಟಿಕೋನಗಳು

ವಲಸೆಯ ಕಾರಣ, ಸ್ವರೂಪಗಳು ಭಿನ್ನವಾಗಿವೆ ಮತ್ತು ಸಂಕೀರ್ಣವಾಗಿವೆ. "ವಲಸೆಯ ನಿರ್ದಿಷ್ಟ ಕಾರಣಗಳನ್ನು ಗುರುತಿಸುವಲ್ಲಿ ಸಂಶೋಧಕರ ನಡುವೆ ಯಾವುದೇ ಸಾರ್ವತ್ರಿಕ ನಿಲುವು ಮತ್ತು ಸಾಮತ್ಯೆ ಕಂಡುಬರುವುದಿಲ್ಲ"(ಹ್ಯಾರಿಸ್ ಜೆ. ಆರ್ ಮತ್ತು ಟೊಡಾರೊ ಎಂ.ಪಿ, ೧೯೭೦, ಪು. ೧೨೬). "ವಲಸೆಯ ನಿರ್ಣಾಯಕ ಅಂಶಗಳು ಮತ್ತು ಪ್ರೇರಣೆಗಳ ಬಗೆಗಿನ ಚರ್ಚೆಗಳಲ್ಲಿಯೂ ಸಾಮ್ಯತೆ ಕಂಡುಬರುವುದಿಲ್ಲ ಅಂದರೆ ಜನರು ವಲಸೆ ಹೋಗಲು ಆ ಪ್ರದೇಶದಲ್ಲಿ ಲಭ್ಯವಿರುವ ಉದ್ಯೋಗಾವಕಾಶಗಳು, ಬರುವ ಆದಾಯ, ಸೇವೆಗಳು, ಸೌಕರ್ಯಗಳು, ಜೀವನಾಧಾರದ ವೆಚ್ಚಗಳು ಮತ್ತು ಆ ಪರಿಸರದಲ್ಲಿ ಹೊಂದಿಕೊಳ್ಳಲು ಆಗುವ ಅಮೂರ್ತ ವೆಚ್ಚದಂತಹ ಅಂಶಗಳನ್ನು ವಿಶ್ಲೇಷಣೆಯಲ್ಲಿ ಪರಿಗಣಿಸಬೇಕು. ಕೆಲ ಸಮಾಜ ವಿಜ್ಞಾನಿಗಳು ವಲಸೆ ಪ್ರಕ್ರಿಯೆಯಲ್ಲಿ ಒಳಗೊಂಡಿರುವ ಚಲನಶಾಸ್ತ್ರವನ್ನು ವಿವರಿಸಲು ಕೆಲವು ಸಿದ್ಧಾಂತಗಳನ್ನು ಮಂಡಿಸಿದ್ದಾರೆ"(ಉಧೃತ: ಜಸ್ಪಿನಾ ಡುಗ್ಗಾಜಾ, ೨೦೧೨, ಪು.೪೫). ಈ ಸಿದ್ಧಾಂತಗಳು ಜನರು ವಲಸೆ ಯಾಕೆ ಹೋಗುತ್ತಾರೆ ಮತ್ತು ವಲಸೆ ಹೋಗುವುದನ್ನು ನಿರ್ಧರಿಸುವ ಅಂಶಗಳಾವವು ಎಂಬುದನ್ನು ವ್ಯಾಖ್ಯಾನಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ ವಲಸೆ ಕುರಿತ ಸೈದ್ಧಾಂತಿಕ ಚರ್ಚೆಗಳನ್ನು ಮೂರು ಹಂತದಲ್ಲಿ ಗುರುತಿಸಲಾಗಿದೆ. ಒಂದು: ಗ್ರಾಮೀಣ-ನಗರ ವಲಸೆಯ ದ್ವಿ ಆರ್ಥಿಕ ಮಾದರಿ, ಎರಡು: ಗ್ರಾಮೀಣ-ನಗರ ವಲಸೆಯ ನವ ಆರ್ಥಿಕತೆಯ ಮಾದರಿ ಮತ್ತು ಮೂರು: ನವ ಆರ್ಥಿಕತೆ ಮಾದರಿಯಲ್ಲಿ ನಗರ ಮತ್ತು ಗ್ರಾಮೀಣ ವಲಸೆ. ಇವನ್ನು ಮುಂದೆ ಚರ್ಚಿಸಲಾಗಿದೆ.

**ಗ್ರಾಮೀಣ–ನಗರ ವಲಸೆಯ ದ್ವಿ ಆರ್ಥಿಕ ಮಾದರಿ:**

೧೮೮೦ರ ದಶಕದಲ್ಲಿ ರವೆನ್ಸ್ಟೀನ್ ವಲಸೆಯ ಕುರಿತು ಕಾನೂನನ್ನು ರಚನೆ ಮಾಡಿದ ನಂತರ ಸಮಾಜ ವಿಜ್ಞಾನಿಗಳು ವಲಸೆಯ ಪ್ರಮಾಣ ಮತ್ತು ಮಾದರಿಗಳ ಕುರಿತು ಆಸಕ್ತಿಯನ್ನು ವಹಿಸಿದರು. ರವೆನ್ಸ್ಟೀನ್ ಅವರು "ವಲಸೆ–ದೂರ ಪ್ರಾಕಲ್ಪನೆಯನ್ನು ಸ್ಥಾಪಿಸಿದರು. ಇದು ದೂರ(ಅಂತರ)ಕ್ಕೆ ಸಂಬಂಧಪಟ್ಟಿದೆ. ಅಂದರೆ ಕಡಿಮೆ ದೂರದಲ್ಲಿ ಹೆಚ್ಚು ವಲಸೆಗಳು ಆಗುತ್ತವೆ ಎಂದು ಹೇಳಿದ. ರವೆನ್ಸ್ಟೀನ್ ಪ್ರಕಾರ ವಲಸಿಗರ ಸಂಖ್ಯೆಯು 'ಹೀರಿಕೊಳ್ಳುವ ಕೇಂದ್ರ'ದಲ್ಲಿ ಹೆಚ್ಚಾಗುತ್ತದೆ. ಅದರ ದೂರ ಕಡಿಮೆ ಇರುತ್ತದೆ ಎಂದ. ಆದ್ದರಿಂದ ಈ ಸಿದ್ಧಾಂತವು ವಲಸಿಗರನ್ನು ದೊಡ್ಡ ಕೈಗಾರಿಕಾ ಕೇಂದ್ರ ಪ್ರದೇಶಗಳು ಆಕರ್ಷಿಸುತ್ತವೆ ಎಂದು ಪ್ರತಿಪಾದಿಸಿದ. ಇದನ್ನು ಅಭಿವೃದ್ಧಿಶೀಲ ರಾಷ್ಟ್ರಗಳು ನಗರ–ಗ್ರಾಮೀಣ ವಲಸೆಯನ್ನು ವಿವರಿಸುವ ಪ್ರಮೇಯವಾಗಿ ಸ್ವೀಕರಿಸಿದವು. ಈ ಸಂಗತಿಯನ್ನೇ ಪ್ರತಿಪಾದಿಸಿದವು.

ರವೆನ್ಸ್ಟೀನ್ ಎರಡನೆಯ ಪ್ರಾಕಲ್ಪನೆಯು ವಲಸೆಯ ಅಂತರ ಅಥವಾ ದೂರವನ್ನು ವಿಲೋಮವಾಗಿ ವಿವರಿಸಿದ. ಈತನ ಪ್ರಕಾರ ಹೆಚ್ಚಿನ ವಲಸೆಗಳು ಕಡಿಮೆ ದೂರದಲ್ಲಿ ಸಂಭವಿಸುತ್ತವೆ. ಇದರ ಅನ್ವಯ ನಗರ ಕೇಂದ್ರಗಳಿಗೆ ಸಮೀಪವಿರುವ ಹಳ್ಳಿಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ಜನ ವಲಸೆ ಬರುವ ಸಾಧ್ಯತೆ ಇದೆ ಎಂದು ವಾದಿಸಿದ. ನಗರ ಕೇಂದ್ರಗಳಿಗೆ ದೂರದಲ್ಲಿರುವ ಹಳ್ಳಿಗಳಿಂದ ವಲಸೆ ಬರುವವರ ಸಂಖ್ಯೆ ಕಡಿಮೆ ಇರುತ್ತದೆ ಎಂದ. ಅಂದರೆ ಗ್ರಾಮದ ನಿವಾಸಿಗಳು ಮೊದಲು ಹತ್ತಿರದ ಪಟ್ಟಣಗಳಿಗೆ ವಲಸೆ ಹೋಗಲು ಬಯಸುತ್ತಾರೆ. ನಂತರ ದೊಡ್ಡ ಪಟ್ಟಣಗಳಿಗೆ ನಂತರ ದೂರವಿರುವ ನಗರಗಳಿಗೆ ಹೋಗಲು ಬಯಸುತ್ತಾರೆ. ಇದನ್ನು ರವೆನ್ಸ್ಟೀನ್ ಹಂತ–ಹಂತದ ವಲಸೆ ಎಂದು ಕರೆದ.

ನಂತರ ಅವರು ಚರ್ಚಿಸುವ ಪ್ರಮುಖ ಸಂಗತಿಯೆಂದರೆ 'ತಳ್ಳುವುದು–ಎಳೆಯುವ' ಪ್ರಕ್ರಿಯೆ ವಲಸೆಯನ್ನು ನಿಯಂತ್ರಿಸುತ್ತದೆ ಎಂಬುದು. ಅಂದರೆ ಒಂದು ಪ್ರದೇಶದಲ್ಲಿ ಜೀವನ ನಡೆಸಲು ಕಷ್ಟವಾದಂತಹ ಅಂಶಗಳು ತಮ್ಮ ಸಮುದಾಯಗಳ ಜನರನ್ನು ತಳ್ಳುತ್ತವೆ. ಇನ್ನೊಂದು ಪ್ರದೇಶದಲ್ಲಿರುವ ಅನುಕೂಲಕರವಾದ ಪರಿಸ್ಥಿತಿಗಳು ಜನರನ್ನು ಸೆಳೆಯುತ್ತವೆ ಎಂದು ಹೇಳಿದ. ವಲಸೆಯ ಮೇಲೆ ಸಾಮಾಜಿಕ ವರ್ಗ, ವಯಸ್ಸು ಮತ್ತು ವ್ಯಕ್ತಿಯ ಸಾಮರ್ಥ್ಯವು ಪರಿಣಾಮ ಬೀರುತ್ತದೆ ಎಂದು ರವೆನ್ಸ್ಟೀನ್ ತನ್ನ ಅಧ್ಯಯನದಿಂದ ದೃಢೀಕರಿಸಿದ"(ರವೆನ್ಸ್ಟೀನ್ ಅರ್ನೆಸ್ಟ್ ಜಾರ್ಜ್, ೧೮೮೯, ಪು.೨೪೧, ೩೦೫). ನಂತರ ಕೆಲವು ಸಂಶೋಧನೆಗಳು ಈ ಅಂಶಗಳನ್ನು ಪುಷ್ಟೀಕರಿಸಿದವು. ಆದರೆ ಅಡೆಮೊಜು "ರವೆನ್ಸ್ಟೀನ್ ವಲಸೆಯ ಪ್ರಾಕಲ್ಪನೆಗೆ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದ. ಅಂದರೆ ರವೆನ್ಸ್ಟೀನ್ ಹೇಳಿದ ದೂರ ಕಡಿಮೆಯಾದಂತೆ ವಲಸೆಯ ಸಂಖ್ಯೆ ಹೆಚ್ಚಾಗುತ್ತದೆ ಎನ್ನುವ

ಅಭಿಪ್ರಾಯವನ್ನು ನಿರಾಕರಿಸಿ, ವಲಸೆ ಹೋಗಲು ಇರುವ ಪ್ರಮುಖ ಕಾರಣವೆಂದರೆ ಆರ್ಥಿಕ ಅಂಶಗಳಾಗಿವೆ. ಇದರ ಜೊತೆಗೆ ಸರಕು ಮತ್ತು ಸಾಗಣೆಯಲ್ಲಾದ ಅಭಿವೃದ್ಧಿಯು ವಲಸೆಯ ಗತಿಯನ್ನು ಹೆಚ್ಚಿಸುತ್ತದೆ ಎಂದು ವಾದಿಸಿದ"(ಅಡೆಪೋಜು ಅಡೆರೆಂಟ್, ೨೦೦೮ ಪು. ೨೧). ಇದರಲ್ಲಿ ಇನ್ನೊಂದು ಪರಿಗಣಿಸಬೇಕಾದ ಅಂಶವೆಂದರೆ ಸಂಪರ್ಕದಲ್ಲಿ ಇರುವ ಮೂಲ ಜನರನ್ನು ಕಾಪಾಡಿಕೊಳ್ಳುವುದು, ಅಲ್ಲಿನ ಖರ್ಚು-ವೆಚ್ಚಗಳು ಮತ್ತು ದೀರ್ಘಾವಧಿಯ ಪ್ರಯಾಣದ ತೊಂದರೆ ಆಗಿದೆ ಎಂದ. ಮುಂದುವರಿದು ರವೆನ್ಸ್ಟೀನ್ ಮಂಡಿಸಿದ ವಲಸೆಯು ಹಂತ-ಹಂತಗಳಲ್ಲಿ ಜರುಗುತ್ತದೆ ಎಂಬ ವಾದವನ್ನು ಸಹ ಅಡೆಪೂಜು ವಾದಿಸಿದ. ಆದರೆ ರವೆನ್ಸ್ಟೀನ್‌ರ ವಲಸೆಗೆ ನೀಡಿದ ಕೊಡುಗೆ ಎಂದರೆ ವ್ಯಕ್ತಿಯ ಸಾಮಾಜಿಕವರ್ಗ ವ್ಯಕ್ತಿಯ ಚಲನಶೀಲತೆಯ ಮೇಲೆ ಪರಿಣಾಮ ಬೀರುತ್ತದೆ ಎಂಬುದು.

ಸ್ಟೌಫರ್ "ಎರಡು ಸ್ಥಳಗಳ ನಡುವಿನ ವಲಸೆ ಮಟ್ಟವು ಅವುಗಳ ನಡುವೆ ಇರುವ ಅವಕಾಶಗಳ ಮೇಲೆ ಅವಲಂಬಿತವಾಗಿದೆ ಎಂದ. ಇವರ ಅಧ್ಯಯನವು ವಲಸಿಗರು ಎಲ್ಲಿ ಹೋಗುತ್ತಾರೆ ಎನ್ನುವುದಕ್ಕಿಂತ ವಲಸೆ ಹೋಗುವ ಸ್ಥಳದ ಸ್ವರೂಪದ ಮೇಲೆ ಹೆಚ್ಚು ಅವಲಂಬಿತವಾಗಿರುತ್ತದೆ. ವಲಸೆ ಹೋಗಲು ವಲಸಿಗರಿಗೆ ಹತ್ತಿರವಿರುವ ಪ್ರದೇಶಗಳು, ಸಾಮಾಜಿಕ ಮತ್ತು ಆರ್ಥಿಕ ಅವಕಾಶಗಳನ್ನು ಒದಗಿಸುವ ಪ್ರದೇಶಗಳು ವಲಸಿಗರ ನಿರ್ಧಾರದ ಮೇಲೆ ಹೆಚ್ಚು ಪ್ರಭಾವವನ್ನು ಬೀರುತ್ತವೆ ಎಂದು ವಾದಿಸಿದ"(ಉಧೃತ: ಜಸ್ಟಿನಾ ಡುಗ್ಬಾಜಾ, ೨೦೧೨, ಪು. ೫).

ಎವೆರೆಟ್ ಲೀ ರವೆನ್ಸ್ಟೀನ್ ಸಿದ್ಧಾಂತವನ್ನು ಪುನರಾವರ್ತಿಸಿ, ತನ್ನ ಸೈದ್ಧಾಂತಿಕ ಚೌಕಟ್ಟಿನಲ್ಲಿ ತಳ್ಳುವ ಮತ್ತು ಎಳೆಯುವ ಅಂಶಗಳಿಗೆ ಹೆಚ್ಚು ಮಹತ್ವ ನೀಡಿದ. ಅಷ್ಟೇ ಅಲ್ಲ, ವಲಸೆಯ ಪರಿಮಾಣ, ಗುಣಲಕ್ಷಣ, ನಿರ್ಧಾರ ಕೈಗೊಳ್ಳುವಿಕೆಯನ್ನು ವಿಶ್ಲೇಷಿಸಲು ಒಂದು ಚೌಕಟ್ಟನ್ನು ಅಭಿವೃದ್ಧಿಪಡಿಸಿದ. ಎವೆರೆಟ್ ಲೀ ಅವರು "ವಲಸೆಯ ಉಗಮ ಮತ್ತು ಗುರಿಗೆ ವಲಸೆಯ ಸಕಾರಾತ್ಮಕ ಮತ್ತು ನಕಾರಾತ್ಮಕ ಲಕ್ಷಣಗಳು ಕಾರಣವಾಗುತ್ತವೆ ಎಂದು ವಾದಿಸಿದ. ಜೊತೆಗೆ ವಲಸೆಯ ಪರಿಮಾಣದ ವಿಶ್ಲೇಷಣೆಯಲ್ಲಿ ತಳ್ಳುವ ಅಂಶಗಳನ್ನು ಆಕರ್ಷಿಸುವ ಅಂಶಗಳೆಂದು ಮತ್ತು ಆ ಸ್ಥಳದಲ್ಲಿರುವ ಸಾಮಾಜಿಕ-ಆರ್ಥಿಕ ಅವಕಾಶಗಳನ್ನು ಎಳೆಯುವ ಅಂಶಗಳೆಂದು ಇವನ್ನು ಆ ಪ್ರದೇಶದ ಕುಸಿದ ಸಾಮಾಜಿಕ-ಆರ್ಥಿಕ ಅವಕಾಶಗಳೆಂದು ವರ್ಗೀಕರಿಸಿದ. ಆತನ ಪ್ರಕಾರ ಸಕಾರಾತ್ಮಕ ಅಂಶಗಳಿಗಿಂತ ನಕಾರಾತ್ಮಕ ಅಂಶಗಳು ಹೆಚ್ಚು ಶಕ್ತಿಯುತವಾಗಿವೆ. ಆದ್ದರಿಂದ ವಲಸಿಗರನ್ನು ಆ ಪ್ರದೇಶದಿಂದ ಹೊರಗೆ ತಳ್ಳಲಾಗುತ್ತದೆ. ಒಂದು ವೇಳೆ ಎಳೆಯುವ ಅಂಶಗಳು ಹೆಚ್ಚು ಶಕ್ತಿಯುತವಾಗಿದ್ದರೆ ವಲಸಿಗರನ್ನು ಅಲ್ಲಿಯೇ ಕೂಡಿ ಹಾಕುತ್ತಿದ್ದವು ಎಂದು ವಾದಿಸಿದ. ೧೯೫೦ರಿಂದ ಅಭಿವೃದ್ಧಿಶೀಲ ರಾಷ್ಟ್ರಗಳ ಗ್ರಾಮೀಣ ಬಡತನ ವಲಸಿಗರನ್ನು ಹೊರಹಾಕಿತು. ಆದರೆ ದೊಡ್ಡ ನಗರಗಳೊಂದಿಗಿನ ಹೆಚ್ಚಿನ ಆದಾಯ ಮತ್ತು ಸಾಂಸ್ಕೃತಿಕ ಸೌಲಭ್ಯಗಳು ವಲಸಿಗರನ್ನು ಹೆಚ್ಚು ಆಕರ್ಷಿಸಿದವು.

ಮುಂದುವರಿದು ಅವರು ವಲಸೆಗೆ ಇರುವ ಅಡ್ಡಿಗಳನ್ನು ವಿವರಿಸಿದರು. ಅಂದರೆ ವಲಸೆ ಹೋಗುವ ಪ್ರದೇಶದ ದೂರ, ಭೌತಿಕ ಮತ್ತು ರಾಜಕೀಯ ಅಡೆತಡೆಗಳು, ಮಕ್ಕಳಂತಹ ಅವಲಂಬಿತರು ವಲಸೆ ಹೋಗುವುದನ್ನು ತಡೆಗಟ್ಟಬಹುದು ಎಂದ. ವಲಸೆ ಪ್ರಕ್ರಿಯೆಯು ಆಯ್ಕೆಯ ಅವಕಾಶವಾಗಿದೆ. ಏಕೆಂದರೆ ವಯಸ್ಸು, ಸಾಮಾಜಿಕ ವರ್ಗದ ಜನರು ತಳ್ಳುವ-ಎಳೆಯುವ ಅಂಶಗಳಿಗೆ ಸ್ಪಂದಿಸುತ್ತಾರೆ ಮತ್ತು ಈ ಪರಿಸ್ಥಿತಿಗಳು ಜನರಿಗೆ ಅಡ್ಡಿ ಇರುವ ಅಂಶಗಳನ್ನು ಸಹ ನಿವಾರಿಸುತ್ತವೆ. ಇದಲ್ಲದೆ ವ್ಯಕ್ತಿಯ ಶಿಕ್ಷಣ, ಸಾಮರ್ಥ್ಯ, ಜನಸಂಖ್ಯೆಯ ಬಗೆಗಿನ ಜ್ಞಾನ, ಕೌಟುಂಬಿಕ ಸಂಬಂಧಗಳು ಸಹ ವಲಸೆಯ ಅನುಕೂಲಗಳನ್ನು ಪಡೆಯಲು ಅಥವಾ ಹಿಂಪಡೆಯಲು ಸಾಧ್ಯವಾಗುತ್ತವೆ ಎಂದು ವಿವರಿಸಿದ"(ಉಧೃತ: ಹೆಲೆನ್ ಗಿನ್ ಡೌಘರ್ಟಿ, ೧೯೯೫, ಪು.೧೧೪-೧೧೬).

ಎವರೇಟ್ ಲೀ ಸಿದ್ಧಾಂತ ಹೆಚ್ಚು ಅನ್ವಯವಾಗುವುದು ಸಮಕಾಲೀನ ಸಮಾಜದಲ್ಲಿ ಬದಲಾಗುತ್ತಿರುವ ಸಾಮಾಜಿಕ-ಆರ್ಥಿಕ ಸಂದರ್ಭಗಳಿಗೆ. ವಲಸೆಯು ಲಿಂಗ, ವರ್ಗ, ವಯಸ್ಸು ಮತ್ತು ವೈಯಕ್ತಿಕ ಅಂಶಗಳು ವಲಸೆಯನ್ನು ಪ್ರಭಾವಿಸುತ್ತವೆ ಎನ್ನುವ ಮೂಲಕ ವಲಸೆ ಸಿದ್ಧಾಂತವನ್ನು ವಿಸ್ತರಿಸಿದ. ಲಿಂಗವ್ಯವಸ್ಥೆಯನ್ನು ವಲಸೆಯ ಒಂದು ಅಂಶವೆಂದು ಪರಿಗಣಿಸಿದ ವಿನಾ ಲಿಂಗವನ್ನು ವಿಶ್ಲೇಷಣೆಯ ಸಾಧನವಾಗಿ ಅಭಿವೃದ್ಧಿಪಡಿಸಲಿಲ್ಲ. ಹಾಗಾಗಿ ರವೆನ್ಸ್ಟೀನ್ ಸಿದ್ಧಾಂತದ ಹಾಗೇ ಎವರೇಟ್ ಲೀ ಅವರ ಸಿದ್ಧಾಂತವು ಸಹ ಸಮಾಜದ ಸಾಮಾಜಿಕ-ಆರ್ಥಿಕ ಬದಲಾವಣೆಗಳನ್ನು ವಿಶ್ಲೇಷಿಸಲು ಅಸಮರ್ಪಕವಾಯಿತು ಎನ್ನಬಹುದು.

ಲೆವಿಸ್ "ವಲಸೆಯು ಗ್ರಾಮೀಣ ಕೃಷಿ ವಲಯದಿಂದ ಆಧುನಿಕ ನಗರ ಕೈಗಾರಿಕೆಗಳಿಗೆ ಸ್ಥಿತ್ಯಂತರಗಳೆಂದು ಹೇಳಿದ. ಕೃಷಿಯಲ್ಲಿ ಕಾರ್ಮಿಕರ ಸಂಖ್ಯೆ ಒಂದೇ ತೆರನಾಗಿ ಇರುತ್ತದೆ. ಆದರೆ ಕೈಗಾರಿಕೆಗಳಲ್ಲಿ ಕಾರ್ಮಿಕರ ಸಂಖ್ಯೆಯಲ್ಲಿ ದಿನದಿಂದ ದಿನಕ್ಕೆ ಹೆಚ್ಚಳವಾಗುತ್ತದೆ. ಆದಕಾರಣ ಲೆವಿಸ್ ಗ್ರಾಮೀಣ ಪ್ರದೇಶದಿಂದ ಕಾರ್ಮಿಕರ ಮಿತಿ ನಗರ ಪ್ರದೇಶದ ಕಾರ್ಮಿಕರ ಕೊರತೆಯನ್ನು ನೀಗಿಸುತ್ತದೆ, ಇದು ಗ್ರಾಮೀಣ-ನಗರ ವಲಸೆಗೆ ಕಾರಣವಾಗುತ್ತದೆ. ಲೆವಿಸ್ ಪ್ರಕಾರ ಗ್ರಾಮೀಣ ಕೃಷಿಯಲ್ಲಿ ಹೆಚ್ಚುವರಿ ಕಾರ್ಮಿಕರಿದ್ದಾರೆ. ಗ್ರಾಮೀಣ ಆರ್ಥಿಕತೆಯು ಹೆಚ್ಚುವರಿ ಕೆಲಸಗಾರರಿಂದ ಕೂಡಿದೆ. ಈ ದೃಷ್ಟಿಕೋನವು ಆಧುನಿಕ ಕೈಗಾರಿಕೆಗಳಿಗೆ ಕೃಷಿಕಾರ್ಮಿಕರನ್ನು ಪೂರೈಸಲು ಸಾಧ್ಯವಾಗುತ್ತದೆ. ಕೈಗಾರಿಕೆಯು ಬಂಡವಾಳವನ್ನು ಸಂಗ್ರಹಿಸಿ ಕೃಷಿಕಾರ್ಮಿಕರನ್ನು ತಮ್ಮ ಕೈಗಾರಿಕಾ ಕೆಲಸಗಳಿಗೆ ಬಳಸಿಕೊಳ್ಳುವಂತೆ ಮಾಡುತ್ತದೆ. ಇದರಿಂದ ಕೃಷಿ ಕಾರ್ಮಿಕರು ಬೆಳೆಯಬಹುದು ಎಂದು ವಾದಿಸಿದ. ಗ್ರಾಮೀಣ ಪ್ರದೇಶದ ಹೆಚ್ಚು ಕಾರ್ಮಿಕರನ್ನು ಆಧುನಿಕ ಕೈಗಾರಿಕೆ ಕ್ಷೇತ್ರ ತನ್ನತ್ತ ಸೆಳೆಯುವುದರ ಮೂಲಕ ವಲಸೆ ಸಂಭವಿಸುತ್ತದೆ ಎಂದು ಪ್ರತಿಪಾದಿಸಿದ"(ಉಧೃತ: ಹೆಲೆನ್ ಗಿನ್ ಡೌಘರ್ಟಿ, ೧೯೯೫, ಪು.೧೧೪-೧೧೬). ಇದನ್ನು ವಿದ್ವಾಂಸರು ವಿಮರ್ಶಿಸಿದರು.

ವಿಮರ್ಶಕರ ಪ್ರಕಾರ ಗ್ರಾಮೀಣ ಕೃಷಿಯಲ್ಲಿ ಸಂಬಳದ ಕಲ್ಪನೆ, ಹಣದ ರೂಪ ಇರದು, ಅವರ ಜೀವನಾಧಾರ ಮಟ್ಟಕ್ಕೆ ಯಾವುದೇ ತೊಂದರೆಯನ್ನುಂಟು ಮಾಡುವುದಿಲ್ಲ, ಅವರು ತಮ್ಮದೇ ಪ್ರದೇಶದಲ್ಲಿ ಸಂತೋಷ, ನೆಮ್ಮದಿಯಿಂದ ಜೀವನವನ್ನು ನಡೆಸಬಹುದಿತ್ತು. ಆದರೆ ಅವರ ವಲಸೆಯು ನೆಮ್ಮದಿ, ಸಂತೋಷವನ್ನುಂಟು ಮಾಡಿದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಜೀವನಾಧಾರ ಕಾರಣಕ್ಕಾಗಿ ವಲಸೆ ಬಂದಿರುವರು ಎಂದು ಭಾವಿಸಿದರು.

ಇನ್ನೊಬ್ಬ ಸಿದ್ಧಾಂತಿ ವೀಕ್ಸ್ "ವಲಸೆಯ ಸ್ಥಿತ್ಯಂತರ ಪ್ರಾಕಲ್ಪನೆಯನ್ನು ಪರಿಚಯಿಸಿದ. ವೈಯಕ್ತಿಕ ಮತ್ತು ಕೌಟುಂಬಿಕ ಮಟ್ಟದ ತಾತ್ಕಾಲಿಕ ಬದಲಾವಣೆಗಳಲ್ಲಿ ವಲಸೆಯು ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಆಧುನೀಕರಣ ಮತ್ತು ವಲಸೆಯ ನಡುವಿನ ಸಂಬಂಧವು ಸಾಮಾಜಿಕ ಆರ್ಥಿಕ ಬದಲಾವಣೆಯು ಆಧುನೀಕರಣದೊಂದಿಗೆ ಅಂತರ್ಗತವಾಗಿದೆ ಎಂದು ಪ್ರತಿಪಾದಿಸಿದ. ಈ ತೆರನಾದ ಬದಲಾವಣೆಗಳು ವ್ಯಕ್ತಿಯ ವೈಯಕ್ತಿಕ ಆದ್ಯತೆಗಳನ್ನು ಹೆಚ್ಚಿಸಲು, ಕಡಿಮೆ ಅವಕಾಶಗಳೊಂದಿಗೆ ಆಧುನಿಕ ಸೌಕರ್ಯ ಮತ್ತು ಅವಕಾಶಗಳನ್ನು ಹೊಂದುವುದಕ್ಕಾಗಿ ಬೇರೆ ಸ್ಥಳಗಳಿಗೆ ವಲಸೆ ಹೋಗುವುದನ್ನು ನಿರ್ಧಾರ ಮಾಡುತ್ತವೆ. ಹೀಗಾಗಿ ಸಮಾಜಗಳು ಆಧುನೀಕರಣ ಮಾರ್ಗದಲ್ಲಿ ಚಲಿಸಬೇಕಾದಾಗ ವಲಸೆಯು ಕನಿಷ್ಠ ಬದಲಾವಣೆಗೆ ಕಾರಣವಾಗುತ್ತದೆ. ಇದು ಸಾಮಾಜಿಕ-ಆರ್ಥಿಕ ಅಭಿವೃದ್ಧಿಯ ನಡುವಿನ ಉತ್ತಮ ಅವಕಾಶಗಳನ್ನು ಜನರು ಬಳಸಿಕೊಳ್ಳುವಾಗ ನಡೆಯುವ ಒಂದು ಪ್ರಕ್ರಿಯೆ ವಲಸೆಯಾಗಿದೆ ಎಂದು ವಾದಿಸಿದ"(ಉಧೃತ: ಜೆಲಿನ್ಸ್ಕಿ, ವಿಲ್ಬರ್, ೧೯೭೧, ಪು. ೨೧೯-೨೪೯). ಒಟ್ಟಿನಲ್ಲಿ ಇದರಲ್ಲಿ ಲಿಂಗಸಂಬಂಧಿ ಸಂಗತಿಗಳು ಕಾಣೆಯಾಗಿರುವುದು ಕಂಡುಬರುತ್ತದೆ.

**ಗ್ರಾಮೀಣ-ನಗರ ವಲಸೆಯ ನವ ಆರ್ಥಿಕತೆಯ ಮಾದರಿ**

ವಲಸೆಯನ್ನು ಪರೀಕ್ಷಿಸಲು ಹಲವಾರು ಸಿದ್ಧಾಂತಗಳು ರೂಪಗೊಂಡಿವೆ. ಆದರೆ ಅವುಗಳು ತಳ್ಳುವ ಮತ್ತು ಎಳೆಯುವ ಸಿದ್ಧಾಂತದ ರೂಪಾಂತರಗಳಾಗಿವೆ. ನವಶಾಸ್ತ್ರೀಯ ಆರ್ಥಿಕ ಸಿದ್ಧಾಂತಗಳು ವ್ಯಕ್ತಿಯ ವೈಯಕ್ತಿಕ ನಡವಳಿಕೆಯ ವರ್ತನೆಯನ್ನು ಉತ್ತಮ ಪಡಿಸುವ ತತ್ವಗಳ ಮೇಲೆ ರಚನೆಯಾದವು. ಸಾಂಪ್ರದಾಯಿಕ ಸೂಕ್ಷ್ಮ-ಆರ್ಥಿಕ ಮಾದರಿಗಳು ವಲಸೆಯನ್ನು ಆರ್ಥಿಕ ವಿದ್ಯಮಾನವೆಂದು ಪರಿಗಣಿಸಿದವು. ಇದರಲ್ಲಿ ವಲಸಿಗರು ತಮ್ಮ ಪ್ರಸ್ತುತ ಮತ್ತು ಭವಿಷ್ಯದ ಉದ್ಯೋಗಾವಕಾಶಗಳನ್ನು ಲೆಕ್ಕ ಹಾಕುವರೆಂದು ಭಾವಿಸುತ್ತದೆ. ಅಲ್ಲದೆ ಇದು ಆಂತರಿಕ ವಲಸೆಯು ಕಾರ್ಮಿಕರ ಬೇಡಿಕೆ ಮತ್ತು ಪೂರೈಕೆ ಜಾಗತಿಕ ವಿದ್ಯಮಾನ ಎಂದು ವಾದಿಸಿತು.

ಇದರ ವಕ್ತಾರರಲ್ಲಿ ಟೊಡಾರೊ ಒಬ್ಬರು. ಅವರ ಗ್ರಾಮೀಣ-ನಗರ ವಲಸೆಯ ಸಿದ್ಧಾಂತವು ವಲಸೆಗೆ ಒಂದು ಹೊಸ ತಿರುವನ್ನು ನೀಡಿತು. ಅವರ ಪ್ರಕಾರ "ವಲಸಿಗರು

ಆರ್ಥಿಕ ಉತ್ತಮ ಸ್ಥಾನಮಾನಕ್ಕಾಗಿ, ಆದಾಯದ ಅಂತರ ಹೆಚ್ಚಳಕ್ಕಾಗಿ, ಉತ್ತಮ ಉದ್ಯೋಗ ಪಡೆಯುವುದಕ್ಕಾಗಿ ವಲಸೆ ಹೋಗುವರು ಎಂಬುದು ಅವರ ಪ್ರಮೇಯದ ತಿರುಳಾಗಿತ್ತು. ಟೊಡಾರೊ ನಗರಗಳಲ್ಲಿ ಉದ್ಯೋಗವನ್ನು ಹುಡುಕುವ ಸಂಭವನೀಯತೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡದೆ ಜೊತೆಗೆ ಅಲ್ಲಿ ಹೆಚ್ಚು ವೇತನವನ್ನು ಪಡೆಯುವ ಅವಕಾಶವಿದೆ. ಇದು ಅಂತಿಮವಾಗಿ ವಲಸೆಗೆ ವಲಸೆಗಾರರನ್ನು ಪ್ರೇರೆಪಿಸುತ್ತದೆ ಎಂದು ವಾದಿಸಿದ. ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ನಗರವು ನಿರೀಕ್ಷಿತ ಗ್ರಾಮೀಣ ವೇತನವನ್ನು ಮೀರಿದಾಗ ಗ್ರಾಮೀಣ–ನಗರ ವಲಸೆಯು ಸಂಭವಿಸುತ್ತದೆ. ವಲಸೆಗಾರರ ನಿರೀಕ್ಷಿತ ವರಮಾನವು ಮತ್ತು ವಲಸೆಯ ನಿರ್ಧಾರವು 'ನಿರೀಕ್ಷಿತ ನಿಜವಾದ ಗಳಿಕೆಗಿಂತ' ವಲಸೆಗಾರರ ಗ್ರಹಿಕೆಗೆ ಒಳಗಾಗುತ್ತದೆ ಎಂದು ಹೇಳಿದ. ಟೊಡಾರೊ ಸಿದ್ಧಾಂತವು ವಲಸೆಗಾರರ ಉದ್ದೇಶ ಮತ್ತು ನಿರ್ಣಯವನ್ನು ಅರ್ಥಶಾಸ್ತ್ರ ಕೇಂದ್ರಿತ ದೃಷ್ಟಿಕೋನದಿಂದ ವಿವರಿಸಿದ. ಆತ ನಿರುದ್ಯೋಗದ ಪ್ರಭುತ್ವವನ್ನು ವಿವರಿಸಲು ವೆಚ್ಚ–ಲಾಭದ ಮಾದರಿಯನ್ನು ಬಳಸಿದ. ವಲಸೆ ಪ್ರದೇಶಗಳಾದ ನಗರ ಕೇಂದ್ರಗಳು ನಿರೀಕ್ಷಿತ ಆದಾಯ ವಿಭಿನ್ನತೆಯಿಂದಾಗಿ ವಲಸಿಗರನ್ನು ಆಕರ್ಷಿಸುತ್ತವೆ ಎಂದು ವಾದಿಸಿದ"(ಉಧೃತ: ಹ್ಯಾರಿಸ್ ಜೆ. ಆರ್ ಮತ್ತು ಟೊಡಾರೊ ಎಂ.ಪಿ., ೧೯೭೦, ಪು.೧೨೬).

ಟೊಡಾರೊ ಮತ್ತು ಜಾನ್ ಹ್ಯಾರಿಸ್ ಜಂಟಿಯಾಗಿ ರೂಪಿಸಿದ ಚಿಂತನೆಯಲ್ಲಿ ಗ್ರಾಮೀಣ–ನಗರದ ವ್ಯತ್ಯಾಸಗಳನ್ನು ಸಾಬೀತು ಮಾಡಿರುವುದು. ಅಂದರೆ ವಲಸೆಗೆ ಪ್ರಮುಖ ಕಾರಣ ನಿರೀಕ್ಷಿಸಿದ ಆದಾಯದಲ್ಲಿ ನಗರ ನಿರುದ್ಯೋಗ ದರವು ಸಮತೋಲನ ಪಾತ್ರ ವಹಿಸುತ್ತದೆ. ಗ್ರಾಮೀಣ–ನಗರ ವಲಸೆ ಕಾರಣಗಳ ಕುರಿತಾದ ಚರ್ಚೆ ಕಾರ್ಮಿಕರನ್ನು ಹೀರಿಕೊಳ್ಳಲು ಗ್ರಾಮೀಣ–ನಗರ ವಲಸೆಯ ದರವನ್ನು, ನಗರ ಸಾಮಾಜಿಕ ಸೇವೆಗಳ ಮತ್ತು ಉದ್ಯಮದ ಸಾಮರ್ಥ್ಯವನ್ನು ಮೀರಿವೆ"(ಹ್ಯಾರಿಸ್ ಜೆ. ಆರ್. ಮತ್ತು ಟೊಡಾರೊ ಎಂ.ಪಿ., ೧೯೭೦, ಪು.೧೨೮–೧೩೩). ಇವರ ವಿಶ್ಲೇಷಣೆ ಮಾದರಿಗಳು "ದ್ವಿಮಾನ ಆರ್ಥಿಕತೆಯಲ್ಲಿ ಆಂತರಿಕ ವಲಸೆಯ ಪಾತ್ರವನ್ನು ಪರಿಗಣಿಸುತ್ತವೆ. ನಗರ ಪ್ರದೇಶವು ಗ್ರಾಮೀಣ ವಲಸೆಯಿಂದ ಕಾರ್ಮಿಕರ ಸಾಮರ್ಥ್ಯವನ್ನು ಸೆಳೆಯುತ್ತದೆ. ಜೊತೆಗೆ ನಗರ ಪ್ರದೇಶಗಳಲ್ಲಿನ ನಿರುದ್ಯೋಗದ ಸ್ವರೂಪ ಅದರ ಆಂತರಿಕ ವಲಸೆಯೊಂದಿಗೆ ಬೆರೆತಿದೆ. ಮುಂದುವರಿದು ವಲಸೆ ಪ್ರದೇಶಗಳಲ್ಲಿನ ನಿರೀಕ್ಷಿತ ಆದಾಯದ ನಡುವಿನ ವ್ಯತ್ಯಾಸವು ವೈಯಕ್ತಿಕ ವಲಸೆ ನಿರ್ಧಾರಗಳನ್ನು ಆಧರಿಸಿವೆ. ನಗರ ಪ್ರದೇಶದ ನಿರುದ್ಯೋಗ ದರಗಳು ಅಧಿಕವಿದ್ದರೂ ಗ್ರಾಮೀಣ ಜನರನ್ನು ನಗರ ತನ್ನತ್ತ ಆಕರ್ಷಿಸುತ್ತದೆ. ಗ್ರಾಮೀಣ ವೇತನಕ್ಕಿಂತ ಕಡಿಮೆ ವೇತನವನ್ನು ಪಡೆಯುತ್ತಿದ್ದರೂ ವ್ಯಕ್ತಿಗಳು ವಲಸೆ ಹೋಗುತ್ತಾರೆ. ನಗರಗಳು ಅವರನ್ನು ಅಷ್ಟು ಆಕರ್ಷಿಸುತ್ತವೆ"(ಹ್ಯಾರಿಸ್ ಜೆ. ಆರ್. ಮತ್ತು ಟೊಡಾರೊ ಎಂ.ಪಿ., ೧೯೭೦, ಪು.೧೩೬–೧೪೨). ವಲಸಿಗರು ಗ್ರಾಮೀಣ ಪ್ರದೇಶದ ಕೆಲವು ಕೌಶಲ್ಯಯುತವಾದ

ಕೆಲಸಗಳನ್ನು ಕೊನೆಗೊಳಿಸಿ, ಅವರು ಉತ್ತಮವಾದ ಕೆಲಸದ ನಿರೀಕ್ಷೆಯನ್ನು ಇಟ್ಟುಕೊಳ್ಳುತ್ತಾರೆ. ಒಂದು ರೀತಿಯಲ್ಲಿ ಇರುವುದೆಲ್ಲವನ್ನು ಬಿಟ್ಟು ಇರದುದರ ಕಡೆಗೆ, ಉತ್ತಮವಾದುದು ನಮಗೆ ಸಿಕ್ಕೇ ಸಿಗುತ್ತದೆ ಎಂಬ ದೃಷ್ಟಿಕೋನವನ್ನು ತೋರಿಸುವರು. ಅಂದರೆ ಅವರು ವಲಸೆಯಿಂದ ಭವಿಷ್ಯದಲ್ಲಿ ಉತ್ತಮ ಉದ್ಯೋಗ ಅವಕಾಶವನ್ನು ನಿರೀಕ್ಷಿಸುತ್ತಾರೆ. ಈ ಚರ್ಚೆಯು ಕಳೆದ ದಶಕದಲ್ಲಿ ನಡೆದ ವಲಸೆಯು ನಿರುದ್ಯೋಗವನ್ನು ಸೃಷ್ಟಿಸಬಹುದು ಎಂಬುದನ್ನು ಲೆಕ್ಕಿಸದೇ ನಗರ ಪ್ರದೇಶಗಳಿಗೆ ವಲಸಿಗರ ಹೆಚ್ಚಿನ ಹರಿವನ್ನು ವಿವರಿಸಿದೆ. ವಲಸೆ ಕುರಿತ ಈ ಚೌಕಟ್ಟಿನ ನವಶಾಸ್ತ್ರೀಯ ಆರ್ಥಿಕ ವಿವರಣೆಗಳು ಆರ್ಥಿಕ ಹಿತಾಸಕ್ತಿಯನ್ನು ಹೆಚ್ಚಿಸಲು ತರ್ಕಬದ್ಧವಾದ ನಿರ್ಧಾರಗಳನ್ನು ಮಾಡುವಲ್ಲಿ ಲಿಂಗ, ವರ್ಗ ಅಥವಾ ಇತರ ಅಂಶಗಳಿಂದ ಪ್ರತ್ಯೇಕವಾಗಿಲ್ಲದ ಏಕರೂಪತೆಯನ್ನು ನೀಡುವುದು ಕಂಡು ಬರುತ್ತದೆ.

ಟೊಡಾರೊ ಮಾದರಿಯ ಇನ್ನೊಂದು ಕೊರತೆ ಎಂದರೆ ನಗರ ವೇತನ ಮತ್ತು ಉದ್ಯೋಗದ ಅವಕಾಶ ಅಂಶಗಳು ಮಾತ್ರ ವಲಸೆಯ ಮೇಲೆ ಪರಿಣಾಮ ಬೀರುವುದನ್ನು ಗುರುತಿಸುವುದು. ಅದರ ಸಾಮಾಜಿಕ ಸಂಗತಿಗಳಾದ ಮದುವೆ, ಅವಲಂಬನೆ, ಸಂಬಂಧಗಳು, ನೈಸರ್ಗಿಕ ಪ್ರಕೋಪಗಳು–ಪ್ರವಾಹ, ಅತಿವೃಷ್ಟಿ, ಅನಾವೃಷ್ಟಿ, ನದಿ ಸವಕಳಿ ಮತ್ತು ಬರದ ಅಂಶಗಳನ್ನು ಕಡೆಗಣಿಸುತ್ತದೆ. ಅಂದರೆ ಆರ್ಥಿಕ ಕಾರಣಗಳನ್ನು ಮಾತ್ರ ವಲಸೆ ಹೋಗುವುದನ್ನು ಕೇಂದ್ರೀಕರಿಸಿ ಸಾಮಾಜಿಕ ಕಾರಣಗಳನ್ನು ಅದರಲ್ಲೂ ಲಿಂಗ ಸಂಬಂಧಿ ನೆಲೆಗಳನ್ನು ನಿರ್ಲಕ್ಷಿಸುವುದು ಕಂಡುಬರುತ್ತದೆ.

**ನವ ಆರ್ಥಿಕತೆ ಮಾದರಿಯಲ್ಲಿ ನಗರ ಮತ್ತು ಗ್ರಾಮೀಣ ವಲಸೆ**

ಇತ್ತೀಚಿನ ಆಂತರಿಕ ವಲಸೆಯ ಮಾದರಿಗಳು ವಲಸೆಯನ್ನು ಹೊಸ ಆರ್ಥಿಕತೆ ಎಂದು ಕರೆದಿವೆ. ಹ್ಯಾರಿಸ್ ಮತ್ತು ಟೊಡಾರೊ ಮಾದರಿಯಲ್ಲಿ ನಗರ ಉದ್ಯೋಗವನ್ನು ಅವರು ವಿವರಿಸಿದ ಕಾರಣದಿಂದ ವಲಸೆಯನ್ನು ನೋಡುವ ಕ್ರಮದಲ್ಲಿಯೇ ಬದಲಾವಣೆಯಾಯಿತು. ಅಂದರೆ "ವಲಸೆ ನಿರೀಕ್ಷಿತ ವರಮಾನವನ್ನು ಮಾತ್ರ ಗರಿಷ್ಠಗೊಳಿಸುವುದಿಲ್ಲ, ರಕ್ತಸಂಬಂಧಿಗಳಿಗೆ ಹೆಚ್ಚಿನ ಹೊರೆಯನ್ನು ಕಡಿಮೆ ಮಾಡಲು ಜನರು ಒಟ್ಟಾಗಿ ಕಾರ್ಯ ನಿರ್ವಹಿಸುವುದನ್ನು ತಿಳಿಸಿದೆ"(ಮೆಗರ್ ಕೆ., ೨೦೦೧, ಪು.೩೯–೫೪). ಇದು ಜೀವನಾಧಾರಕ್ಕೆ ಹಲವು ಕೆಲಸಗಳನ್ನು ಮನೆಯ ಮೂಲಕವೇ ಕಟ್ಟಿಕೊಳ್ಳಲು ವ್ಯಕ್ತಿಗಳಿಗೆ ಸೂಚಿಸುತ್ತದೆ. ವಲಸೆಯ ಒಳನೋಟವನ್ನು ಬೇರೆ ವ್ಯಕ್ತಿಗಳಿಂದ ಮಾಡಲು ಸಾಧ್ಯವಿಲ್ಲ. ಕುಟುಂಬದ ಸದಸ್ಯರೇ ಮಾಡಬೇಕಾಗುತ್ತದೆ. ಈ ಮಾದರಿಯಲ್ಲಿ ವಲಸೆಯ ಕುರಿತ ನಿರ್ಧಾರ ಕೈಗೊಳ್ಳುವಿಕೆ ವೈಯಕ್ತಿಕ ನಿರ್ಣಯವಾಗಿದೆ. ಕುಟುಂಬ ಅಥವಾ ಮನೆ ಸದಸ್ಯರ ಪ್ರಭಾವವಿದೆ ಎಂಬುದು ಇವರ ವಾದ. ಟ್ಯಾಕೋಲಿ ಪ್ರಕಾರ "ಅಭಿವೃದ್ಧಿಶೀಲ ದೇಶಗಳಲ್ಲಿ

ವಲಸೆಯು ವ್ಯಕ್ತಿಯ ನಿರ್ಧಾರಕ್ಕಿಂತ ಹೆಚ್ಚಾಗಿ ಒಂದು ಕುಟುಂಬದ ಪೋಷಣೆ ಮತ್ತು ಸಮಸ್ಯೆಗಳನ್ನು ಕಡಿಮೆ ಮಾಡಿಕೊಳ್ಳುವುದರ ಭಾಗವಾಗುತ್ತದೆ. ವಲಸೆಯಲ್ಲಿ ಕುಟುಂಬದ ತಂತ್ರಗಾರಿಕೆಯು ಕುಟುಂಬದ ಅಧಿಕಾರ ಮತ್ತು ನಿರ್ಧಾರ ಕೈಗೊಳ್ಳುವಿಕೆಯ ರಚನೆಯನ್ನು ಕೇಂದ್ರೀಕರಿಸುತ್ತದೆ. ಮನೆಯೊಳಗಿನ ಮಹಿಳೆ ಮತ್ತು ಪುರುಷರ ನಡುವಿನ ಸಂಬಂಧ, ಹಿರಿಯರು ಮತ್ತು ಕಿರಿಯರ ನಡುವಿನ ಸಂಬಂಧದ ವಿಶ್ಲೇಷಣೆಯನ್ನು ಇದು ಒಳಗೊಂಡಿದೆ. ಈ ಪರಿಕಲ್ಪನೆಯನ್ನು 'ವಲಸೆಯ ನವ ಅರ್ಥಶಾಸ್ತ್ರ' ಮನೆಯ ಮೂಲಕ ವಿವರಿಸುತ್ತದೆ" (ಟ್ಯಾಕೋಲಿ ಸಿ. ಮತ್ತು ಸ್ಯಾಟರ್ತ್‌ವೈಟ್, ಡಿ., ೨೦೦೩, ಪು. ೩೭).

ನೆಟ್‌ವರ್ಕ್ ಸಿದ್ಧಾಂತವು "ವಲಸೆಯು ವೈಯಕ್ತಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಬಂಧಗಳನ್ನು ಒಳಗೊಂಡಿರುತ್ತದೆ ಎಂದು ಹೇಳಿದೆ. ವಲಸೆ ಕಳುಹಿಸುವ ಸಮುದಾಯಗಳಲ್ಲಿ ಉದ್ಯೋಗ ಅವಕಾಶಗಳು ಮತ್ತು ಜೀವನಮಟ್ಟದ ಬಗ್ಗೆ ವಲಸೆ ಹೋಗಿ ಬಂದ ಜನರಿಂದ, ನೆರೆ-ಹೊರೆಯವರಿಂದ, ಸ್ನೇಹಿತರಿಂದ ಹೆಚ್ಚು ಪರಿಣಾಮಕಾರಿಯಾಗಿ ಪ್ರಭಾವಗೊಳ್ಳುತ್ತವೆ ಎಂದು ವಾದಿಸುವುದು. ಮೂಲಸ್ಥಾನದಲ್ಲಿನ ಜನರು ಅಂದರೆ ಮನೆಯ ಸದಸ್ಯರು ಪುರುಷ ಮತ್ತು ಮಹಿಳೆಯನ್ನು ಸ್ಥಳಾಂತರಿಸಲು, ವಲಸೆ ಹೋದ ಜನರು ಆ ಪರಿಸರಕ್ಕೆ ಹೊಂದಿಕೊಳ್ಳಲು ಸಹಾಯ ಮಾಡುತ್ತಾರೆ. ಮನೆಯ ಸದಸ್ಯರ, ಸ್ನೇಹಿತರ ಮತ್ತು ಇತರೆ ಸಂಪರ್ಕಜಾಲದಿಂದ ನವ-ವಲಸಿಗರಿಗೆ ಆರ್ಥಿಕ ಮತ್ತು ಮಾನಸಿಕ ಬೆಂಬಲ ಸಿಗುತ್ತದೆ. ಉದ್ಯೋಗವನ್ನು ಅರಸುವಾಗ ವಲಸಿಗರ ಕುಟುಂಬದವರು ಆಹಾರವನ್ನು, ದವಸ ಧಾನ್ಯಗಳು, ಬೇಳೆಕಾಳುಗಳನ್ನು ನೀಡುವುದರ ಮೂಲಕ ಸಹಕರಿಸುತ್ತಾರೆ. ಆದ್ದರಿಂದ ನವ-ವಲಸಿಗರು ಗ್ರಾಮೀಣ ಮತ್ತು ನಗರ ಪ್ರದೇಶದ ಖರ್ಚುವೆಚ್ಚಗಳನ್ನು ತುಲನಾತ್ಮಕವಾಗಿ ಅವಲೋಕಿಸಿದಾಗ ಪ್ರಾರಂಭದಲ್ಲಿ ಸುಲಭವಾದ ಮಾರ್ಗವಾಗಿ ಕಂಡುಬಂದು ಮತ್ತಷ್ಟು ಜನರನ್ನು ಗ್ರಾಮೀಣ ಪ್ರದೇಶ ತೊರೆಯಲು ಪ್ರೇರೇಪಿಸುತ್ತದೆ. ನಂತರ ವಲಸೆಗಾರರಿಂದ ಬಂದ ಹಣವು ಲಾಭದಾಯಕ ಆರ್ಥಿಕ ಅವಶ್ಯಕತೆಗಳನ್ನು ನಿಭಾಯಿಸಲು ಸಹಾಯ ಮಾಡುತ್ತದೆ ಎಂದು ಅಧ್ಯಯನವು ನಿರೂಪಿಸುವುದು. ವಲಸೆಯ ಜೀವನ ದೃಷ್ಟಿಕೋನ ಸಿದ್ಧಾಂತವು ಒಬ್ಬ ವ್ಯಕ್ತಿಯ ವಯಸ್ಸು ಮತ್ತು ಸಂಬಂಧಿತ ಪಾತ್ರಗಳು ಮತ್ತು ಕಟ್ಟುಪಾಡುಗಳು, ಸಂದರ್ಭದ ಮೂಲಕ ಬದಲಾಗುತ್ತದೆ ಎಂಬುದನ್ನು ತಿಳಿಸಿದೆ"(ಆಡೋ, ಎನ್.ಓ. ಮತ್ತು ಕ್ವೆಗಿರ್ ಎ., ೧೯೯೦, ಪು.೪೧೧). ಈ ದೃಷ್ಟಿಕೋನದಲ್ಲಿ ವಲಸಿಗರು ಸಾಮಾನ್ಯವಾಗಿ ದಿನಚರಿ ಮತ್ತು ನಿರೀಕ್ಷಿತ ಹಂತದಲ್ಲಿ ಕಾಣುತ್ತಾರೆ. ಏಕೆಂದರೆ ವ್ಯಕ್ತಿಗಳು ತಮ್ಮ ಜೀವಿತಾವಧಿಯ ಉದ್ದಕ್ಕೂ ನಿರಂತರವಾಗಿ ಮುಂದುವರಿಯುತ್ತಾರೆ. ಉದಾಹರಣೆಗೆ ಹೇಳುವುದಾದರೆ ಅವರು ಪ್ರೌಢಾವಸ್ಥೆಯನ್ನು ತಲುಪಿದಾಗ ಉನ್ನತ ಶಿಕ್ಷಣದ ಶಾಲೆಗಳಿಗೆ ಹೋಗಲು ಮನೆಯಿಂದ ಮಕ್ಕಳು ಹೊರಡುತ್ತಾರೆ. ಅವರು ನಗರದಲ್ಲಿ ಉದ್ಯೋಗವನ್ನು ಕಂಡುಕೊಳ್ಳುತ್ತಾರೆ ಮತ್ತು ಕುಟುಂಬವನ್ನು ಕಟ್ಟಿಕೊಳ್ಳುತ್ತಾರೆ ಅಂದರೆ ಮದುವೆಯಾಗುತ್ತಾರೆ

ಮತ್ತು ನಗರಗಳಲ್ಲಿ ನೆಲೆಸುತ್ತಾರೆ. ಈ ವಿದ್ಯಮಾನಗಳು ಪದೇಪದೇ ಜೀವನ ದೃಷ್ಟಿಕೋನದ ಮೂಲಕ ಸಾಮಾನ್ಯ ಘಟನೆಗಳನ್ನಾಗಿ ನೋಡಲಾಗುತ್ತದೆ.

ಸಂರಚನಾ ಕ್ರಿಯಾತ್ಮಕ ವಿಧಾನ ವಲಸೆಯ ಮತ್ತೊಂದು ಸಿದ್ಧಾಂತವಾಗಿದ್ದು, ವಿಶಾಲವಾದ ಸಾಮಾಜಿಕ ಸಂಬಂಧಗಳು ಮತ್ತು ಸಾಮಾಜಿಕ-ರಚನಾತ್ಮಕ ಸ್ಥಿತಿಗತಿಗಳೊಳಗೆ ವಲಸೆ ಹೋಗುವವರ ವೈಯಕ್ತಿಕ ನಿರ್ಧಾರವನ್ನು ಪರಿಶೀಲಿಸುತ್ತದೆ. ಈ ವಿಧಾನವು ಸಾಮಾನ್ಯವಾಗಿ ವಲಸೆಯ ಸಕಾರಾತ್ಮಕ ನೋಟವನ್ನು ನೀಡುತ್ತದೆ. ರಾಜಕೀಯ ಆರ್ಥಿಕತೆಯ ದೃಷ್ಟಿಕೋನದಲ್ಲಿ ಬಂಡವಾಳದ ಐತಿಹಾಸಿಕ ವಿಸ್ತರಣೆಯನ್ನು ವಲಸೆಯ ಕುರಿತ ಮುಖ್ಯ ವಿವರಣೆ ಎಂದು ಪರಿಗಣಿಸುತ್ತದೆ. ಈ ವಿಧಾನ ವಲಸೆಗಾರರ ಆರ್ಥಿಕ ಹಿನ್ನಡೆಯನ್ನುಂಟು ಮಾಡಿದರೂ ಸಹ ವಲಸೆಯು ವಲಸೆಗಾರರ ಸಾಮಾಜಿಕ ಆರ್ಥಿಕ ಪರಿಣಾಮಗಳು ಮೂಲ ಪ್ರದೇಶದಲ್ಲಿ ಋಣಾತ್ಮಕವಾಗಿಯೂ ಮತ್ತು ವಲಸೆ ಹೋಗುವ ಪ್ರದೇಶದಲ್ಲಿ ಧನಾತ್ಮಕವಾಗಿಯೂ ಇರಬಹುದು ಎಂದು ವಾದಿಸುವುದು.

ಒಟ್ಟಿನಲ್ಲಿ ವಲಸೆ ಕುರಿತ ಸಿದ್ಧಾಂತಗಳನ್ನು ವಿವರಿಸಲು ಈ ಕುರಿತ ಸಾಹಿತ್ಯ ಮೂಲ ಆಧಾರವಾಗಿದ್ದು, ಸಾಂಪ್ರದಾಯಿಕ ವಲಸೆ ಸಿದ್ಧಾಂತಗಳು ಲಿಂಗಸಂಬಂಧಿ ಆಯಾಮಗಳ ಬಗೆಗೆ ಗಮನ ಹರಿಸಲು ವಿಫಲವಾದರೆ, ನವಶಾಸ್ತ್ರೀಯ ಆರ್ಥಿಕ ಚಿಂತನೆಗಳಲ್ಲಿ ವಲಸೆಯು ವೈಯಕ್ತಿಕ ನಿರ್ಧಾರಗಳ ಮೇಲೆ ಅವಲಂಬಿತವಾಗಿರುವುದು ಎಂದು ಗುರುತಿಸುತ್ತದೆ. ಹೊಸ ಆರ್ಥಿಕ ಪರಿಕಲ್ಪನೆಗಳು ಮತ್ತು ಸಿದ್ಧಾಂತಗಳ ಅಭಿವೃದ್ಧಿಯು ಕುಟುಂಬದ ಪ್ರಾಮುಖ್ಯತೆ ಅಥವಾ ಮನೆ ಸದಸ್ಯರ ನಿರ್ಣಯ ಪ್ರಾಥಮಿಕ ಸಂಗತಿಯಾಗಿದೆ. ಇದರಲ್ಲಿ ವಿಶ್ಲೇಷಕರು ವಲಸೆ ಕುರಿತ ವೈಯಕ್ತಿಕ ಅಥವಾ ಮನೆಯ ಸದಸ್ಯರ ನಿರ್ಣಯಗಳು ಎಲ್ಲರನ್ನು ಪ್ರತಿನಿಧಿಸುವುದಿಲ್ಲ ಅಥವಾ ವಲಸೆಯ ಪ್ರಯೋಜನ ಎಲ್ಲರಿಗೂ ಸಮಾನವಾಗಿ ದಕ್ಕುವುದಿಲ್ಲ ಎಂಬುದನ್ನು ಗಮನಿಸಿದರು. ಕುಟುಂಬಗಳು ಹೋರಾಟದ ಕೇಂದ್ರಗಳನ್ನು ಪ್ರತಿನಿಧಿಸುತ್ತವೆ. ಏಕೆಂದರೆ ಅಲ್ಲಿ ನಡೆಯುವ ವಿವಿಧ ಚಟುವಟಿಕೆಗಳು ಮತ್ತು ವಿವಿಧ ಹಿತಾಸಕ್ತಿಗಳನ್ನು ಹೊಂದಿದ ಜನರು ಸಂಘರ್ಷಕ್ಕೊಳಗಾಗಬಹುದು. ಮನೆಯ ಅಧಿಕಾರದ ಸಂಬಂಧಗಳು ಮಹಿಳೆ-ಪುರುಷರ ನಡುವೆ ಸಮಾನ ರೀತಿಯಲ್ಲಿ ಹಂಚಿಕೆಯಾಗಿರುವುದಿಲ್ಲ ಆದ್ದರಿಂದ ಮಹಿಳೆ ಮತ್ತು ಪುರುಷರ ಹಿತಾಸಕ್ತಿಗಳು ಯಾವಾಗಲೂ ಸರಿಹೊಂದುವುದಿಲ್ಲ. ಹಾಗಾಗಿ ವಲಸೆ ಕುರಿತ ನಿರ್ಧಾರಗಳು ಮನೆಯ ಎಲ್ಲ ಸದಸ್ಯರಿಗೂ ಏಕರೀತಿಯ ಪರಿಣಾಮ ಬೀರುವುದಿಲ್ಲ ಎಂದು ವಾದಿಸಿದರು.

**ಸಾಂಪ್ರದಾಯಿಕ ವಲಸೆ ಸಿದ್ಧಾಂತಗಳಲ್ಲಿ ಲಿಂಗ ಅಸೂಕ್ಷ್ಮತೆ**

೧೯೬೦ರ ದಶಕಗಳವರೆಗೆ ಮಹಿಳೆಯರನ್ನು ಆಂತರಿಕ ವಲಸೆಗಾರರೆಂದು ಕಡೆಗಣಿಸಿದ್ದರು. ೧೯೭೦ರ ದಶಕದ ಪ್ರಾರಂಭದಲ್ಲಿ ವಲಸಿಗರು ಮತ್ತು ಅವರ

ಕುಟುಂಬಗಳು ನಿರ್ದಿಷ್ಟವಾಗಿ ಪುರುಷ ವಲಸಿಗರು ಮತ್ತು ಅವರ ಪತ್ನಿಯರು ಮತ್ತು ಮಕ್ಕಳೆಂದು ಉಲ್ಲೇಖಿಸುತ್ತಿದ್ದರು. ಎವೆರೆಟ್ ಲೀ ಅವರ ಪುಸ್ತಕ 'ಎ ಥಿಯರಿ ಆಫ್ ಮೈಗ್ರೇಷನ್'ನಲ್ಲಿ ಪೋಷಕರ ಅಥವಾ ತಂದೆ-ತಾಯಿಯ ಜೊತೆಗೆ ಮಕ್ಕಳು ಜೊತೆಗೂಡುತ್ತಾರೆ. ಇನ್ನು ಹೆಂಡತಿಯು ಅವನ ಅರ್ಧಾಂಗಿಯಾಗಿ ತಾನು ಪ್ರೀತಿಸುತ್ತಿರುವ, ವಾಸ ಮಾಡುತ್ತಿರುವ ಪ್ರದೇಶದಿಂದ ಕಣ್ಣೀರನ್ನು ಹಾಕುತ್ತಾ ಆತ ಎಲ್ಲೆ ಹೋದರೂ ಅಲ್ಲಿ ಜೊತೆಗೂಡುತ್ತಾಳೆ ಎಂದರು. "ಮಹಿಳೆ ಮತ್ತು ಮಕ್ಕಳು ಯಾವಾಗಲೂ ಅವಲಂಬಿತರಾಗಿರುವುದರಿಂದ ವಲಸೆಯ ಸಿದ್ಧಾಂತಗಳಲ್ಲಿ ಅವರ ಕುರಿತು ಹೆಚ್ಚಿನ ಗಮನವನ್ನು ಹರಿಸಲಿಲ್ಲ"(ಟ್ವಾಮಾಸಿ-ಅಂಕ್ರಾ, ಕೆ. ೧೯೯೫, ಪು.೧೩-೨೨). ಮಹಿಳೆಯ ಉದ್ಯೋಗ ಅಥವಾ ಕೆಲಸ ಪ್ರಾಯೋಗಿಕ ವಿದ್ಯಮಾನವೆಂದು ಗುರುತಿಸಲ್ಪಟ್ಟರೂ ಸಹ ಇದಕ್ಕೆ ವಿಶೇಷವಾದ ಗಮನವನ್ನು ನೀಡಲಿಲ್ಲ. ಏಕೆಂದರೆ ಪುರುಷ ಸ್ವತಂತ್ರ ಆರ್ಥಿಕ ವಲಸೆಯನ್ನು ಮಾತ್ರ ಪ್ರತಿಬಿಂಬಿಸುವ ಯೋಚನೆಯನ್ನು ಮಾತ್ರ ಈ ಚಿಂತನೆಗಳು ಒಳಗೊಂಡಿದ್ದವು.

### ವಲಸೆಯಲ್ಲಿ ಲಿಂಗಸಂಬಂಧಿ ಚಿಂತನೆಯ ಅಗತ್ಯತೆ

ವಲಸೆಯ ಸಿದ್ಧಾಂತಗಳಲ್ಲಿ ಲಿಂಗಸಂಬಂಧಿ ಆಯಾಮವನ್ನು ಸೇರ್ಪಡೆ ಮಾಡುವುದು ನಿಧಾನವಾಗಿದೆ. ಕಳೆದ ಕೆಲವು ದಶಕಗಳಿಂದ ಕ್ರಮೇಣವಾಗಿ ಇದು ಒಳಗೊಳ್ಳುತ್ತಿದೆ. ಆದರೆ ಈ ಅಂಶವನ್ನು ತಳ್ಳಿಹಾಕುವ ಸ್ತ್ರೀವಾದಿಗಳು "ವಲಸೆಯ ಸಿದ್ಧಾಂತಗಳು ಸಂಪ್ರದಾಯಶೀಲ ತಳಿ ಎಂದು ವಿಮರ್ಶಿಸಿ, ಸಾಮಾಜಿಕ ವಿಜ್ಞಾನದ ಇತರ ಕ್ಷೇತ್ರಗಳಂತೆಯೇ ಇದರಲ್ಲಿಯ ಲಿಂಗಸಂಬಂಧಿ ಆಯಾಮ ಅಳವಡಿಸುವ ಅಗತ್ಯವಿದೆ. ಏಕೆಂದರೆ ವಲಸೆ ವಿದ್ವಾಂಸರ ಆರಂಭದ ಚೌಕಟ್ಟುಗಳು ವಲಸೆ ಕುರಿತು ಜನರು ಏಕೆ ತೆರಳಿದರು, ಅಲ್ಲಿ ಅವರು ಏಕೆ ಹೋದರು ಮತ್ತು ಅದರಿಂದ ಅವರ ಮನೆಯ ಮೇಲೆ ಆದ ಪರಿಣಾಮಗಳನ್ನು ವಿವರಿಸಿದರೆ ವಿನಾ ಸಾಂಪ್ರದಾಯಿಕ ಸೈದ್ಧಾಂತಿಕ ನೆಲೆಗಳನ್ನು ಪ್ರಶ್ನಿಸಲಿಲ್ಲ, ಬದಲಿಗೆ ಮಹಿಳೆಯರು ಮತ್ತು ಪುರುಷರ ನಡುವಿನ ವ್ಯತ್ಯಾಸಗಳನ್ನು ಗುರುತಿಸಿ, ನಂತರ ಅವರ ಬದಲಾದ ಲಿಂಗ ಪಾತ್ರಗಳನ್ನು ವಲಸೆಯ ಪ್ರತಿಬಿಂಬಗಳಂತೆ ವಿವರಿಸಿದರು.

೧೯೮೦ರ ದಶಕದಿಂದಲೂ ವಲಸೆ ಸಿದ್ಧಾಂತವು ಹೆಚ್ಚು ಜಂಡರ್ ಸೂಕ್ಷ್ಮತೆಗೆ ಒಳಗಾಯಿತು "ಪುರುಷ ದೃಷ್ಟಿಕೋನದಿಂದ ವಲಸೆಯನ್ನು ನೋಡುವಾಗಲೂ ಮಹಿಳೆಯರು ಪುರುಷ ವಲಸಿಗರ ಜೊತೆಗೆ ಹೆಂಡತಿಯರಾಗಿ ವಲಸೆ ಹೋಗುವುದರ ವಿಶಿಷ್ಟ ಅನುಭವಗಳನ್ನು ಸಂಯೋಜಿಸುವ ಮೂಲಕ ಪ್ರಾರಂಭವಾಯಿತು"(ಪಾಮರ್, ಐ., ೧೯೮೮, ಪು. ೩). "ವಲಸಿಗರ ಹರಿವಿನಲ್ಲಿ ಮಹಿಳೆಯರು ಗಮನಾರ್ಹ ಪ್ರಮಾಣದಲ್ಲಿದ್ದಾರೆ ಎಂದು, ಆದರೆ ಅವರು ಪ್ರಾಥಮಿಕ ವಲಸಿಗರು ಅಥವಾ ವಲಸಿಗರ ಜೊತೆಗಾರರು ಎಂದು ವಿಂಗಡಿಸಿ, ಮಹಿಳೆಯರ ಅನುಭವಗಳು ಮುಖ್ಯ, ಹಾಗಾಗಿ ಸಂಶೋಧಕರು ವಲಸೆಯ

ಪರಿಣಾಮ ಮಹಿಳೆ ಮತ್ತು ಪುರುಷರ ಮೇಲೆ ಬೇರೆ ತೆರನಾಗಿರುತ್ತದೆ ಎಂದು ವಾದಿಸಿದರು"(ಚಾಂಟ್, ಎಸ್. ಮತ್ತು ರಾಡ್‌ಕ್ಲಿಫ್, ಎಸ್., ೧೯೯೨, ಪು.೮೭).

ಈ ಅವಧಿಯಲ್ಲಿ ಮಹಿಳೆಯ ಬಗೆಗೆ ವಲಸೆಯ ಕುರಿತ ಪ್ರಮುಖ ಪ್ರಶ್ನೆಗಳೆಂದರೆ "ವಲಸೆ ಮಹಿಳೆಯನ್ನು ಆಧುನೀಕರಿಸಿದೆಯೇ? ಮಹಿಳೆಯರು ತಾವು ಸಾಂಪ್ರದಾಯಿಕ ಮೌಲ್ಯ ಮತ್ತು ನಡವಳಿಕೆಯಿಂದ ವಿಮೋಚನೆ ಪಡೆದಿದ್ದಾರಾ ಎಂಬುದಾಗಿತ್ತು. ೧೯೮೦ ಮತ್ತು ೧೯೯೦ರ ದಶಕದುದ್ದಕ್ಕೂ ಸ್ತ್ರೀವಾದಿ ಸಿದ್ಧಾಂತದಲ್ಲಿ ನಡೆಯುತ್ತಿರುವ ಬೆಳವಣಿಗೆಗಳು ಮಹಿಳೆ ಮತ್ತು ಪುರುಷರ ವೈಯಕ್ತಿಕ ನಿರ್ಧಾರಗಳಿಗಿಂತ ಲಿಂಗವ್ಯವಸ್ಥೆಯನ್ನು ಕೇಂದ್ರೀಕರಿಸಿದವು"(ಡ್ಯಾಂಗ್, ಎನ್., ಟಕೋಲಿ, ಸಿ. ಮತ್ತು ಹೊವಾಂಗ, ಎಕ್ಸ್., ೨೦೦೩, ಪು.೩೬).



ವಲಸೆ ಕುರಿತ ಸಂಶೋಧನೆಯಲ್ಲಿ ಲಿಂಗವು ಜೈವಿಕ ಭಿನ್ನತೆಯಾಗಿ ಗುರುತುಗೊಳ್ಳುತ್ತದೆ. ಲಿಂಗವ್ಯವಸ್ಥೆಯನ್ನು ಸಾಮಾಜಿಕವಾಗಿ ನಿರ್ಮಿತಿಯಾಗಿ ಮುಂಚೂಣಿಗೆ ಬಂತು. ಸ್ತ್ರೀವಾದಿ ಸಿದ್ಧಾಂತದಲ್ಲಿ ಲಿಂಗವ್ಯವಸ್ಥೆಯನ್ನು ಸಮಾಜದ ಸಂಸ್ಕೃತಿ, ರೀತಿ–ನೀತಿಗಳು, ನಡವಳಿಕೆಗಳು ಮತ್ತು ಶಕ್ತಿ ಸಂಬಂಧಗಳ ಆಧಾರದ ಮೇಲೆ ನೋಡಲಾಗುತ್ತದೆ. ಲಿಂಗದ ಆಧಾರದ ಮೇಲೆ ಆದರ್ಶಗಳು, ನಿರೀಕ್ಷೆಗಳು, ನಡವಳಿಕೆಗಳು ಸ್ತ್ರೀತ್ವ ಪುರುಷತ್ವದ ಅಭಿವ್ಯಕ್ತಿಗಳನ್ನು ಹೇರಲಾಗುತ್ತದೆ. ಅವುಗಳು ಸಮಾಜದಿಂದ ಸಮಾಜಕ್ಕೆ ಬದಲಾಗುತ್ತವೆ. ಜನರು ಲಿಂಗವ್ಯವಸ್ಥೆಯಿಂದ ಹಲವು ಸಮಯ ಮತ್ತು ಸಂದರ್ಭಗಳಲ್ಲಿ ನಕಾರಾತ್ಮಕ ಪರಿಣಾಮವನ್ನು ಅನುಭವಿಸುತ್ತಿದ್ದಾರೆ. ಆದಕಾರಣ ಸ್ತ್ರೀವಾದ ಲಿಂಗವ್ಯವಸ್ಥೆಯನ್ನು ಮರುನಿರ್ಮಿಸಬೇಕು ಎಂದು ವಾದಿಸಿತು. "ಕಳೆದ ದಶಕದಲ್ಲಿ ಮಹಿಳೆ ಮತ್ತು ವಲಸೆ ಕುರಿತು ನಡೆದ ಅಧ್ಯಯನ ಪಿತೃಪ್ರಭುತ್ವ, ಅಧಿಕಾರ ಮತ್ತು ನಿಯಂತ್ರಣವು ಪುರುಷರು ಮಹಿಳೆಯರನ್ನು ಆಳಲು ಬಯಸುತ್ತದೆ"(ಚಾಂಟ್ ಎಸ್., ೧೯೯೨, ಪು.೭೭). "ಪತ್ನಿಯರು ಸಮಾಜದಲ್ಲಿ ಲಭ್ಯವಿರುವ ಅವಕಾಶಗಳಿಗೆ ಸಂಪನ್ಮೂಲಗಳನ್ನು ಬಳಸಿಕೊಳ್ಳಲು ಪುರುಷರಿಗೆ ಪ್ರಾಶಸ್ತ್ಯವನ್ನು ನೀಡುತ್ತಾರೆ. ಆ ಮೂಲಕ ವಲಸೆ ಹೋಗುವವರ ಆಯ್ಕೆ ಮತ್ತು ಸಾಮರ್ಥ್ಯವನ್ನು ಲಿಂಗವ್ಯವಸ್ಥೆಯ ರಚನೆಯೇ ನಿರ್ಧರಿಸುತ್ತದೆ ಎಂಬುದಾಗಿ ಸ್ತ್ರೀವಾದಿಗಳು ಹೇಳುತ್ತಾರೆ. ಪುರುಷ ಮತ್ತು ಮಹಿಳೆ ನಡುವಿನ ಸಂಬಂಧಗಳು, ಅವರ ಉತ್ಪಾದಕ ಮತ್ತು ಸಂತಾನೋತ್ಪಾದನೆ ಜವಾಬ್ದಾರಿಗಳು ವಲಸೆಯೊಂದಿಗೆ ಬದಲಾಗುತ್ತವೆ ಎಂದು ಭಾವಿಸುತ್ತದೆ"(ಉಧೃತ: ಮ್ಯಾಕ್ಡೊನಾಲ್ಡ್ ಎಂ. (ಇಡಿ), ೧೯೯೪, ಪು.೮೯–೯೭).

ವಲಸೆ ಕುರಿತ ಹೊಸ ಚಿಂತನೆಯು ಸ್ತ್ರೀವಾದಿ ಚಿಂತನೆಯಿಂದ ಪ್ರಾರಂಭವಾಯಿತು. ವಲಸೆಯನ್ನು ಆರ್ಥಿಕ ಮತ್ತು ಆರ್ಥಿಕೇತರ ಅಂಶಗಳು, ಹಾಗೆಯೇ ಮಹಿಳೆ ಮತ್ತು ಪುರುಷರ ನಡುವಿನ ಸಂಬಂಧಗಳನ್ನು ಬೇರೆ ನೆಲೆಯಲ್ಲಿ ಕಟ್ಟುತ್ತದೆ. ಲಿಂಗವ್ಯವಸ್ಥೆ ಆಧಾರದ

ಮೇಲೆ ವಲಸೆಯನ್ನು ಬಹು ಆಯಾಮಗಳಲ್ಲಿ ಅರ್ಥ ಮಾಡಿಕೊಳ್ಳಲು ಕೆಲವೊಂದು ಗುಂಪುಗಳನ್ನು ಹೊರತುಪಡಿಸಿ ಸ್ತ್ರೀವಾದಿ ಚಿಂತನೆ ಸಹಾಯ ಮಾಡುತ್ತದೆ. "ವಲಸೆ ಮಾದರಿಯಲ್ಲಿ ಕೆಲಸ, ಸಾಮಾಜಿಕ ಅನುಭವ ಮತ್ತು ವಲಸೆಯ ಪರಿಣಾಮಗಳು ಏಕತೆರನಾಗಿರುವುದಿಲ್ಲ. ಆದರೆ ಅವುಗಳು ಲಿಂಗ ಮತ್ತು ವರ್ಗದಿಂದ ರೂಪತಾಳುತ್ತವೆ ಎಂದು ತೋರಿಸಿದ್ದಾರೆ. ವಲಸೆಯ ಮಾದರಿಗಳು ಸಾಮಾಜಿಕ ಜಾಲಗಳು, ಲಿಂಗ ಸಂಬಂಧಗಳು ಮತ್ತು ಮನೆಯ ರಚನೆಗಳಿಂದ ಮಧ್ಯಸ್ಥಿಕೆ ಹೊಂದಿರುವ ಸನ್ನಿವೇಶ-ನಿರ್ದಿಷ್ಟ ಮತ್ತು ಸಂಕೀರ್ಣವಾದ ಚಲನಶಾಸ್ತ್ರಗಳಿಂದ ನಿರ್ಧರಿಸಲ್ಪಟ್ಟಿದೆ ಎಂದು ಹೇಳುತ್ತಾರೆ"(ಡಿ. ಹಾನ್ ಎ., ೨೦೦೦, ಪು.೧೭). ಲಿಂಗ ಸಂಬಂಧಗಳು ಮತ್ತು ವಲಸೆಯ ಮೇಲೆ ಚಾಂಟ್ ನಡೆಸಿದ ಕೆಲಸವು ಕುಟುಂಬದೊಳಗಿನ ಉತ್ಪಾದಕ ಮತ್ತು ಸಂತಾನೋತ್ಪತ್ತಿಯ ಕೆಲಸ, ಅಧಿಕಾರ ಶಕ್ತಿಗಳು, ನಿರ್ಧಾರ ಕೈಗೊಳ್ಳುವಿಕೆ ಮತ್ತು ಗ್ರಾಮೀಣ ಪ್ರದೇಶದ ಮನೆಗಳಲ್ಲಿ ಶ್ರಮವಿಭಜನೆ ಪ್ರಭಾವ ಬೀರುತ್ತದೆ ಎಂದು ತೋರಿಸುತ್ತದೆ.

ವಲಸೆಯು ಈ ಹೊಸ ವಿಶ್ಲೇಷಣೆಯ ಮಾದರಿಗಳನ್ನು ತೋರಿಸುತ್ತದೆ. ಅಂದರೆ ವಲಸೆಯ ಪ್ರದೇಶ, ಸಾಮಾಜಿಕ ಗುಂಪುಗಳು ಮತ್ತು ಕುಟುಂಬಗಳ ನಡುವೆ ಏಕೆ ಬದಲಾಗುತ್ತದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನ ನಡೆದಿದೆ. "ವಲಸೆಯು ಲಿಂಗ ಸಾಮಾಜಿಕ ಪ್ರಕ್ರಿಯೆಯೆ ಮಹಿಳೆ ಮತ್ತು ಪುರುಷರನ್ನು ಭಿನ್ನವಾಗಿ ಒಳಗೊಳ್ಳುತ್ತದೆ. ಈ ಪ್ರಕ್ರಿಯೆಯು ಸ್ತ್ರೀಯತ್ವ, ಪುರುಷತ್ವದ ಚಿಂತನೆಗಳನ್ನು ವಲಸೆ ಕಳುಹಿಸಲು, ವಲಸಿಗರನ್ನು ಆ ಪ್ರದೇಶ ಸ್ವೀಕರಿಸಲು ಒಳಗೊಂಡಿರುತ್ತದೆ ಎನ್ನುತ್ತದೆ"(ಚಾಂಟ್ ಎಸ್. ಮತ್ತು ಗುಟ್ಮನ್. ಎಮ್., ೨೦೦೦, ಪು. ೬೩). ವಲಸೆ ಕುರಿತ ಸ್ತ್ರೀವಾದಿಗಳ ಅಧ್ಯಯನಗಳು "ವಲಸೆಯಲ್ಲಿ ಮಹಿಳೆಯನ್ನು ಗೋಚರಿಸುವಂತೆ ಮಾತ್ರ ಮಾಡಲಿಲ್ಲ ಲಿಂಗವ್ಯವಸ್ಥೆಯನ್ನು ಒಂದು ವಿಶ್ಲೇಷಣೆಯ ಸಾಧನವನ್ನಾಗಿ ಪರಿಗಣಿಸುವಂತೆ ಪರಿಚಯಿಸಿದರು" (ಆಗೆಸಾ ಜೆ. ಆ್ಯಂಡ್ ಅಗೆಸಾ ಆರ್., ೧೯೯೯, ಪು.೩೬-೫೮). "ಗ್ರಾಮೀಣ ಮತ್ತು ನಗರ ವಲಸೆಗಾರಿಕೆಯನ್ನು ಪರೀಕ್ಷಿಸುವ ಅಧ್ಯಯನಗಳು ವಲಸೆಯ ಸಾಮಾಜಿಕ ಸಂಬಂಧಗಳನ್ನು ಹಾಗೇ ಗ್ರಾಮೀಣ ಮತ್ತು ನಗರ ನಡುವಿನ ವಿವಿಧ ಚಟುವಟಿಕೆಗಳನ್ನು ಸೃಷ್ಟಿಸುತ್ತದೆ, ನಿಯಂತ್ರಿಸುತ್ತದೆ ಮತ್ತು ಉಳಿಸಿಕೊಳ್ಳುತ್ತದೆ. ಇದರಿಂದ ವ್ಯಕ್ತಿ-ವ್ಯಕ್ತಿಗಳ ನಡುವಿನ ಪರಸ್ಪರ ಸಂಬಂಧಗಳ ಬಗೆಗೂ ಗಮನ ಹರಿಸುತ್ತದೆ. ಮಾನವಶಾಸ್ತ್ರಜ್ಞರು ಮತ್ತು ಸ್ತ್ರೀವಾದಿಗಳು ವಲಸೆ ಕುರಿತು ಕೈಗೊಂಡ ಅಧ್ಯಯನವು ಗ್ರಾಮೀಣ ಪ್ರದೇಶಗಳಲ್ಲಿ ಪುರುಷರು ಮಹಿಳೆಯರನ್ನು ಅಲ್ಲಿಯೇ(ಅದೇ ಪ್ರದೇಶದಲ್ಲಿ) ಬಿಟ್ಟು ವಲಸೆ ಹೋಗಿರುವುದರ ಅಧಿಕಾರ ಸಂಬಂಧಗಳ ಮೇಲೆ ಯಾವ ತೆರನಾದ ಪರಿಣಾಮ ಬೀರಿತು ಎಂಬುದರ ಮೇಲೆ ಗಮನ ಹರಿಸಿತು"(ಉಧೃತ: ಸಿಲ್ವಿಯಾ ಚಾಂಟ್, ೧೯೯೨, ಪು. ೭೨). ಅಭಿವೃದ್ಧಿಶೀಲ ದೇಶಗಳಲ್ಲಿ 'ಲಿಂಗವ್ಯವಸ್ಥೆ ಮತ್ತು ವಲಸೆ' ಕುರಿತ ಪ್ರಕಟಣೆ ಲಿಂಗಸಂಬಂಧಿ ಅಧ್ಯಯನದಲ್ಲಿ ಒಂದು ಮೈಲಿಗಲ್ಲಾಯಿತು. ಈ ಪುಸ್ತಕದ

ಪೀಠಿಕೆಯಲ್ಲಿ ಸಿಲ್ವಿಯಾ ಚಾಂಟ್ ಮತ್ತು ಸಾರಾ ರಾಡ್ಕ್ಲಿಫ್(೧೯೯೨) ಇಲ್ಲಿಯವರೆಗೂ ಸಂಶೋಧಕರು ಮಾಡದೇ ಇದ್ದ, ವಲಸೆಯಲ್ಲಿ ಸ್ತ್ರೀ-ಪುರುಷರ ಅಂಕಿ-ಸಂಖ್ಯೆಗಳನ್ನು ಗಮನಿಸಿದ್ದಾರೆ. ಜೊತೆಗೆ ವಲಸೆಯಲ್ಲಿ ಲಿಂಗ ಸಂಬಂಧಗಳ ಪರಿಣಾಮದ ಚರ್ಚೆ ಕೇಂದ್ರವಾಗದಿದ್ದರೂ ವಲಸೆಯ ವಿಶ್ಲೇಷಣೆಯಲ್ಲಿ ಲಿಂಗವ್ಯವಸ್ಥೆಯನ್ನು ಪರಿಗಣಿಸಬೇಕು ಎಂಬ ನಿಲುವುವಿದೆ. ಆದ್ದರಿಂದ ವಲಸೆ, ಲಿಂಗವ್ಯವಸ್ಥೆ ಮತ್ತು ಜೀವನಾಧಾರ ಸಮಸ್ಯೆಗಳ ಕುರಿತ ಸಂಶೋಧನೆಯಲ್ಲಿ ಅಭಿವೃದ್ಧಿ ಮತ್ತು ಸ್ತ್ರೀವಾದಿ ಚೌಕಟ್ಟುಗಳ ಚರ್ಚೆಯ ಅಗತ್ಯವಿದೆ. ಮುಂದಿನ ಭಾಗದಲ್ಲಿ ಈ ಚೌಕಟ್ಟುಗಳನ್ನು ಪ್ರಸ್ತುತಪಡಿಸಲಾಗಿದೆ.

**೩.೨. ಮಹಿಳಾ ಅಭಿವೃದ್ಧಿ ದೃಷ್ಟಿಕೋನಗಳು**

ವಿಶ್ವಸಂಸ್ಥೆಯ ಮಹಿಳಾ ದಶಕದ ಘೋಷಣೆಗಿಂತ ಮುಂಚೆ ಅಭಿವೃದ್ಧಿ ಸಿದ್ಧಾಂತಗಳನ್ನು ಲಿಂಗತಟಸ್ಥವೆಂದು ಪರಿಗಣಿಸಲಾಗಿತ್ತು. ಆದಕಾರಣ ನೀತಿ ರೂಪಿಸುವವರು ಅಭಿವೃದ್ಧಿಯಲ್ಲಿ ಮಹಿಳೆ ಮತ್ತು ಪುರುಷರ ನಡುವಿನ ವ್ಯತ್ಯಾಸವನ್ನು ಗುರುತಿಸುವ ಗೋಜಿಗೆ ಹೋಗಲಿಲ್ಲ. "ಅಭಿವೃದ್ಧಿಯು ಸ್ತ್ರೀ ಮತ್ತು ಪುರುಷರ ಮೇಲೆ ಏಕತೆರನಾದ ಪರಿಣಾಮ ಬೀರುತ್ತದೆ ಎಂದು ಭಾವಿಸಿದ್ದರು. ಆದರೆ ಸ್ತ್ರೀವಾದಿ ಚಿಂತಕರು ಮಹಿಳೆ ಮತ್ತು ಪುರುಷರು ಅಭಿವೃದ್ಧಿಯ ಯೋಜನೆಗಳಿಂದ ಭಿನ್ನವಾಗಿ ಪ್ರಯೋಜನ ಪಡೆದುಕೊಂಡಿದ್ದಾರೆ ಎಂಬುದನ್ನು ಸಾಬೀತು ಮಾಡಿದರು"(ಘೋರೈಶಿ ಪಿ. ಮತ್ತು ಬೆಲಾಂಜರ್ ಸಿ., ೧೯೯೬, ಪು.೯೨). ಈ ತೆರನಾದ ಜಾಗೃತಿಯ ಪರಿಣಾಮ ಅಭಿವೃದ್ಧಿಯ ಎಲ್ಲ ಪ್ರಕ್ರಿಯೆಯಲ್ಲಿ ಮಹಿಳೆಯರನ್ನು ಸಂಪೂರ್ಣವಾಗಿ ಉತ್ತೇಜಿಸುವ ಕ್ರಮ ಪ್ರಾರಂಭವಾಯಿತು. "ಮಹಿಳೆಯರನ್ನು ಒಳಗೊಳ್ಳುವಿಕೆಯ ಅಭಿವೃದ್ಧಿ ಮತ್ತು ಸಾಮಾಜಿಕ ಪ್ರಗತಿಗೆ ಹೆಚ್ಚಿನ ಕೊಡುಗೆಯನ್ನು ಮರಳಿ ನೀಡುತ್ತದೆ ಎಂದು ಭಾವಿಸಲಾಯಿತು" (ಜಾಕ್ಸನ್ ಸಿ. ಮತ್ತು ಪಿಯರ್ಸನ್ ಆರ್., ೧೯೯೮, ಪು.೧೧೪).

ಸ್ತ್ರೀವಾದಿ ಸಂಶೋಧಕರು ಜಂಡರ್ ವಿಶ್ಲೇಷಣೆಯನ್ನು ಮಾಡಿದ್ದರ ಪರಿಣಾಮ "ಕಳೆದ ಮೂರು ದಶಕಗಳಿಂದ ಅಭಿವೃದ್ಧಿಯ ಸಿದ್ಧಾಂತಗಳಲ್ಲಿ ಬದಲಾವಣೆಗಳು ಕಂಡು ಬಂದವು. ಅಂದರೆ ಅಭಿವೃದ್ಧಿ ಪರಿಕಲ್ಪನೆಯಲ್ಲಿ ಅಭಿವೃದ್ಧಿಯಲ್ಲಿ ಮಹಿಳೆ, ಮಹಿಳೆ ಮತ್ತು ಅಭಿವೃದ್ಧಿ ಹಾಗೂ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ ಪರಿಕಲ್ಪನೆಗಳು ವಿಕಸನಗೊಂಡಿವೆ. ಇವು ಪ್ರತಿಯೊಂದು ಪರಿಕಲ್ಪನೆಯು ಸಹ ಒಂದು ಕಾಲಾವಧಿಯನ್ನು ಸೂಚಿಸುತ್ತವೆ"(ದೇಸಾಯಿ, ವಿ. ಮತ್ತು ಪಾಟರ್ ಆರ್. (ಇಡಿ), ೨೦೦೨, ಪು.೧೨೬). ಅನೇಕ ಲೇಖಕರು ಲಿಂಗ ಸಂಬಂಧಿ ನೆಲೆಯಲ್ಲಿ ಅಭಿವೃದ್ಧಿಯನ್ನು ಅರ್ಥ ಮಾಡಿಕೊಳ್ಳಲು ಐದು ಪರಿಕಲ್ಪನೆಗಳನ್ನು ವರ್ಗೀಕರಿಸಿದ್ದಾರೆ. ಅದರಲ್ಲಿ ಒಂದು. ಕಲ್ಯಾಣದ ದೃಷ್ಟಿಕೋನ. ಎರಡು. ಸಮಾತೆಯ ದೃಷಿಕೋನ. ಮೂರು. ಬಡತನ ವಿರೋಧಿ ದೃಷ್ಟಿಕೋನ. ನಾಲ್ಕು. ದಕ್ಷತಾ ದೃಷ್ಟಿಕೋನ.

ಐದು, ಸಬಲೀಕರಣ ದೃಷ್ಟಿಕೋನ. ಮೊದಲಿಗೆ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಆದ ಬದಲಾವಣೆಯನ್ನು ಗಮನಿಸಬಹುದು.

**ಅಭಿವೃದ್ಧಿಯಲ್ಲಿ ಮಹಿಳೆ**

"ಅಭಿವೃದ್ಧಿಯಲ್ಲಿ ಮಹಿಳೆ ಪದವು ೧೯೭೦ರ ದಶಕದ ಪ್ರಾರಂಭದಲ್ಲಿ ಎಸ್ತರ್ ಬೋಸ್ತರಪ್ ಅವರ ಪುಸ್ತಕ ವಿಮೆನ್ ರೋಲ್ ಇನ್ ಎಕನಾಮಿಕ್ ಡೆವಲಪ್‌ಮೆಂಟ್‌ದಿಂದ ಈ ಪರಿಕಲ್ಪನೆ ಬಳಕೆಗೆ ಬಂತು"(ಬೋಸ್ತರಪ್ ಇ., ೧೯೭೦, ಪು. ೧೩೮). ಇದರಲ್ಲಿ ಕೃಷಿ ಸಮುದಾಯಗಳಲ್ಲಿನ ಲಿಂಗಾಧಾರಿತ ಶ್ರಮವಿಭಜನೆಯ ಕುರಿತ ಆಲೋಚನೆಯಿದೆ. ರ್‍ಯಾಥಜೆಬರ್ ಅವರು ಹೇಳುವಂತೆ "ಸಮಾಜವಿಜ್ಞಾನಿಗಳು ಮತ್ತು ಅಭಿವೃದ್ಧಿ ಚಿಂತಕರಿಗೆ ಲಿಂಗವ್ಯವಸ್ಥೆಯನ್ನು ಅಧ್ಯಯನಗಳಲ್ಲಿ ಬಳಸಲು ಮೊದಲೇ ಅವಕಾಶವಿತ್ತು. ಆದರೆ ಎಸ್ತರ್ ಬೋಸ್ತರಪ್ ಅವರು ಪ್ರಪ್ರಥಮವಾಗಿ ಲಿಂಗವ್ಯವಸ್ಥೆಯನ್ನು ವೆರಿಯಬಲ್ ಆಗಿ ವ್ಯವಸ್ಥಿತವಾಗಿ ತಮ್ಮ ಅಧ್ಯಯನದ ವಿಶ್ಲೇಷಣೆಯಲ್ಲಿ ಬಳಸಿದರು ಎನ್ನುತ್ತಾರೆ"(ರಾಥ್‌ಜೆಬರ್, ಇ., ೧೯೯೨, ಪು. ೧೧೬). ಮುಂದುವರಿದು ಬೋಸ್ತರಪ್ ಅವರು ಮಹಿಳೆಯರ ಕಾರ್ಯ ಹಾಗೂ ಪಾತ್ರವನ್ನು ಅತ್ಯಂತ ಸರಳೀಕರಣಗೊಳಿಸಿರುವರು ಎಂದು ಬೆನೇರಿಯಾ ವಾದಿಸಿದರೂ ಲಿಂಗಾಧಾರಿತ ಶ್ರಮವಿಭಜನೆ ಪುರುಷರ ಅಭಿವೃದ್ಧಿ ಮತ್ತು ಮಹಿಳೆಯರ ಅಭಿವೃದ್ಧಿಯ ಮೇಲೆ ವಿಭಿನ್ನವಾಗಿ ಪ್ರಭಾವ ಬೀರುತ್ತದೆ ಎಂಬುದು ಮಾತ್ರ ಗಮನಿಸಬೇಕಾದ ಸಂಗತಿ ಎಂದು ಹೇಳಿದರು.

ಹಾರ್ಡಿಂಗ್ ಮತ್ತು ಚೌದ್ರಿ ಅವರು "ಅಭಿವೃದ್ಧಿಯಲ್ಲಿ ಮಹಿಳೆಯ ದೃಷ್ಟಿಕೋನವು ೧೯೫೦ರಿಂದ ೧೯೭೦ರ ದಶಕದ ಪ್ರಬಲ ಆಧುನೀಕರಣ ಮಾದರಿಯೊಂದಿಗೆ ನಿಕಟವಾಗಿ ಸಂಬಂಧ ಹೊಂದಿದೆ. ಜೊತೆಗೆ ಕೈಗಾರೀಕರಣದೊಂದಿಗೆ ಬೆಸೆದುಕೊಂಡು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಜೀವನಮಟ್ಟವನ್ನು ಸುಧಾರಿಸುವ ಹೊಣೆಯನ್ನು ಹೊಂದಿದೆ" (ಉಧೃತ: ಧ್ರಿ, ಜಿ., ೧೯೯೫, ಪು. ೯೪). ಆದರೆ ಕಳೆದ ಕೆಲವು ದಶಕಗಳಲ್ಲಿ ಮಹಿಳೆ ಸಂಬಂಧಿತ ಸ್ಥಾನವು ಸ್ವಲ್ಪಮಟ್ಟಿಗೆ ಮಾತ್ರ ಸುಧಾರಿಸಿದೆ ಎಂದು ವಾದಿಸಿ, ಅಭಿವೃದ್ಧಿಯಲ್ಲಿ ಮಹಿಳೆ ಎನ್ನುವ ಶೀರ್ಷಿಕೆಯು ಅಭಿವೃದ್ಧಿಯಲ್ಲಿ ಮಹಿಳೆಯರ ಅನುಭವ ಹಾಗೂ ಸಾಮಾಜಿಕ ಬದಲಾವಣೆ ಪುರುಷರಿಗಿಂತ ಭಿನ್ನವೆಂದು ಗುರುತಿಸುವುದು ಕಂಡುಬರುತ್ತದೆ.

ಸ್ತ್ರೀವಾದಿಗಳು ಅಭಿವೃದ್ಧಿಯಲ್ಲಿ ಮಹಿಳೆಯರ ಕೊಡುಗೆಯನ್ನು ಒಪ್ಪಿಕೊಂಡಿದ್ದಾರೆ. ಗಾರ್ಡನರ್ ಮತ್ತು ಲೆವಿಸ್ ಪ್ರಕಾರ "ಅಭಿವೃದ್ಧಿಯಲ್ಲಿ ಮಹಿಳೆ ಪರಿಕಲ್ಪನೆಯು ಲಿಂಗವ್ಯವಸ್ಥೆಯ ಪ್ರಭಾವ, ವರ್ಣ ಮತ್ತು ವರ್ಗದ ವಿಷಯಗಳ ಮೇಲೆ ಕೇಂದ್ರೀಕೃತವಾಯಿತು. ಅಭಿವೃದ್ಧಿಯಲ್ಲಿ ಮಹಿಳೆ ನೀತಿಗಳು ಕೇವಲ ಲಿಂಗವ್ಯವಸ್ಥೆಯ ಸ್ವರೂಪ ಮತ್ತು ಮಹಿಳೆಯ ಅಧೀನತೆ ಕುರಿತಾದ ಜನಾಂಗಕೇಂದ್ರಿತ ಊಹೆಗಳನ್ನು ಮಂಡಿಸಿ

ಅಸ್ತಿತ್ವದಲ್ಲಿರುವ ಸಾಮಾಜಿಕ ರಚನೆಯನ್ನು ಒಪ್ಪಿಕೊಂಡಿವೆ ಎನ್ನುತ್ತಾರೆ" (ಗಾರ್ಡ್ನರ್ ಕೆ. ಆ್ಯಂಡ್ ಲೂಯಿಸ್ ಡಿ., ೧೯೯೬, ಪು. ೮೯). ಜಾಕ್ಸನ್ ಹಾಗೂ ಪಿಯರ್ಸನ್ ಅವರು "ಅಭಿವೃದ್ಧಿಯಲ್ಲಿ ಮಹಿಳೆಗೆ ಸಂಬಂಧಿಸಿದ ನೀತಿಗಳು ಅಭಿವೃದ್ಧಿಯಲ್ಲಿ ಮಹಿಳೆಯರು ಯಾವ ರೀತಿಯಲ್ಲಿ ಭಾಗವಹಿಸಬಹುದೆನ್ನುವ ವಿಚಾರಕ್ಕೆ ಗಮನ ಹರಿಸಿದೆಯೇ ಹೊರತು ಯಾಕೆ ಮಹಿಳೆಯರು ಅಧೀನತೆಯನ್ನು ಒಪ್ಪಿಕೊಳ್ಳಬೇಕಾಯಿತು ಎನ್ನುವುದರ ಬಗೆಗೆ ಗಮನ ಹರಿಸಲಿಲ್ಲ. ಈ ಮುಖಾಮುಖಿಯಲ್ಲದ ವಿಧಾನವು ಮಹಿಳೆಯರ ಅಧೀನತೆಯ ಮೂಲ ಸ್ವರೂಪ ಹಾಗೂ ದೌರ್ಜನ್ಯ ಅರ್ಥ ಮಾಡಿಕೊಳ್ಳುವಲ್ಲಿ ವಿಫಲವಾಯಿತು ಎನ್ನುತ್ತಾರೆ" (ಜಾಕ್ಸನ್ ಸಿ. ಆ್ಯಂಡ್ ಪಿಯರ್ಸನ್ ಆರ್., ೧೯೯೮, ಪು. ೧೫೪).

ಬುವಿನಕ್ ಎಮ್. ಅವರು "ಅಭಿವೃದ್ಧಿಯಲ್ಲಿ ಮಹಿಳೆ ಪರಿಕಲ್ಪನೆಯು ಮಹಿಳೆಯರನ್ನು ಪ್ರತ್ಯೇಕವಾದ ಉತ್ಪಾದನ ಕ್ರಿಯೆಗಳಲ್ಲಿ ಕೇಂದ್ರೀಕರಿಸಿ ಮಹಿಳೆಯ ಸಂತಾನೋತ್ಪತ್ತಿ ಕ್ರಿಯೆಯನ್ನು ಕನಿಷ್ಠಗೊಳಿಸಿತು ಎಂದು ವಾದಿಸಿದ. ಈ ದೃಷ್ಟಿಕೋನದಿಂದಾಗಿ ಮಹಿಳೆಯರನ್ನು ಆದಾಯ ತರುವ ಉತ್ಪಾದನೆಯ ಕ್ರಿಯೆಗಳಲ್ಲಿ ಕೇಂದ್ರೀಕರಿಸುವಂತೆ ಮಾಡಿದ. ಅದೇ ಸಮಯಕ್ಕೆ ಈ ಆದಾಯ ತರುವ ಉತ್ಪಾದನ ಯೋಜನೆಗಳು ಯಶಸ್ವಿಯಾದರೆ ಅವುಗಳನ್ನು ಪುರುಷರು ಸೂಕ್ತರೀತಿಯಲ್ಲಿ ಬಳಸಿಕೊಳ್ಳುತ್ತಾರೆ ಎಂದು ವಾದಿಸಿದ"(ಬುವಿನಿಕ್ ಎಮ್., ಲೈಸೆಟ್ ಎ. ಮತ್ತು ವಿಲಿಯಂ, ಪಿ., ೧೯೮೩, ಪು. ೧೩೨).

ಅಹೂಜಾ ಪಟೇಲ್ ಅವರು "ಅಭಿವೃದ್ಧಿಯಲ್ಲಿ ಮಹಿಳೆ ನೀತಿಯು ಮುಖ್ಯವಾಹಿನಿ ಅಭಿವೃದ್ಧಿ ನೀತಿ ಹಾಗೂ ಆಚರಣೆಗೆ ಇನ್ನೂ ಸೇರಿಸುವುದು ಉಳಿದಿದೆ ಎಂದು ಪ್ರತಿಪಾದಿಸಿದರು. ಆದ್ದರಿಂದ ಲಿಂಗಸಂಬಂಧಿ ವಿಧಾನವು ಪ್ರಸ್ತುತ ಅಭಿವೃದ್ಧಿ ಮಾದರಿಗೆ ಸವಾಲೆಸುಯುವಲ್ಲಿ ವಿಫಲವಾಗಿದೆ. ಹೇಗೆಂದರೆ ವೇತನಸಹಿತ ಕೆಲಸಗಳನ್ನು ಮಾತ್ರ ಇದು ಕೇಂದ್ರೀಕರಿಸುತ್ತದೆ ವಿನಾ ಮಹಿಳೆಯರು ಈಗಾಗಲೇ ವೇತನರಹಿತ ಕೆಲಸಗಳನ್ನು ಮಾಡುತ್ತಿದ್ದಾರೆ ಎಂಬುದನ್ನು ಪರಿಗಣಿಸಲಿಲ್ಲವೆಂದು ವಾದಿಸಿದ. ಮಹಿಳೆಯರ ಮನೆಯ ಹೊರಗಿನ ಹೆಚ್ಚುವರಿ ಪಾತ್ರಗಳಿಗೆ ಕೇಂದ್ರೀಕರಿಸುತ್ತದೆಯೇ ಹೊರತಾಗಿ ಕುಟುಂಬದ ವ್ಯಾಪ್ತಿಯಲ್ಲಿರುವ, ಅದರ ಸಮೀಪದಲ್ಲಿರುವ ಪಾತ್ರಗಳನ್ನು ಹಾಗೂ ಪತಿಯರಿಂದ ಅನುಭವಿಸುವ ಕಿರುಕುಳದ ಬಗ್ಗೆ ಬೆಳಕು ಚೆಲ್ಲಲಿ ಎಂದು ವಿಮರ್ಶಿಸಿದ"(ಅಹೂಜಾ ಪಟೇಲ್ ಕೆ., ೧೯೯೫, ಪು. ೧೬೫).

ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಪುರುಷರನ್ನು ಹೊರತುಪಡಿಸಿ ಮಹಿಳೆಯರ ಕುರಿತು ಕೇಂದ್ರೀಕರಿಸುವುದನ್ನು ಒಪ್ಪಿಕೊಂಡಿವೆ. ಯೋಜನೆ ಹಾಗೂ ನೀತಿ ರಚನೆಯಲ್ಲಿ ಮಹಿಳಾ ದೃಷ್ಟಿಕೋನವನ್ನು ಒಳಗೊಳ್ಳಲು ವಿಫಲತೆಯು ಹೊಂದಿದ ಪರಿಣಾಮ ಅಭಿವೃದ್ಧಿಯಲ್ಲಿ ಮಹಿಳೆಯನ್ನು ಅಂಚಿಗೆ ತಳ್ಳಲಾಯಿತು. ಆದರೂ ಮಹಿಳೆಯರ

ಸ್ಥಾನಮಾನದ ಕುರಿತು ಜಾಗೃತಿ ಮೂಡಿಸುವಲ್ಲಿ ಹೆಚ್ಚಿನ ಯಶಸ್ಸಾಯಿತು. ಇದು ವಾಸ್ತವ ಸಾಮಾಜಿಕ ಸಂಬಂಧಗಳನ್ನು ಪ್ರಶ್ನಿಸಲಿಲ್ಲ. ಅಂದರೆ ವಾಸ್ತವದ ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ವಿಫಲವಾಯಿತು. ಇದು ಮಹಿಳೆ ಸಂಪೂರ್ಣ ಆರ್ಥಿಕ ಪಾಲುದಾರಳಾದಾಗ ಮಾತ್ರ ಲಿಂಗಸಂಬಂಧಗಳು ಬದಲಾಗುತ್ತವೆ ಎಂದು ಭಾವಿಸಿತು. ಇದು ಮಹಿಳೆ ಮತ್ತು ಅಭಿವೃದ್ಧಿ ಪರಿಕಲ್ಪನೆ ಮುಂಚೂಣಿಗೆ ಬರಲು ಬೆನ್ನೆಲುಬಾಯಿತು.

**ಮಹಿಳೆ ಮತ್ತು ಅಭಿವೃದ್ಧಿ**

ಅಭಿವೃದ್ಧಿಯಲ್ಲಿ ಮಹಿಳೆ ದೃಷ್ಟಿಕೋನದ ನಂತರ ಮಹಿಳೆ ಮತ್ತು ಅಭಿವೃದ್ಧಿಯು ಚಾಲನೆಗೆ ಬಂತು. ಈ ದೃಷ್ಟಿಕೋನವು ಅಭಿವೃದ್ಧಿಯ ಸ್ವರೂಪವನ್ನೇ ಪ್ರಶ್ನಿಸಿತು. ಮಹಿಳೆಯರ ಬಡತನ, ಅಸಮಾನತೆ ಅವರನ್ನು ಅಂಚಿಗೆ ತಳ್ಳುವ ಪ್ರಕ್ರಿಯೆಯನ್ನು ಹೆಚ್ಚಿಸುತ್ತದೆ ಎಂದು ವಾದಿಸಿತು. ಮಹಿಳಾ ಅಭಿವೃದ್ಧಿಯನ್ನು ಸಾಧಿಸಬೇಕಾದರೆ ಅಭಿವೃದ್ಧಿಯ ಸ್ವರೂಪವನ್ನೇ ಬದಲಾಯಿಸಬೇಕೆಂಬ ಅಭಿಪ್ರಾಯವನ್ನು ಗಟ್ಟಿಗೊಳಿಸಿತು. ಅಭಿವೃದ್ಧಿಯಲ್ಲಿ ಮಹಿಳೆ ದೃಷ್ಟಿಕೋನದಲ್ಲಿ ಅನುಸರಿಸುತ್ತಿದ್ದ ಅಭಿವೃದ್ಧಿಯ ಮಾದರಿಯು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ದೂರದೃಷ್ಟಿಯ ಕೊರತೆಯನ್ನು ತೋರಿಸುತ್ತದೆ ಎಂದು ಭಾವಿಸಿ, ಅದಕ್ಕೆ ಪರ್ಯಾಯವಾಗಿ ಮಹಿಳೆ ಮತ್ತು ಅಭಿವೃದ್ಧಿ ದೃಷ್ಟಿಕೋನವನ್ನು ಅನುಸರಿಸಲು ಮುಂದಾದವು. "ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರಿಗೆ ಭಾಗವಹಿಸಲು ಸಾಕಷ್ಟು ಅವಕಾಶವಿಲ್ಲದ್ದೇ ಮಹಿಳೆಯರ ಪ್ರಮುಖ ಸಮಸ್ಯೆ ಎಂದು ಇಲ್ಲಿಯವರೆಗೆ ನಂಬಲಾಗಿತ್ತು. ಮಹಿಳೆಯರ ಭಾಗವಹಿಸುವಿಕೆಯನ್ನು ಹೆಚ್ಚಿಸುವುದು, ಸಂಪನ್ಮೂಲ ಹಂಚಿಕೆಯಲ್ಲಿ ಅವರ ಪಾಲನ್ನು ಹೆಚ್ಚಿಸುವುದು, ಭೂಮಿ, ಉದ್ಯೋಗ, ಆದಾಯಗಳಲ್ಲಿ ಪುರುಷರೊಂದಿಗೆ ಸಮಾನ ಅವಕಾಶಗಳನ್ನು ಪಡೆಯುವುದು ಇತ್ಯಾದಿ ಆಮೂಲಾಗ್ರವಾದ ಬದಲಾವಣೆಗಳನ್ನು ತರಲು ಅತ್ಯವಶ್ಯಕವಾದ ವಿಧಾನಗಳು ಎಂದು ಪರಿಗಣಿಸಲಾಯಿತು. ಆದರೂ ನಮ್ಮ ಅನುಭವ ಈ ನಂಬಿಕೆಯನ್ನು ಪ್ರಶ್ನಿಸುವಂತೆ ಮಾಡಿದೆ ಎಂದು ಸೆನ್ ತಿಳಿಸಿದರು"(ಉಧೃತ: ಮ್ಯಾಕ್ಡೊನಾಲ್ಡ್ ಎಮ್. (ಇಡಿ), ೧೯೮೭, ಪು. ೮೦-೯೭).

ಮಹಿಳೆ ಮತ್ತು ಅಭಿವೃದ್ಧಿ ದೃಷ್ಟಿಕೋನವು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮುಂದುವರಿದ ಮತ್ತು ಹಿಂದುಳಿದ ದೇಶಗಳ ನಡುವೆ ಇರುವ ಅಸಮಾನತೆಗೆ ಹೆಚ್ಚಿನ ಗಮನವನ್ನು ನೀಡುತ್ತದೆ. ಅಭಿವೃದ್ಧಿ ಕಾರ್ಯಗಳು ಮತ್ತು ಅವು ತರುವ ಬದಲಾವಣೆಗಳು ಮಹಿಳೆಯರ ಜೀವನದ ಮೇಲೆ ಯಾವ ರೀತಿ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ವಿಶ್ಲೇಷಿಸುತ್ತದೆ. ಬ್ರಿಡ್ಜ್ "ಮಹಿಳೆ ಮತ್ತು ಅಭಿವೃದ್ಧಿಯು ಮಹಿಳೆಯನ್ನು ಅಭಿವೃದ್ಧಿಯೆಡೆಗೆ ಸಂಯೋಜಿಸುವ ತಂತ್ರಗಳ ಬದಲಿಗೆ ಮಹಿಳೆ ಹಾಗೂ ಅಭಿವೃದ್ಧಿ ಪ್ರಕ್ರಿಯೆಯ ಸಂಬಂಧಕ್ಕೆ ಗಮನ ಹರಿಸುತ್ತದೆ ಎಂದು ವಾದಿಸಿದ"(ಉಧೃತ: ಯುಎನ್, ೧೯೯೪, ಪು. ೯). ಜಾಕ್ಸನ್ ಸಿ. ಆ್ಯಂಡ್

ಪಿಯರ್ಸನ್ "ಈ ದೃಷ್ಟಿಕೋನವು ಮುಖ್ಯವಾಗಿ ನವಉದಾರೀಕರಣ ದೃಷ್ಟಿಕೋನದೆಡೆಗಿನ ದಕ್ಷತೆಗೆ ಕಾಳಜಿ ವಹಿಸುತ್ತದೆ. ಇದರ ಆರಂಭದ ಅಂಶವೆಂದರೆ ಮಹಿಳೆಯರ ಹೊರತಾದ ಅಭಿವೃದ್ಧಿ ಪ್ರಕ್ರಿಯೆಯು ಸಂಪನ್ಮೂಲಗಳ ನಾಶ ಎಂದು ಅಭಿಪ್ರಾಯಪಟ್ಟ"(ಜಾಕ್ಸನ್ ಸಿ. ಆ್ಯಂಡ್ ಪಿಯರ್ಸನ್ ಆರ್., ೧೯೯೮, ಪು. ೩೩). ಇದು ಸಾಮಾಜಿಕ ಸಂಬಂಧಗಳಲ್ಲಿರುವ ಲಿಂಗ ಅಸಮಾನತೆಯ ರಚನೆಗಳನ್ನು ವಿಶ್ಲೇಷಣೆ ಮಾಡಿತು. ಅದರ ಪರಿಣಾಮವಾಗಿ ವರ್ಗದಲ್ಲಿನ ಲಿಂಗಸಂಬಂಧವನ್ನು ವ್ಯವಸ್ಥಿತವಾಗಿ ವಿಶ್ಲೇಷಣೆ ಮಾಡಲು ಆಗಲಿಲ್ಲ. ರಾಥ್‌ಜೆಬರ್ ಅವರು "WAD ನ ಸೈದ್ಧಾಂತಿಕ ಮಟ್ಟದಲ್ಲಿ ವರ್ಗವನ್ನು ಗುರುತಿಸಿದರೂ ವಾಸ್ತವದ ಯೋಜನೆಗಳ ವಿನ್ಯಾಸ ಮತ್ತು ಅನುಷ್ಠಾನದಲ್ಲಿ ಇದು WID ದ ಹಾಗೆಯೇ ಗುಂಪು ಗುಂಪು ಮಹಿಳೆಯರನ್ನು ಅವರ ವರ್ಗ, ವರ್ಣ, ಸಾಂಸ್ಕೃತಿಕ ವಿಭಜನೆಯನ್ನು ಮಾಡದೇ, ಅವುಗಳಲ್ಲಿರುವ ಅಧಿಕಾರದ ಪ್ರಭಾವವನ್ನು, ವಾಸ್ತವಿಕ ಸಾಮಾಜಿಕ ಸ್ಥಾನಮಾನವನ್ನು ಪರಿಗಣಿಸಲಿಲ್ಲ ಎಂದು ವಾದಿಸಿದ"(ರಾಥ್‌ಜೆಬರ್, ಇ., ೧೯೯೨ ಪು. ೪೮).

ಅಭಿವೃದ್ಧಿಯಲ್ಲಿ ಮಹಿಳೆಗಿಂತ ಮಹಿಳೆ ಮತ್ತು ಅಭಿವೃದ್ಧಿಯು ಮಹಿಳೆಯ ಸ್ಥಾನಮಾನವನ್ನು ಕಟು ವಿಮರ್ಶೆಗೆ ಒಳಪಡಿಸಿತು. ಆದರೆ ಮಹಿಳೆಯ ಅಧೀನತೆ ಮತ್ತು ತುಳಿತಕ್ಕೆ ಇರುವ ಪಿತೃಪ್ರಭುತ್ವದ ಸಂಬಂಧವನ್ನು, ಉತ್ಪಾದನೆಯಲ್ಲಿರುವ ತಾರತಮ್ಯವನ್ನು ಪೂರ್ಣವಾಗಿ ಗುರುತಿಸಲು ವಿಫಲವಾಯಿತು. ಮಹಿಳೆಯ ಸ್ಥಾನಮಾನವು ಯಾವಾಗ ಸುಧಾರಿಸುತ್ತದೆ ಎಂದರೆ ಆಂತರಿಕ ರಚನೆಗಳು ನ್ಯಾಯಸಮ್ಮತ ಆದಾಗ ಮಾತ್ರ. ಇದಕ್ಕೆ ಸಾಕ್ಷ್ಯವಾಗಿ ಮಹಿಳೆಯ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ರಚನೆಗಳಲ್ಲಿ ಈಗಲೂ ಸಮಸ್ಯೆಗಳಿರುವವು. ಈ ದೃಷ್ಟಿಕೋನವನ್ನು ಅನುಸರಿಸಿ ಮಹಿಳೆಯರಿಗೆ ಬೆಂಬಲವನ್ನು ನೀಡಲು ಯೋಜಿಸಿದ ಹಲವಾರು ಯೋಜನೆಗಳು ನಿರೀಕ್ಷಿತ ಫಲಿತಾಂಶವನ್ನು ನೀಡಲಿಲ್ಲ. ಇದಕ್ಕೆ ಒಂದು ಪ್ರಮುಖ ಕಾರಣವೇನೆಂದರೆ ಮಹಿಳೆಯರ ವೇತನ ತರುವ ಕೆಲಸಗಳು ಕೌಟುಂಬಿಕ ಜವಾಬ್ದಾರಿಯನ್ನಾಗಲಿ, ಮಹಿಳೆ ಮನೆಗೆ ವ್ಯಯಿಸುತ್ತಿದ್ದ ಸಮಯವನ್ನಾಗಲಿ ಕಡಿಮೆ ಮಾಡಲು ಸಾಧ್ಯವಾಗಲಿಲ್ಲ. ಮಹಿಳೆಯ ಮೇಲೆ ಇನ್ನಷ್ಟು ಹೊರೆಯಾಯಿತು. ಜೊತೆಗೆ ಇದು ಮಹಿಳೆಯನ್ನು ಆರ್ಥಿಕ ಉತ್ಪಾದನಾ ಚಟುವಟಿಕೆಗಳಿಗೆ ಕೇಂದ್ರೀಕರಿಸಿ ಮಹಿಳೆ ಮನೆಗೆ ನೀಡುವ ಕೊಡುಗೆಯನ್ನು ಕನಿಷ್ಠಗೊಳಿಸಿತು. ಈ ದೃಷ್ಟಿಕೋನ ಹಲವು ನ್ಯೂನತೆಗಳನ್ನು ಹೊಂದಿದ್ದರೂ ಸಹ ಮಹಿಳೆ ಅನೌಪಚಾರಿಕ ಚಟುವಟಿಕೆಗಳ ಮೂಲಕ ಆರ್ಥಿಕ ಉತ್ಪಾದನೆಯನ್ನು ಮಾಡಬೇಕು ಎಂಬುದನ್ನು ಕೇಂದ್ರೀಕರಿಸಿತು. ಇದರ

ಸೀಮಿತತೆಯು ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ ದೃಷ್ಟಿಕೋನ ಮುನ್ನೆಲೆಗೆ ಬರಲು ಕಾರಣವಾಯಿತು.

**ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ**

1970ರ ಮಧ್ಯಭಾಗದಲ್ಲಿ ಸಸೆಕ್ಸ್ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ಸಂಸ್ಥೆಯಲ್ಲಿ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯ ಪರಾಧೀನತೆಗೆ ಸಂಬಂಧಪಟ್ಟ ವಿಷಯ ಕುರಿತು ಮಹಿಳೆಯರ ಗುಂಪೊಂದು ಕೆಲಸ ಮಾಡುತ್ತಿತ್ತು. ಪುರುಷರು ಮತ್ತು ಮಹಿಳೆಯರ ನಡುವಿನ ಅಸಮಾನ ಸಂಬಂಧವೇ ಮಹಿಳೆಯರ ಪರಾಧೀನತೆಗೆ ಕಾರಣ ಎಂಬುದನ್ನು ಈ ಗುಂಪು ಎತ್ತಿ ಹಿಡಿಯಿತು. ಇದು ಅಭಿವೃದ್ಧಿಯಲ್ಲಿ ಮಹಿಳೆ ಮತ್ತು ಪುರುಷಪ್ರಧಾನತೆಯನ್ನು ಸ್ತ್ರೀವಾದಿ ವಿಶ್ಲೇಷಣೆಯ ದೃಷ್ಟಿಯಿಂದ ಪ್ರಶ್ನಿಸಿ, ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿಯನ್ನು ಪರಿಚಯಿಸಿತು. ಲಿಂಗವ್ಯವಸ್ಥೆಯನ್ನು ಮುಖ್ಯವಾಹಿನಿಗೆ ತರಬೇಕೆನ್ನುವ ಉದ್ದೇಶವನ್ನು ಹೊಂದಿದೆ. ಈ ಪರಿಕಲ್ಪನೆಯಿಂದ ಅಭಿವೃದ್ಧಿ 'ಮಹಿಳೆ'ಯಿಂದ 'ಲಿಂಗವ್ಯವಸ್ಥೆ'ಗೆ ವರ್ಗಾವಣೆಯಾಯಿತು. ಈ ವರ್ಗಾವಣೆಯು ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿಯ ವಿಧಾನದ ಹುಟ್ಟಿಗೆ ಕಾರಣವಾಯಿತು. ಈ ವಿಧಾನವು WAD ಗೆ ಪರ್ಯಾಯವಾಗಿ ೧೯೮೦ರಲ್ಲಿ ಹೊರಹೊಮ್ಮಿತು. GAD ಮಹಿಳೆ ಮತ್ತು ಪುರುಷರಿಗಿರುವ ಸಾಮಾಜಿಕ ಪಾತ್ರಗಳನ್ನು ಸಮಗ್ರವಾಗಿ ಗ್ರಹಿಸುತ್ತದೆ.

'ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ'ಯ ಸೈದ್ಧಾಂತಿಕ ಚೌಕಟ್ಟನ್ನು ಹಲವು ಪ್ರಸ್ತಾವನೆಗಳ ಆಧಾರದ ಮೇಲೆ ನಿರ್ಮಿಸಲಾಗಿದೆ. ಅದರ ಪ್ರಕಾರ ಸಮಾಜದಲ್ಲಿ ಬದಲಾವಣೆಯನ್ನು ತರುವ ದೃಷ್ಟಿಯಿಂದ ಮಹಿಳೆಯರಿಗೆ ಅವಕಾಶ ಕಲ್ಪಿಸುವ ವಿಚಾರವನ್ನು ಅರ್ಥ ಮಾಡಿಕೊಳ್ಳಲು ನಮ್ಮ ಗಮನವನ್ನು ಕೇವಲ ಮಹಿಳೆಯರ ಮೇಲೆ ಕೇಂದ್ರೀಕರಿಸಿದರೆ ಸಾಲದು, ಮಹಿಳೆ ಮತ್ತು ಪುರುಷರ ನಡುವಿನ ಸಾಮಾಜಿಕ ಸಂಬಂಧಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆಯಾಗಬೇಕು. ಮಹಿಳೆಯರದು ಸಮರೂಪವಾದ ಒಂದು ಗುಂಪಲ್ಲ. ಅವರು ವರ್ಗ, ವರ್ಣ ಮತ್ತು ಧರ್ಮಗಳಿಂದ ವಿಭಜಿಸಲ್ಪಟ್ಟಿದ್ದಾರೆ. ಯಾವುದೇ ಸಾಮಾಜಿಕ ಪ್ರಕ್ರಿಯೆಯನ್ನು ವಿಶ್ಲೇಷಿಸುವಾಗ ಲಿಂಗವ್ಯವಸ್ಥೆಗೆ ಸಂಬಂಧಿಸಿದಂತೆ ರಚನೆ ಹಾಗೂ ಕ್ರಿಯಾತ್ಮಕತೆಯನ್ನು ಗಮನಕ್ಕೆ ತೆಗೆದುಕೊಂಡು ಮಹಿಳೆ ಮತ್ತು ಪುರುಷರ ಜೀವನವನ್ನು ಪುನರ್ ವಿಶ್ಲೇಷಣೆಗೆ ಒಳಪಡಿಸಬೇಕು. ಮಹಿಳೆಯರ ಸಂತಾನೋತ್ಪತ್ತಿಯ ಚಟುವಟಿಕೆಗಳನ್ನಷ್ಟೇ ಅಲ್ಲದೆ ಸಾಮಾಜಿಕ ಪ್ರಕ್ರಿಯೆಯ ಕ್ರಿಯಾಶೀಲ ವ್ಯಕ್ತಿಗಳನ್ನಾಗಿಯೂ ಅವರನ್ನು ಗುರುತಿಸಬೇಕು. 'ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ'ಯ ಪ್ರಕಾರ ಅಭಿವೃದ್ಧಿಯಲ್ಲಿ ಮಹಿಳೆಯರನ್ನು ಸೇರಿಸಿಕೊಳ್ಳದಿರುವುದಕ್ಕೆ ಕಾರಣ ಅವರ ಅಗೋಚರತೆ, ಅವರಿಗೆ ದೊರೆಯದೆ ಇರುವ ತರಬೇತಿ, ಹಣಕಾಸು ಸೌಲಭ್ಯ ಅಥವಾ ಆತ್ಮಗೌರವದ

ಕೊರತೆಗಳಾಗಲಿ ಅಲ್ಲ, ಸಾಮಾಜಿಕ ವ್ಯವಸ್ಥೆಯ ರಚನೆ ಹಾಗೂ ಪ್ರಕ್ರಿಯೆಗಳು ಮಹಿಳೆಯರಿಗೆ ಅನನುಕೂಲವಾಗಿರುವುದೇ ಅಭಿವೃದ್ಧಿ ಪ್ರಕ್ರಿಯೆಯಿಂದ ಮಹಿಳೆಯರು ದೂರವಾಗಿರಲು ಕಾರಣ. ಈ ಅನನುಕೂಲತೆಗೆ ಮೂಲ ಕಾರಣವೆಂದರೆ ದೈಹಿಕವಾಗಿ ಮತ್ತು ಬೌದ್ಧಿಕವಾಗಿ ಪುರುಷರು ಶ್ರೇಷ್ಠರೆಂಬ ದಮನಾತ್ಮಕ ನಂಬಿಕೆ, ಇದು ಎಲ್ಲ ಸಂಸ್ಕೃತಿ ಮತ್ತು ಸಮಾಜಗಳಲ್ಲೂ ವಿವಿಧ ರೂಪಗಳಲ್ಲಿ ಕಂಡುಬರುತ್ತದೆ. ಈ ನಂಬಿಕೆ ಮಹಿಳೆಯರಲ್ಲಿ ತಮ್ಮ ಬಗ್ಗೆ ಹಾಗೂ ತಮ್ಮ ಸಾಮರ್ಥ್ಯಗಳ ಬಗೆಗೆ ಕೀಳರಿಮೆ ಮೂಡಿಸಲು ಕಾರಣವಾಗಿದೆ.

ಮಹಿಳೆಯರ ಪರಾಧೀನತೆ ಮತ್ತು ಅನನುಕೂಲತೆಗೆ ಮತ್ತೊಂದು ಕಾರಣವೇಂದರೆ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸಂಪನ್ಮೂಲಗಳ ಮೇಲೆ ಪುರುಷರು ಹೊಂದಿರುವಂತಹ ನಿಯಂತ್ರಣ ಹಾಗೂ ಆ ನಿಯಂತ್ರಣದ ಮೂಲಕ ಅವರು ಪಡೆದಿರುವಂತ ಅಧಿಕಾರ, ಇದರಿಂದ ಮಹಿಳೆಯರು ಅನುಭವಿಸುವ ಅನಾನುಕೂಲತೆಗಳನ್ನು ತೊಡೆದುಹಾಕಲು ಶಿಕ್ಷಣ, ತರಬೇತಿ, ಹಣಕಾಸಿನ ಸಹಾಯ ಮುಂತಾದವು ಅಂತಿಮ ಪರಿಹಾರಗಳಲ್ಲ. ಮಹಿಳೆಯರನ್ನು ಸಶಕ್ತಗೊಳಿಸುವ ನಿಟ್ಟಿನಲ್ಲಿ ಪ್ರಯತ್ನ ಮಾಡುವುದು ಮುಖ್ಯವಾಗುತ್ತದೆ ಎಂದು ಈ ದೃಷ್ಟಿಕೋನ ಹೇಳುತ್ತದೆ. ಮಹಿಳೆಯರ ಅನನುಕೂಲತೆಗಳನ್ನು ಬೆಂಬಲಿಸುತ್ತಿರುವ ಒಟ್ಟು ವ್ಯವಸ್ಥೆಯ ರಚನೆಯನ್ನೇ ಬದಲಾಯಿಸುವ ಅವಶ್ಯಕತೆ ಇದೆ ಎಂಬುದು ಇವರ ವಾದ. ಉದಾಹರಣೆಗೆ ಕಾನೂನುಗಳನ್ನು ಬದಲಾಯಿಸುವುದು, ಹಾಗೆಯೇ ಸಾಮಾಜಿಕ ಮತ್ತು ಖಾಸಗಿ ಕ್ಷೇತ್ರಗಳಲ್ಲಿ ಲಿಂಗವ್ಯವಸ್ಥೆಗೆ ಸಂಬಂಧಿಸಿದ ಸ್ವರೂಪವನ್ನು ಆಮೂಲಾಗ್ರವಾಗಿ ಬದಲಾಯಿಸುವ ಅವಶ್ಯಕತೆಯನ್ನು ಪ್ರತಿಪಾದಿಸಿತು. ಈ ನಿಟ್ಟಿನಲ್ಲಿ ಪುರುಷ ಮತ್ತು ಮಹಿಳೆಯರಿಬ್ಬರಿಂದಲೂ ಪ್ರಯತ್ನಗಳು ನಡೆಯಬೇಕಾಗಿದೆ. ಏಕೆಂದರೆ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ ಚಿಂತನೆ ತನ್ನೆಲ್ಲ ವಿಶ್ಲೇಷಣೆಗೆ ಲಿಂಗವ್ಯವಸ್ಥೆಯ ಸಂಬಂಧಗಳನ್ನು ಆಧಾರವಾಗಿಸಿದೆ. ಲಿಂಗವ್ಯವಸ್ಥೆಯ ಸಂಬಂಧಗಳೆಂದರೆ ಸಾಮಾಜಿಕ ರಚನೆಯಿಂದ ಪುರುಷ ಮತ್ತು ಮಹಿಳೆಯರ ನಡುವೆ ಬೆಳೆದುಬಂದಿರುವ ಒಂದು ಸಾಮಾಜಿಕ ಸಂಬಂಧ. ಈ ಸಂಬಂಧದ ಮುಖ್ಯ ಲಕ್ಷಣವೆಂದರೆ ಅಸಮಾನತೆ, ಅದು ಪುರುಷರ ಆಳ್ವಿಕೆಯನ್ನು ಮಹಿಳೆಯರ ಪರಾಧೀನತೆಯನ್ನು ಎತ್ತಿ ಹಿಡಿಯುತ್ತದೆ. ಅಂದರೆ ಪುರುಷ ಮತ್ತು ಮಹಿಳೆಯರ ನಡುವೆ ಏರ್ಪಡುವ ಒಂದು ಬಗೆಯ ಅಸಮಾನ ಅಧಿಕಾರ ಸಂಬಂಧ. ಈ ಅಸಮಾನ ಅಧಿಕಾರ ಸಂಬಂಧವೇ ಇತರ ವ್ಯವಸ್ಥೆಗಳಲ್ಲಿ ಲಿಂಗ ಅಸಮಾನತೆಯು ಬೇರೂರಲೂ ಕಾರಣವಾಗಿದೆ ಎಂದು ಹೇಳುತ್ತದೆ.

ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿಯು ಮೊದಲೆರಡು ದೃಷ್ಟಿಕೋನಗಳಿಗಿಂತ ಹೆಚ್ಚು ಸಮಗ್ರವಾಗಿದೆ. ಲಿಂಗವ್ಯವಸ್ಥೆಯನ್ನು ಸಾಮಾಜಿಕ ಸಂಘಟನೆಯ ಒಂದು ಸಂಗತಿ ಎಂದು ನಂಬುತ್ತದೆ. ಆದರೆ ಅದೊಂದೇ ಮಹಿಳೆಯರ ಪರಿಸ್ಥಿತಿಯನ್ನು ನಿರ್ಧರಿಸುವ ಪ್ರಮುಖವಾದ ಶಕ್ತಿಯುತವಾದ ಅಂಶ ಎಂದು ಸೂಚಿಸುವುದಿಲ್ಲ. ಸಾಂಸ್ಕೃತಿಕ ಸ್ವರೂಪದಿಂದ ಕೂಡಿರುವ

ಸಾಮಾಜಿಕ ಅಸಮಾನತೆ ಮತ್ತು ವಿಭಜನೆಯನ್ನು ಕೂಡ ಇದು ವಿಶ್ಲೇಷಿಸಲು ಪ್ರಯತ್ನಿಸುತ್ತದೆ. ಹಾಗೆಯೇ ಇದರ ಪ್ರತಿಪಾದಕರು ಆರ್ಥಿಕ ಅಭಿವೃದ್ಧಿಯು ಹೇಗೆ ಈ ಲಿಂಗವ್ಯವಸ್ಥೆಯ ಸಮೀಕರಣವನ್ನು ಬೆಂಬಲಿಸುವ ಒಂದು ಪ್ರಮುಖ ಘಟಕವಾಗುತ್ತದೆ ಎಂಬುದನ್ನು ಪರಿಶೀಲಿಸುತ್ತಾರೆ. ಮಾರುಕಟ್ಟೆ, ಆರ್ಥಿಕತೆ ಮತ್ತು ವರ್ಗರಹಿತ ಸಮಾಜವನ್ನು ಸೃಷ್ಟಿಸುತ್ತಿರುವ ಸಾಮಾಜಿಕ ಆರ್ಥಿಕ ಬದಲಾವಣೆಯ ಪ್ರಕ್ರಿಯೆಯನ್ನೇ ಅಭಿವೃದ್ಧಿ ಎಂದು ಅರ್ಥ ಮಾಡಿಕೊಳ್ಳಬಹುದು. ಇಂತಹ ಆರ್ಥಿಕ ವ್ಯವಸ್ಥೆಯು ಎರಡು ಕಾರಣಗಳಿಗಾಗಿ ಮಹಿಳೆಯರ ವಿಷಯದಲ್ಲಿ ಸಕರಾತ್ಮಕವಾಗಿ ಕಾರ್ಯ ನಿರ್ವಹಿಸುವುದಿಲ್ಲ. ಒಂದು ಐತಿಹಾಸಿಕವಾಗಿ ಮುಂದುವರಿದ ದೇಶಗಳ ಬಂಡವಾಳಶಾಹಿಯು ಮಹಿಳೆಯರನ್ನು ಶ್ರಮಕ್ಕಾಗಿ ಇರುವ ಒಂದು ಮೀಸಲು ಪಡೆಯನ್ನಾಗಿ ಪರಿಗಣಿಸುವುದೇ ಅಲ್ಲದೆ ಅವರನ್ನು ಈ ವ್ಯವಸ್ಥೆ ತನಗೆ ಬೇಕೆನಿಸಿದಾಗ ಬಳಸಿಕೊಂಡು ಬೇಡವಾದಾಗ ತೆಗೆದುಹಾಕುವಂತೆ ಇಟ್ಟುಕೊಂಡಿರುತ್ತದೆ. ಮಹಿಳೆಯರದು ವೇತನರಹಿತ ದುಡಿಮೆಯಾದುದರಿಂದ ಸಮಾಜದ ಸಂಪತ್ತನ್ನು ಸೃಷ್ಟಿಸುವುದರಲ್ಲಿ ಅವರು ಅನರ್ಹರೆಂದು ಪರಿಗಣಿಸಲ್ಪಟ್ಟು ಸಂಪತ್ತಿನ ಹಂಚಿಕೆಯಲ್ಲೂ ಪಾಲನ್ನು ಪಡೆಯಲು ಅವರು ಅನರ್ಹರೆಂದು ಮೂಲೆಗುಂಪಾಗುತ್ತಾರೆ. ಎರಡನೆಯ ಕಾರಣವೆಂದರೆ ಸಮಾಜವಾದಿ ಸಿದ್ಧಾಂತವು ಮಹಿಳೆಯರ ದುಡಿಮೆ ಮತ್ತು ಅಸಮಾನತೆಯನ್ನು ಗುರುತಿಸಿ ಮಹಿಳೆಯರ ವಿಮೋಚನೆಯ ಹೋರಾಟಕ್ಕೆ ಸಾರ್ವಜನಿಕ ಬೆಂಬಲ ಸಿಗುವಂತೆ ಮಾಡಿತು. ಮಹಿಳೆ ಮತ್ತು ಪುರುಷರ ನಡುವಿನ ಜೈವಿಕ ವ್ಯತ್ಯಾಸಕ್ಕಿಂತ ಸಾಮಾಜಿಕ, ಸಾಂಸ್ಕೃತಿಕ ರಚನೆ ಏರ್ಪಡಿಸುವ ವ್ಯತ್ಯಾಸವನ್ನು ಗಮನಿಸಬೇಕೆಂದು ಹೇಳುವುದು.

ಬ್ರೈಡಾನ್ ಹಾಗೂ ಚಾಂಟ್ ಅವರ ಪ್ರಕಾರ "ಇದರ ಉದ್ದೇಶವು, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವಲಯಗಳಲ್ಲಿ ಲಿಂಗ ಅಸಮಾನತೆಯನ್ನು ಹೋಗಲಾಡಿಸುವುದು ಹಾಗೂ ಸುಸ್ಥಿರ ಅಭಿವೃದ್ಧಿಯನ್ನು ಸಾಧಿಸಲು ಮಹಿಳೆ ಮತ್ತು ಪುರುಷರ ನಡುವೆ ಸಮತೋಲನವನ್ನು ಸೃಷ್ಟಿಸುವುದು ಎಂದು ಅಭಿಪ್ರಾಯ ಪಟ್ಟರು. ಇದರ ಮೂಲಬೇರು ಸ್ತ್ರೀವಾದಿ ಮಾನವಶಾಸ್ತ್ರದೊಂದಿಗೆ ಬೆಸೆದಿದ್ದು ಇದು ಭಿನ್ನ ಸಾಂಸ್ಕೃತಿಕ ಮತ್ತು ಆಂತರಿಕ ಸಾಂಸ್ಕೃತಿಕ ವ್ಯತ್ಯಾಸಗಳ ಕೇಂದ್ರೀಕೃತವಾಗಿದೆ. ಇದು ಆಧುನಿಕೋತ್ತರ ಸ್ತ್ರೀವಾದ ಪ್ರಭಾವವನ್ನು ಹೊಂದಿದೆ. ಅಂದರೆ ಜ್ಞಾನ, ಅಧಿಕಾರ ಸಂಬಂಧ ಹಾಗೂ ವ್ಯತ್ಯಾಸಗಳ ಕುರಿತು ವ್ಯಾಖ್ಯಾನವನ್ನು ನೀಡಿದೆ ಎಂದು ಹೇಳಿದ್ದಾರೆ. ಇದು ರಚನಾತ್ಮಕ ಬದಲಾವಣೆಯಲ್ಲಿ ಪುರುಷ ಹಾಗೂ ಮಹಿಳೆಯರ ನಡುವಣ ಅಧಿಕಾರದ ವರ್ಗಾವಣೆಯ ಬದ್ಧತೆಯನ್ನು ಬಯಸುತ್ತದೆ. ಪಿತೃಪ್ರಧಾನತೆಯ ಸಾಮಾಜಿಕ ಸಂರಚನೆಗಳು ಮಹಿಳೆಯರ ಅಧೀನತೆಗೆ ಹಾಗೂ ಶೋಷಣೆಗೆ ಒಳಪಡಿಸುತ್ತದೆ ಎಂದು ಒತ್ತಿ ಹೇಳಿದ್ದಾರೆ"(ಬ್ರೈಡಾನ್ ಎಲ್. ಮತ್ತು ಚಾಂಟ್ ಎಸ್., ೧೯೮೯, ಪು. ೪೧೭೭). ಗಾರ್ಡ್ನರ್ ಕೆ ಅ್ಯಂಡ್ ಲೂಯಿಸ್ ಡಿ., ಅವರು

"ಇದು ಮಹಿಳೆಯರನ್ನು ಬದಲಾವಣೆಯ ಕಾರ್ಯಕರ್ತರೆಂದು ಪರಿಗಣಿಸಿರುವುದೇ ಹೊರತಾಗಿ ಅಭಿವೃದ್ಧಿಯ ನೆರವಿನಲ್ಲಿ ನಿಷ್ಕ್ರಿಯತೆ ಹೊಂದಿದವರೆಂದು ಪರಿಗಣಿಸಲಾಗಿಲ್ಲವೆಂದು ವಾದಿಸಿ, ಪರಿಣಾಮಕಾರಿ ರಾಜಕೀಯ ಧ್ವನಿಯ ಅವಶ್ಯಕತೆಗಾಗಿ ಮಹಿಳೆಯರ ಸಂಘಟನೆ ಅಗತ್ಯವೆಂದು ಒತ್ತಿಹೇಳಿದ್ದಾರೆ" (ಗಾರ್ಡ್ನರ್ ಕೆ. ಆ್ಯಂಡ್ ಲೂಯಿಸ್ ಡಿ., ೧೯೯೬, ಪು. ೪೨).

ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿಯು ಮಹಿಳೆಯರ ಉತ್ಪಾದನೆ ಅಥವಾ ಸಂತಾನೋತ್ಪತ್ತಿಯ ಅಂಶಗಳನ್ನು ಹೊರಗಿಡುವುದಿಲ್ಲವೆಂದು ಭಾವಿಸಿದ ಈ ದೃಷ್ಟಿಕೋನವು ಮಹಿಳೆಯರ ಪಾತ್ರವನ್ನು ಕುಟುಂಬದ ಹೊರಗೂ ಹಾಗೂ ಒಳಗೂ ವಿಶ್ಲೇಷಿಸುತ್ತದೆ. ಮಹಿಳೆಯ ಕುಟುಂಬ ಮತ್ತು ಕುಟುಂಬ ನಿರ್ವಹಣೆಯನ್ನು ಸಾಮಾನ್ಯವಾಗಿ ದ್ವಿವಿಭಜನೆ ನೀತಿಯಿಂದ ಅಲ್ಲಗಳೆಯುತ್ತದೆ. ಈ ವಿಧಾನದ ಒಂದು ಪ್ರಮುಖ ಪ್ರಯೋಜನವೆಂದರೆ ಇದು ಹೋಲಿಕೆ ಅಥವಾ ಏಕರೂಪತೆಯನ್ನು ಊಹಿಸುವುದಿಲ್ಲ. ಅಂದರೆ ನೀತಿ ನಿರೂಪಕರು ಮಹಿಳೆಯರನ್ನು ಪರಿಗಣಿಸುವಾಗ ಊಹೆಗಳು ಸ್ಪಷ್ಟವಾಗಿರಬೇಕು ಅಂದರೆ ಎಲ್ಲ ಸಮಾಜಗಳಲ್ಲೂ ಮಹಿಳೆಯರು ಒಂದೇ ರೀತಿಯ ಸ್ಥಾನಮಾನಗಳನ್ನು ಹೊಂದಿರುತ್ತಾರೆಂದು ಸಾರ್ವತ್ರಿಕ ಅಭಿಪ್ರಾಯವನ್ನು ಹೊಂದಿರಬಾರದು ಎಂದು ವಾದಿಸುವುದು. ಈ ವಿಧಾನವು ಮಹಿಳೆಯರ ಉತ್ಪಾದನೆ ಹಾಗೂ ಸಂತಾನೋತ್ಪತ್ತಿ ಪಾತ್ರಗಳನ್ನು ಪರಿಗಣಿಸಿ ಪುರುಷ ಹಾಗೂ ಮಹಿಳೆಯ ಸ್ಥಾನವನ್ನು ನಿರ್ಧರಿಸುವಲ್ಲಿ ಇಬ್ಬರ ಸಂಬಂಧವೂ ನಿರ್ಣಾಯಕವಾಗಿರುತ್ತದೆ ಜೊತೆಗೆ ಪರಿಣಾಮವು ಸಹ ಇಬ್ಬರ ಮೇಲು ಆಗುತ್ತದೆ. ಹಾಗೆಯೇ ಇದು ಹಲವು ಸಮುದಾಯ ಅಭಿವೃದ್ಧಿಯ ಯೋಜನೆಗಳಿಗೆ ಕಾರಣವಾಗಿದೆ. ಈ ಯೋಜನೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಗೆ ಪ್ರೋತ್ಸಾಹಿಸುತ್ತದೆ ಹಾಗೂ SAPನ ಅಡಿಯಲ್ಲಿ ಹಲವಾರು ಸುಧಾರಣೆಗಳು ಕಂಡುಬಂದವು. ಈ ವಿಧಾನದ ಪ್ರಮುಖ ನ್ಯೂನತೆಯೆಂದರೆ ಇದರ ಲಾಭಗಳು ದೀರ್ಘಾವಧಿಯ ನಂತರವೇ ಕಾಣಿಸುವುದು. ಇದರಿಂದಾಗಿ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮತ್ತು ಸರ್ಕಾರೇತರ ಸಂಸ್ಥೆಗಳು ಬಳಸುತ್ತಿರುವ ಬ್ಯುಸಿನೆಸ್ ಮಾಡಲ್‌ಗಳಲ್ಲಿ ಕಡಿಮೆ ಅವಧಿಯಲ್ಲಿ ಸಕಾರಾತ್ಮಕ ಫಲಿತಾಂಶಗಳು ಕಂಡುಬರುತ್ತಿದ್ದು ಇವೆರಡರ ನಡುವೆ ಸಂಘರ್ಷ ಏರ್ಪಡುತ್ತಿರುವುದು. ಉದಾಹರಣೆಗಾಗಿ ದಶಕಗಳಿಂದ ಗ್ರಾಮೀಣ ಮಹಿಳೆಯರ ಸಮಸ್ಯೆಗಳಿಗೆ ಆದಾಯ ಉತ್ಪನ್ನ ಚಟುವಟಿಕೆಗಳು ಮತ್ತು ಸಾಲ ಸೌಲಭ್ಯಗಳು ಸೂಕ್ತ ಪರಿಹಾರವನ್ನು ಒದಗಿಸುತ್ತಿದ್ದವು. ಬಡತನವೇ ಈ ಪ್ರದೇಶದ ಪ್ರಮುಖ ಸಮಸ್ಯೆಯೆಂದು WAD ದೃಷ್ಟಿಕೋನವು ವಾದಿಸಿದೆ. ಆದರೆ "ಈ ವಿಧಾನದ ಸಮೀಕರಣದಿಂದ ಕೇವಲ ಅಸಮಾನ ಲಿಂಗಸಂಬಂಧದ ಸಮಸ್ಯೆಯಾಗಿ ಉಳಿದಿದೆ. ಅಂದರೆ WIDನ ಲಿಂಗಾಧಾರಿತ ಶ್ರಮವಿಭಜನೆ, ವೇತನರಹಿತ ಜೀತ, ನಿರ್ಧಾರ ಕೈಗೊಳ್ಳುವಿಕೆ ಹಾಗೂ ಲಿಂಗ ಅಸಮಾನತೆಯ ಸಮಸ್ಯೆಗಳ ಕುರಿತು ಗಮನ ಹರಿಸಲಾಗಿಲ್ಲ.

ಲಿಂಗ ಅಸಮಾನತೆಯ ಪ್ರಶ್ನೆಗಳಿಗೆ ಈ ವಿಧಾನಗಳು ಉತ್ತರ ನೀಡುವಲ್ಲಿ ವಿಫಲವಾದರೂ ಈ ಅಧ್ಯಯನ ಕ್ಷೇತ್ರದಲ್ಲಿ ಯಶಸ್ಸನ್ನು ಪಡೆಯಲು ಸಾಧ್ಯವಾಗಿದೆ. ಇದಕ್ಕೆ ಪ್ರಮುಖ ಕಾರಣವೆಂದರೆ ಮಹಿಳೆಯರ ವಾಸ್ತವ ಅಗತ್ಯಗಳಾದ ಆಹಾರ, ನೀರು, ವಸತಿ ಹಾಗೂ ಬಟ್ಟೆಯ ಕುರಿತು ವಿವರಣೆ ನೀಡುತ್ತದೆ. ಇವೆಲ್ಲವೂ ಗ್ರಾಮೀಣ ಜನರ ಆದ್ಯತೆಯ ಅವಶ್ಯಕತೆಗಳು ಹಾಗೂ ಈ ವಿಧಾನಗಳು ತತ್‌ಕ್ಷಣದಲ್ಲಿ ಈ ಅವಶ್ಯಕತೆಗಳನ್ನು ಪೂರೈಸಿವೆ. ಆದರೆ ಈ ಸಾಮಾನ್ಯ ಅವಶ್ಯಕತೆಗಳನ್ನು ಅಲ್ಪಾವಧಿಯಲ್ಲೇ ತಲುಪಬಹುದು. ಅಲ್ಲಿಯ ಜನರ ಉಳಿವಿಗೆ ದೈನಂದಿನ ಅವಶ್ಯಕತೆಗಳೇ ಪ್ರಮುಖವಾಗಿರುತ್ತವೆ. ವಿಲಿಯಮ್ಸ್‌ರ ಪ್ರಕಾರ ಗ್ರಾಮೀಣ ಪ್ರದೇಶದ ಮಹಿಳೆಯರ ದಿನದ ಸಮಸ್ಯೆಗಳಿಗೆ ಮಹತ್ವ ನೀಡದಿದ್ದಲ್ಲಿ ಲಿಂಗ ಸಮಾನತೆಯನ್ನು ಸಾಧಿಸುವುದು ಅಸಾಧ್ಯ. ಆದರೆ ಸರಕಾರವು ಪರಿಸ್ಥಿತಿಯನ್ನು ಸರಿಪಡಿಸಲು ವಲಸೆಯನ್ನು ಮುಖ್ಯವಾಹಿನಿಯಲ್ಲಿ ಲಿಂಗವನ್ನು ತರಲು ಪ್ರಯತ್ನಿಸುತ್ತದೆ. ಈ ಪ್ರಕ್ರಿಯೆಯನ್ನು ಲಿಂಗವ್ಯವಸ್ಥೆ ಮುಖ್ಯವಾಹಿನಿ ಎಂದು ಕರೆಯಲಾಗುತ್ತದೆ"(ವರ್ಲ್ಡ್ ಬ್ಯಾಂಕ್, ೨೦೦೧, ಪು.೩೩೫).

## ಮುಖ್ಯವಾಹಿನಿಯಾಗಿ ಲಿಂಗವ್ಯವಸ್ಥೆ

ಅಭಿವೃದ್ಧಿ ಪ್ರಕ್ರಿಯೆಗೆ ಲಿಂಗಸಂಬಂಧಿ ವಿಶ್ಲೇಷಣೆಯ ಅಗತ್ಯವಿರುವುದೆಂದು ಗುರುತಿಸಲಾಯಿತು. ಇದನ್ನು ಸಾಧಿಸಲು ಯೋಜನೆ, ಕಾರ್ಯಕ್ರಮ ಮತ್ತು ಬಜೆಟ್ ತಯಾರಿಕೆಯಲ್ಲಿ ಲಿಂಗ ಸಮಾನತೆಗೆ ಗಮನ ಹರಿಸಲಾಯಿತು. ಈ ಪ್ರಕ್ರಿಯೆಯನ್ನು ಲಿಂಗವ್ಯವಸ್ಥೆ ಮುಖ್ಯವಾಹಿನಿಗೆ ತರುವುದು ಎಂದು ಕರೆಯಲಾಯಿತು. ಹೀಗೆಂದರೆ ಅಭಿವೃದ್ಧಿಯ ಆಚರಣೆಗಳಲ್ಲಿ ಮಹಿಳೆ ಮತ್ತು ಪುರುಷರ ಅಗತ್ಯಗಳನ್ನು ಆದ್ಯತೆಯ ವಿಷಯವಾಗಿ ಪರಿಗಣಿಸುವುದು ಎಂದು ಭಾವಿಸಲಾಯಿತು.

## ನೀತಿ ದೃಷ್ಟಿಕೋನ

ದೇಸಾಯಿ ಮತ್ತು ಪೋಟರ್ ಅವರು "ಯೋಜನಾ ವಿಧಾನಗಳು ಸಿದ್ಧಾಂತಗಳ ಮೂಲಭೂತ ಪರಿಕಲ್ಪನೆಗಳನ್ನು ಒಳಗೊಳ್ಳುತ್ತವೆ. ಸಂಘ ಮತ್ತು ಸಂಸ್ಥೆಗಳು ಯಾವ ತೆರನಾಗಿ ನೀತಿಗಳನ್ನು ಘೋಷಿಸಿಕೊಳ್ಳಬೇಕು ಎನ್ನುವುದನ್ನು ಇವು ನಿರ್ಧರಿಸುತ್ತವೆ. ಯೋಜನೆಯು ನೀತಿಗಳನ್ನು ತಾರ್ಕಿಕತೆ, ಉದ್ದೇಶ, ತತ್ವ ಹಾಗೂ ಕಾರ್ಯತಂತ್ರಗಳನ್ನು ಪರಿಗಣಿಸಿ ರೂಪಿಸಲಾಗುತ್ತದೆ. ಅಭಿವೃದ್ಧಿ ಯೋಜನೆಯ ಕುರಿತ ಸಾಹಿತ್ಯವು ಐದು ನೀತಿ ದೃಷ್ಟಿಕೋನಗಳನ್ನು ಗುರುತಿಸಿದೆ. ಅವುಗಳನ್ನು ಈ ಭಾಗದಲ್ಲಿ ಪರೀಕ್ಷಿಸಲಾಗುತ್ತದೆ. ಇವು ಕಲ್ಯಾಣ, ಸಮಾನತೆ, ಬಡತನ ವಿರೋಧಿ, ದಕ್ಷತೆ ಮತ್ತು ಸಬಲೀಕರಣ ಗುರಿಗಳನ್ನು ಒಳಗೊಂಡಿವೆ. ಅಭಿವೃದ್ಧಿಯಲ್ಲಿ ಮಹಿಳೆ ದೃಷ್ಟಿಕೋನವು ಪ್ರಮುಖವಾಗಿ ಸಮಾನತೆ, ಬಡತನ ವಿರೋಧಿ ಮತ್ತು ದಕ್ಷತೆಯನ್ನು ಒಳಗೊಂಡಿದ್ದರೆ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ

ಸಬಲೀಕರಣ ದೃಷ್ಟಿಕೋನವನ್ನು ಒಳಗೊಂಡಿದೆ" (ದೇಸಾಯಿ ವಿ. ಮತ್ತು ಪಾಟರ್ ಆರ್. (ಇಡಿ), ೨೦೦೨, ಪು. ೧೭೪).

ಕಲ್ಯಾಣ ದೃಷ್ಟಿಕೋನವು ೧೯೫೦ ಮತ್ತು ೧೯೬೦ರಲ್ಲಿ ಪ್ರಾರಂಭವಾಯಿತು. ಅಭಿವೃದ್ಧಿ ಪ್ರಯತ್ನಗಳಲ್ಲಿ ಮೊಟ್ಟಮೊದಲ ಬಾರಿಗೆ ಮಹಿಳೆಯನ್ನು ಗುರುತಿಸಲಾಯಿತು. ಇದನ್ನು ಅನುಸರಿಸಿ ೧೯೭೦ರಲ್ಲಿ ಅಭಿವೃದ್ಧಿಯಲ್ಲಿ ಮಹಿಳೆ ನಂತರ ೧೯೮೦ರಲ್ಲಿ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ ಅದರ ಸ್ಥಾನವನ್ನು ಅಲಂಕರಿಸಿತು. ಅಭಿವೃದ್ಧಿಯಲ್ಲಿ ಮಹಿಳೆ ದೃಷ್ಟಿಕೋನಕ್ಕಿಂತ ಮೊದಲು ಅನುಷ್ಠಾನದಲ್ಲಿದ್ದ ಕಲ್ಯಾಣ ವಿಧಾನವು ಅತ್ಯಂತ ಪರಿಣಾಮಕಾರಿ ಹಾಗೂ ವೈರುಧ್ಯ ನೀತಿಗಳಿಂದ ಕೂಡಿತ್ತು. ೧೯೯೦ರಲ್ಲಿ ಸಬಲೀಕರಣ ವಿಧಾನವನ್ನು ಯೋಜನಾ ಗ್ರಹಿಕೆಯಲ್ಲಿ ಅಳವಡಿಸಿಕೊಳ್ಳಲಾಯಿತು. ಇಲ್ಲಿ ಪ್ರಸ್ತುತಪಡಿಸಿದ ವಿವಿಧ ನೀತಿಗಳು ವಿವಿಧ ಅವಧಿಗಳಲ್ಲಿ ಪ್ರಭಾವ ಬೀರುತ್ತವೆ.

ಹಳೆಯ ದೃಷ್ಟಿಕೋನ ವಿಧಾನದ ಟೀಕೆಯನ್ನು ಒಳಗೊಂಡ ನೂತನ ನೀತಿ ವಿಧಾನಗಳು ಪ್ರಾರಂಭಗೊಂಡವು. ಆದರೂ ಒಂದೊಂದು ಸಲ ಹಳೆಯ ವಿಧಾನಗಳಿಗೆ ಮರುಕಳಿಸಿರುವುದು ತಿಳಿದುಬರುತ್ತದೆ. ಆದ್ದರಿಂದ ರೂಢಿಯಲ್ಲಿರುವ ವಿಧಾನಗಳಿಂದ ವಿವರಿಸಿದಷ್ಟು ಈ ಯೋಜನಾ ವಿಧಾನಗಳು ಪರಿಪೂರ್ಣವಾಗಿಲ್ಲ ಮತ್ತು ಹಲವು ಬಾರಿ ಬೆರತುಹೋಗಿರುವುದು ಇದೆ.

**ಕಲ್ಯಾಣ ದೃಷ್ಟಿಕೋನ**

ಕಲ್ಯಾಣ ದೃಷ್ಟಿಕೋನವು ೧೯ನೆಯ ಶತಮಾನದ ಸಾಮಾಜಿಕ ಕಲ್ಯಾಣದ ಬೇರುಗಳಲ್ಲಿ ಅಡಕಗೊಂಡಿವೆ. ಈ ಅವಧಿಯಲ್ಲಿ ಬಡವರು ಯಶಸ್ಸುಗೊಳ್ಳಲು ಸಾಧ್ಯವಿಲ್ಲದವರು, ಸ್ವಪ್ರಯತ್ನದಿಂದ ಸುಧಾರಿಸಿಕೊಳ್ಳಲು ಅಸಮರ್ಥರು ಎಂದು ಪರಿಗಣಿಸಲಾಗಿತ್ತು ಮತ್ತು ಸ್ವಯಂದತ್ತಿ ನೀಡುವ ಸ್ವಯಂ ಸಂಘಗಳು, ಸಂಸ್ಥೆಗಳು ಇವರಿಗೆ ಸಹಾಯ ಮಾಡಲು ಜವಾಬ್ದಾರಿಯನ್ನು ಹೊತ್ತವು. ವಸಾಹತು ಅವಧಿಯಲ್ಲಿ ಅಭಿವೃದ್ಧಿ ಮುಖ್ಯ ಪ್ರಯತ್ನವನ್ನು ಕಲ್ಯಾಣದ ನೆರವಿನಿಂದಾಗಿ ಪ್ರತ್ಯೇಕಿಸುವುದು ಸಾಮಾನ್ಯವಾಗಿತ್ತು. ೧೯೫೦ ಮತ್ತು ೧೯೬೦ರಲ್ಲಿ ಇದು ಪ್ರಾರಂಭವಾದರೂ ಇದು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಮಹಿಳೆಯರನ್ನು ಕೇಂದ್ರೀಕರಿಸಿತ್ತು. ಪುರುಷರನ್ನು ಉತ್ಪಾದನಾ ಕಾರ್ಮಿಕರೆಂದು ಪರಿಗಣಿಸಿದರೆ ಮಹಿಳೆಯರನ್ನು ದುರ್ಬಲ ವರ್ಗದವರೆಂದು ನಿಷ್ಕ್ರಿಯ ಪಾಲುದಾರರೆಂದು ಪರಿಗಣಿಸಿತು. ಏಕೆಂದರೆ ಅವರನ್ನು ಪ್ರಾಥಮಿಕವಾಗಿ ಸಂತಾನೋತ್ಪತ್ತಿ ಪಾತ್ರಗಳಿಂದ ಗುರುತಿಸಲಾಗುತ್ತಿತ್ತು.

ಈ ದೃಷ್ಟಿಕೋನದ ಮೊದಲ ಉದ್ದೇಶವು ಮಹಿಳೆಯರಿಗೆ ಸಹಾಯ ಮಾಡುವುದಾಗಿತ್ತು. ಅದು ಯಾವ ತೆರನಾದ ಸಹಾಯವೆಂದರೆ ಅವರನ್ನು ಉತ್ತಮ ತಾಯಿಯರನ್ನಾಗಿ ಮಾಡುವುದು, ಹೆಂಡತಿಯರನ್ನಾಗಿ ಮಾಡುವುದಾಗಿತ್ತು. ಇದರ ಮೂಲಕ ಕುಟುಂಬದ ಕಲ್ಯಾಣವನ್ನು ಸಾಧಿಸಬಹುದು ಎಂದು ಭಾವಿಸಲಾಗಿತ್ತು. ಆದಕಾರಣ ತಾಯಿ ಮತ್ತು ಮಕ್ಕಳ ಆರೋಗ್ಯ, ಪೌಷ್ಟಿಕಾಂಶಗಳ ಸುಧಾರಣೆ, ಕುಟುಂಬ ಯೋಜನೆ ಮತ್ತು ಕುಟುಂಬದ ಆರ್ಥಿಕತೆಗೆ ಸಹಾಯ ಮಾಡುವುದು, ಆ ಮೂಲಕ ಸುಧಾರಿಸುವುದು ಎಂದುಕೊಂಡು ಅವುಗಳನ್ನೇ ಕೇಂದ್ರೀಕರಿಸಿತ್ತು.

ಕಲ್ಯಾಣ ವಿಧಾನದ ಪ್ರಮುಖ ವಿಮರ್ಶಕರಾದ ಕಬೀರ್ ಸಿಂಡರ್ ಮತ್ತು ತಡಸ್ಸೆ "ಮಹಿಳೆಯ ಸಂಸಾರದ ಪಾತ್ರ ಹಾಗೂ ಲಿಂಗಾಧಾರಿತ ಶ್ರಮವಿಭಜನೆಯ ರೂಢಿಗತ ಊಹೆಯನ್ನು ಹೊಂದಿದ್ದರು. ಈ ವಿಧಾನವು ಮಹಿಳೆಯರ ಉತ್ಪಾದನ ಚಟುವಟಿಕೆಗಳು ಹಾಗೂ ಅವರ ಆರ್ಥಿಕ ಕೆಲಸಗಳ ಜವಾಬ್ದಾರಿಗಳನ್ನು ಪ್ರಶ್ನಿಸುವ ಮತ್ತು ಅದರಲ್ಲಿ ಬೇರೂರಿರುವ ತಪ್ಪುಗ್ರಹಿಕೆಗಳನ್ನು ತಿಳಿಸುವಲ್ಲಿ ವಿಫಲಾಯಿತು. ಆದರೂ ಮಹಿಳೆ ಮತ್ತು ಪುರುಷರ ನಡುವೆ ಗೊಂದಲ ಸೃಷ್ಟಿಸದ ಒಂದು ಸುರಕ್ಷಿತ ವಿಧಾನವಾಗಿದೆ ಎಂದಿರುವರು" (ಕಬೀರ್ ಎನ್., ೧೯೯೪, ಪು. ೮೦-೯೭). ಬ್ಯುವಿನಿಕ್ ಎಮ್ "ಕಲ್ಯಾಣ ವಿಧಾನವು ಸ್ವಾವಲಂಬಿಯನ್ನಾಗಿಸದೇ ಅವಲಂಬಿತರನ್ನಾಗಿಸುತ್ತದೆ ಎಂದರು"(ಬುವಿನಿಕ್ ಎಮ್., ಲೈಸಟ್ ಎ. ಮತ್ತು ವಿಲಿಯಂ, ಪಿ., ೧೯೮೩, ಪು. ೧೫೮). ಮೋಸರ್ ಹೇಳುವಂತೆ "ಕಲ್ಯಾಣ ವಿಧಾನ ಕುರಿತ ಅತೃಪ್ತಿಯು ಹಾಗೂ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಪರ್ಯಾಯ ವಿಧಾನಗಳಿಗೆ ಹಾಗೂ ಸಮಾನತೆಯ ವಿಧಾನಕ್ಕೂ ಕಾರಣವಾಯಿತು ಎನ್ನುತ್ತಾರೆ"(ಮೋಸರ್ ಸಿ., ೧೯೯೩, ಪು.೨೧೩).

**ಸಮತೆ ದೃಷ್ಟಿಕೋನ**

ಎಸ್ತರ್ ಬೋಸ್ತರಪ್ ಅವರ ಪುಸ್ತಕ 'ಆರ್ಥಿಕ ಅಭಿವೃದ್ಧಿಯಲ್ಲಿ ಮಹಿಳೆಯ ಪಾತ್ರ (೧೯೭೦)'ದ ಪ್ರಭಾವ, ಪಾಶ್ಚಿಮಾತ್ಯ ಸ್ತ್ರೀವಾದಿಗಳ, ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಮಹಿಳೆಯರ ಆರ್ಥಿಕ ಸ್ಥಿತಿ ಮತ್ತು ಸ್ಥಾನಮಾನದಲ್ಲಾದ ಬದಲಾವಣೆಯನ್ನು ಗ್ರಹಿಸಿತು. ಇದರ ಪ್ರಮುಖ ಊಹೆಯೆಂದರೆ "ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಪುರುಷರೊಂದಿಗೆ ಹೊಂದಿದ್ದ ಸಂಬಂಧವನ್ನು ಕಳೆದುಕೊಳ್ಳುತ್ತಾರೆ. ಅದಕ್ಕೆ ಇರುವ ಕಾರಣಗಳೆಂದರೆ ಒಂದು, ಮಹಿಳೆಯರು ಉತ್ಪಾದನೆ ಹಾಗೂ ಸಂತಾನೋತ್ಪತ್ತಿಯ ಎರಡು, ಪಾತ್ರಗಳನ್ನು ಸಮಾಜದಲ್ಲಿ ನಿಭಾಯಿಸುತ್ತಾರೆ ಎಂಬುದು. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಮಹಿಳೆಯರನ್ನು ಆರ್ಥಿಕ ಉತ್ಪಾದನೆಗಿಂತ ಅವರ ಸಂತಾನೋತ್ಪತ್ತಿ ಪಾತ್ರಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಎರಡು ಸಾಂಪ್ರದಾಯಿಕ ಮತ್ತು ಪಾಶ್ಚಾತ್ಯ

ಅಭಿವೃದ್ಧಿ ಚಟುವಟಿಕೆಗಳನ್ನು ಅಳೆಯುವ ಮಹಿಳೆಯರ ಸಂತಾನೋತ್ಪತ್ತಿ ಪಾತ್ರಗಳ ಮೌಲ್ಯಗಳನ್ನು ಕಡೆಗಣಿಸಿವೆ. ಏಕೆಂದರೆ ಆಧುನಿಕ ವಲಯದಲ್ಲಿ ಅವರ ಕೆಲಸ ಸಂಬಳ ರಹಿತ ದುಡಿಮೆಯಾಗಿದೆ. ಮೂರು ಅಭಿವೃದ್ಧಿ ನೀತಿಗಳು ತೃತೀಯ ಜಗತ್ತಿನ ಮಹಿಳೆಯರ ಸಂಬಳಸಹಿತ ದುಡಿಮೆಗೆ ಅಡ್ಡಿಯಾಗಿವೆ. ನಾಲ್ಕು ಈ ಯೋಜನೆಯು ಸಾಂಪ್ರದಾಯಿಕ ವಲಯದಲ್ಲಿ ಮಹಿಳೆಯರನ್ನು ಹಿಂದೆ ತಳ್ಳಿವೆ ಮತ್ತು ಎರಡು ಲಿಂಗಗಳ ನಡುವಿನ ಆದಾಯದ ಅಂತರವನ್ನು ಹೆಚ್ಚಿಸಿವೆ"(ಬೋಸ್ತರಪ್ ಇ., ೧೯೭೦, ಪು.೧೪೪).

ಈ ದೃಷ್ಟಿಕೋನದ ಪ್ರಕಾರ ಮಹಿಳೆ ಮತ್ತು ಪುರುಷರ ನಡುವೆ ಸಮಾನತೆ ತರಲು ಇಬ್ಬರ ಮಧ್ಯೆ ಸಂಪನ್ಮೂಲ, ಆಸ್ತಿಯನ್ನು ಎಲ್ಲ ಹಂತದಲ್ಲೂ ಮರುಹಂಚಿಕೆ ಮಾಡುವುದು ಮತ್ತು ಮಹಿಳೆಯರ ಪರ ಸಕಾರಾತ್ಮಕ ತಾರತಮ್ಯವನ್ನು ಮಾಡುವುದು. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಉದ್ಯೋಗಾವಕಾಶವನ್ನು ಪಡೆದುಕೊಳ್ಳಲು ಹಾಗೂ ಮಾರುಕಟ್ಟೆಯಲ್ಲಿ ಆರ್ಥಿಕ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ಅವಕಾಶ ಕಲ್ಪಿಸುವುದು. ಇದು ಮಹಿಳೆಯರ ರಾಜಕೀಯ, ಸಾಮಾಜಿಕ, ಆರ್ಥಿಕ ಸ್ಥಾನಮಾನ, ಸ್ವಾಯತ್ತತೆಯನ್ನು ಗಳಿಸಲು ಶಾಸನಬದ್ಧ ಕ್ರಮದ ಅಗತ್ಯವನ್ನು ತಿಳಿಸುತ್ತದೆ. ಈ ವಿಧಾನದ ಮೂಲಕವೇ ಮಹಿಳೆಯರ ಮಾನವ ಹಕ್ಕುಗಳು ವಿಶ್ವದಾದ್ಯಂತ ಗುರುತಿಸಲ್ಪಟ್ಟವು. ಉದಾಹರಣೆಗೆ ವಿಚ್ಛೇದನ ಹಕ್ಕು, ಭೂ ಒಡೆತನ, ಆಸ್ತಿ, ಸಾಲ ಹಾಗೂ ಮತದಾನ ಹಕ್ಕುಗಳನ್ನು ಉಲ್ಲೇಖಿಸಬಹುದು.

ಎಲ್ಲ ಮಹಿಳೆಯರಿಗೆ ಅಧಿಕಾರದ ಮರುಹಂಚಿಕೆಯ ಪ್ರಸ್ತಾಪಿತ ಕಾರಣದಿಂದಾಗಿ ಸಮಾನತೆಯ ವಿಧಾನವು ಹಲವಾರು ಸಮಸ್ಯೆಗಳನ್ನು ಹಾಗೂ ಪ್ರತಿರೋಧವನ್ನು ಎದುರಿಸಿತು. ಇದನ್ನು ಒಂದು ನೀತಿಯಾಗಿ ಪರಿಗಣಿಸಲು ಕಷ್ಟವೆನಿಸಿತು. ಈ ವಿಧಾನವು ಪುರುಷರಿಗೆ ಬೆದರಿಕೆಯೊಡ್ಡಿದ ನೀತಿಯೆಂದು ಗ್ರಹಿಸಲಾಯಿತು.

**ಬಡತನವಿರೋಧಿ ದೃಷ್ಟಿಕೋನ**

೧೯೭೦ರಲ್ಲಿ ಸಮಾನತೆ ದೃಷ್ಟಿಕೋನ ಕುರಿತಾದ ಅಸಂತುಷ್ಟಿಯು ಬಡತನವಿರೋಧಿ ದೃಷ್ಟಿಕೋನ ಹುಟ್ಟಿಗೆ ಕಾರಣವಾಯಿತು. ಮೋಸರ್ ಈ ದೃಷ್ಟಿಕೋನವು "ಮಹಿಳೆಯರ ಮೇಲೆ ಕೇಂದ್ರೀಕೃತವಾಯಿತು ಮತ್ತು ಬಡತನ ನಿರ್ಮೂಲನೆಗೆ ಮೂಲ ಕಾಳಜಿಯನ್ನು ಹೊಂದಿತ್ತು. ಬಡತನ ನಿರ್ಮೂಲನೆ ಉದ್ದೇಶಿತ ಗುಂಪಿನ ಸದಸ್ಯರಾಗಿ ಬಡವರಲ್ಲಿ ತೀರ ಬಡವರು ಅಂದರೆ ಕಡಿಮೆ ಆದಾಯದ ಗುಂಪಿನ ಮಹಿಳೆಯನ್ನು ಗುರುತಿಸಲಾಗಿತ್ತು. ಏಕೆಂದರೆ ಅವರನ್ನು ಆರ್ಥಿಕ ಬೆಳವಣಿಗೆಯಲ್ಲಿ ಒಳಗೊಳ್ಳುವುದರಿಂದ ಅವರು ಕುಟುಂಬದ ಎಲ್ಲ ಸದಸ್ಯರ ಮೂಲ ಅಗತ್ಯಗಳನ್ನು ಪೂರೈಸುತ್ತಾರೆ. ಮಹಿಳೆ ಮತ್ತು ಪುರುಷರ ನಡುವಿನ ಅಸಮಾನತೆಗೆ ಕೇವಲ ಅಧೀನತೆ ಮಾತ್ರ ಕಾರಣವಲ್ಲ. ಅಸಮಾನತೆಯು ಬಡತನದ ಜೊತೆಗೆ ಸಂಬಂಧಿಸಿದೆ. ಅದು ಒಡೆತನ ಹೊಂದಲು ಬಿಡುವುದಿಲ್ಲ. ಅದು ಲಿಂಗ

ಅಸಮಾನತೆಯನ್ನು ಉಂಟುಮಾಡುತ್ತದೆ ಎನ್ನುವರು"(ಮೋಸರ್ ಸಿ., ೧೯೯೩, ಪು. ೧೭೮). ಈ ವಿಧಾನದ ಪ್ರಮುಖ ಉದ್ದೇಶ ಉದ್ಯೋಗ ಹಾಗೂ ಆದಾಯವನ್ನು ಹೆಚ್ಚಿಸುವ ಚಟುವಟಿಕೆಗಳ ಮೂಲಕ ಬಡ ಮಹಿಳೆಯರ ಉತ್ಪಾದಕತೆಯನ್ನು ಹೆಚ್ಚಿಸುವುದು ಮತ್ತು ಬಡತನವನ್ನು ಕಡಿಮೆಗೊಳಿಸಿ ಆರ್ಥಿಕ ಬೆಳವಣಿಗೆಯನ್ನು ಹೊಂದುವುದು.

ಇದು ಮಹಿಳೆಯರ ಸ್ಥಾನಮಾನವನ್ನು ಬದಲಿಸಲು ಬಹಳ ಕಡಿಮೆ ಸಾಮರ್ಥ್ಯವನ್ನು ಬಳಸಲಾಗಿದೆಯೆಂದು ಭಾವಿಸಲಾಯಿತು. ಕಬೀರ್ ಪ್ರಕಾರ "ಮಹಿಳೆಯರ ಸಮಸ್ಯೆಗಳನ್ನು ಕುಟುಂಬದ ಮೂಲ ಅವಶ್ಯಕತೆಗಳೊಂದಿಗೆ ವಿವರಿಸಲಾಗಿದೆ ಹೊರತು ಸಂಪನ್ಮೂಲಗಳ ದೊರಕುವಿಕೆಯಲ್ಲಿ ಅಸಮಾನತೆಯ ಕುರಿತು ವಿವರಿಸಲಾಗಿಲ್ಲ ಎಂದು ವಿಮರ್ಶಿಸಿದ್ದಾರೆ" (ಕಬೀರ್ ಎನ್., ೧೯೯೪, ಪು. ೪೯). ಇದು "ಎಲ್ಲ ಮಹಿಳೆಯರನ್ನು ಹೊರತುಪಡಿಸಿ ಕೇವಲ ಬಡ ಮಹಿಳೆಯರೆಡೆಗೆ ಗಮನ ಹರಿಸುತ್ತದೆ. ಅಭಿವೃದ್ಧಿಯ ಪ್ರಯತ್ನದಲ್ಲಿ ಮಹಿಳೆಯರಿಗುಂಟಾದ ಲಾಭವು ಪುರುಷರಿಗೆ ನಷ್ಟವನ್ನು ಸೂಚಿಸುತ್ತದೆ ಎನ್ನುವ ದ್ವಂದವನ್ನು ಈ ವಿಧಾನವು ಸೃಷ್ಟಿಸುತ್ತದೆ"(ಫರ್ನಾಂಡೀಸ್-ಕೆಲ್ಲಿ ಎಮ್., ೧೯೯೧, ಪು. ೪೧೪-೪೧೯).

ಈ ದೃಷ್ಟಿಕೋನವು ಮುಖ್ಯವಾಗಿ ಮಹಿಳೆಯರನ್ನೊಳಗೊಂಡ ಹಾಗೂ ಮನೆಯ ಸಮೀಪವೇ ಸ್ಥಾಪಿತವಾದ ಸಣ್ಣ ಪ್ರಮಾಣದ ಆದಾಯ ಉತ್ಪಾದಿಸುವ ಯೋಜನೆಗಳನ್ನು ಕೇಂದ್ರೀಕರಿಸುತ್ತದೆ. ಆದಾಯ ಉತ್ಪಾದನೆ ಯೋಜನೆಯ ಅನುಷ್ಠಾನದಲ್ಲಿ ಮಹಿಳೆಯರ ಸಂತಾನೋತ್ಪತ್ತಿ ಹೊರೆಯನ್ನು ನಿರ್ಲಕ್ಷಿಸಲಾಗಿದೆ. ಅವರಿಗೆ ಸಾಕಷ್ಟು ವಿರಾಮದ ವೇಳೆ ಇರುತ್ತದೆಂದು ಭಾವಿಸಲಾಗಿದೆ. ಆದರೆ ಆದಾಯ ಉತ್ಪಾದನ ಯೋಜನೆಗಳು ಮಹಿಳೆಯರ ಕೆಲಸದ ಅವಧಿಯನ್ನು ಹಾಗೂ ಕೆಲಸದ ಹೊರೆಯನ್ನು ಅಧಿಕಗೊಳಿಸುತ್ತವೆ. ಇದು ಮಹಿಳೆಯರ ಸಾಂಪ್ರದಾಯಿಕ ಪಾತ್ರಗಳ ಗ್ರಹಿಕೆಯನ್ನೇ ಹೊಂದಿದ್ದು, ಮಹಿಳೆಯ ಸಾಂಪ್ರದಾಯಿಕ ಚಟುವಟಿಕೆಗಳಿಂದಲೇ ಉತ್ಪಾದನೆಯನ್ನು ಹೆಚ್ಚಿಸುವ ಪ್ರಯತ್ನ ನಡೆಸಿದೆಯೇ ಹೊರತು ಅವರನ್ನು ನೂತನ ಕೆಲಸಗಳಿಗೆ ಪರಿಚಯಿಸುವ ಪ್ರಯತ್ನ ನಡೆಸಿರುವುದಿಲ್ಲ. ಆದರೂ ಈ ಸಣ್ಣ ಪ್ರಮಾಣದ ಈ ಯೋಜನೆಗಳು ಸ್ವ-ಬೆಳವಣಿಗೆಯನ್ನು ಹೆಚ್ಚಿಸುವಲ್ಲಿ ಅಲ್ಪಸಾಮರ್ಥ್ಯ ಹೊಂದಿದ್ದು, ಆರ್ಥಿಕವಾಗಿ ದುರ್ಬಲವಾಗಿರುವ ಕಾರಣ ಬಡತನ ಕಡಿಮೆಗೊಳಿಸಲು ಹಾಗೂ ಮಹಿಳೆಯರ ಜೀವನಾಧಾರ ಸುಧಾರಿಸಲು ವಿಫಲವಾಗಿದೆ.

**ದಕ್ಷತಾ ದೃಷ್ಟಿಕೋನ**

ಇದರ ಹೆಸರೇ ಸೂಚಿಸುವಂತೆ ಮೂರನೆಯ ಜಗತ್ತಿನ ಮಹಿಳೆಯರು ಅಧಿಕ ದಕ್ಷತೆ ಹಾಗೂ ಪರಿಣಾಮಕಾರಿಯಾದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳುವುದನ್ನು ಪ್ರತಿಪಾದಿಸುತ್ತದೆ. ಆರ್ಥಿಕ ಬೆಳವಣಿಗೆ ಮತ್ತು ಮಹಿಳೆಯರ ಜೀವನೋಪಾಯ

ಸಾಮರ್ಥ್ಯವನ್ನು ಹೆಚ್ಚಿಸುವುದು ಈ ದೃಷ್ಟಿಕೋನದ ಗುರಿ. ಅಭಿವೃದ್ಧಿ ಪ್ರಯತ್ನಗಳು ಹೆಚ್ಚಾಗಬೇಕಾದರೆ ಅಥವಾ ಯಶಸ್ವಿಯಾಗಬೇಕಾದರೆ ಮಹಿಳೆಯ ಉತ್ಪಾದನೆಯಲ್ಲಿ ಭಾಗವಹಿಸುವಿಕೆ ದರ ಹೆಚ್ಚಳವಾಗಬೇಕೆಂಬುದು ಈ ದೃಷ್ಟಿಕೋನದ ಊಹೆ. ೧೯೭೦ರ ಮಧ್ಯಭಾಗದ ಆರ್ಥಿಕ ಬಿಕ್ಕಟ್ಟಿನ ಪರಿಸ್ಥಿತಿಯ ಸಂದರ್ಭದಲ್ಲಿ ದಕ್ಷತೆ ವಿಧಾನಕ್ಕೆ ಮಹತ್ವ ನೀಡಲಾಯಿತು ಹಾಗೂ ಮಹಿಳೆಯನ್ನು ಆರ್ಥಿಕ ಕಾರ್ಯಕರ್ತರೆಂದು ಪರಿಗಣಿಸಲಾಯಿತು. ೧೯೮೦ರಲ್ಲಿ ಐಎಂಎಫ್ ಮತ್ತು ವಿಶ್ವಬ್ಯಾಂಕ್ ಮತ್ತು ಎಸ್‌ಎಪಿ ರಚನೆ ಮಾಡಿದ ಅಭಿವೃದ್ಧಿ ಡಿಸೈನ್‌ನಲ್ಲಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ದಕ್ಷತೆ ಮತ್ತು ಉತ್ಪಾದಕತೆಯನ್ನು ಹೆಚ್ಚಿಸುವುದು ಇದರ ಉದ್ದೇಶಗಳಾಗಿದ್ದವು.

ನವ ಉದಾರವಾದಿ ಚಿಂತನೆಯನ್ನು ಹೊಂದಿದ ಯೋಜನಾ ಕಾರ್ಯಕರ್ತರು ಈ ದೃಷ್ಟಿಕೋನದ ಯೋಜನೆಗಳಿಗೆ ಜವಾಬ್ದಾರರು. ಇವರು ಆರ್ಥಿಕ ಚೇತರಿಕೆಯಲ್ಲಿ ಮಹಿಳೆಯರನ್ನು ಪ್ರಮುಖ ಪಾತ್ರದಾರಿಗಳನ್ನಾಗಿ ಪರಿಗಣಿಸಲಿಲ್ಲ. ಈ ದೃಷ್ಟಿಕೋನವು ಮಹಿಳೆಯರ ಸ್ಥಾನಮಾನವನ್ನು ಪ್ರಾಥಮಿಕವಾಗಿ ಆರ್ಥಿಕ ನೆಲೆಯಲ್ಲಿಯೆ ಪರಿಗಣಿಸಲಾಗಿದೆ ಹೊರತು ಅವರನ್ನು ಸಮಾನತೆಯ ಅಂಶವಾಗಿ ನೋಡಿಲ್ಲ. ಈ ವಿಧಾನದ ಯೋಜನೆ ಸ್ವಸಹಾಯ ಸಂಘಗಳ ಅಂಶಗಳೆಡೆ ಗಮನ ಹರಿಸಿದೆ ಮತ್ತು ಮಹಿಳೆಯರು ಸ್ವಸಹಾಯ ಸಂಘದ ಸದಸ್ಯರಾಗಿ ಸಮುದಾಯಕ್ಕೆ ವಿವಿಧ ಸೇವೆಗಳನ್ನು ಸಲ್ಲಿಸುತ್ತಿರುವುದರ ಕುರಿತು ತಿಳಿಸುತ್ತದೆ.

ಈ ದೃಷ್ಟಿಕೋನದ ಕುರಿತು ಹಲವಾರು ವಿಮರ್ಶೆಗಳು ಬಂದಿವೆ. ಅಭಿವೃದ್ಧಿ ಪ್ರಕ್ರಿಯೆಯ ಯಶಸ್ಸಿಗೆ ಮಹಿಳೆಯರನ್ನು ಒಟ್ಟುಗೂಡಿಸುವುದು ಅವಶ್ಯಕ ಎನ್ನುವ ಊಹೆಯನ್ನು ಪ್ರಶ್ನಿಸಲಾಗಿದೆ. ಇದಕ್ಕೆ ಕಾರಣ ಈ ವಿಧಾನವು ಆರ್ಥಿಕ ಸ್ಥಿತಿ ಹಾಗೂ ಮಹಿಳೆಯರ ಸ್ಥಾನಮಾನವನ್ನು ಅಗತ್ಯವಾಗಿ ಸುಧಾರಿಸುವುದಿಲ್ಲ ಎನ್ನುವ ವಾಸ್ತವ. ಅದಲ್ಲದೇ ಈ ವಿಧಾನವು ಪ್ರತಿಬಾರಿಯೂ ಅಧಿಕ ಲಿಂಗ ಸಮಾನತೆ ಹಾಗೂ ಎಲ್ಲ ಮಹಿಳೆಯರಿಗೂ ನಿರ್ಧಾರ ತೆಗೆದುಕೊಳ್ಳುವ ಅಧಿಕಾರವಿದೆ ಎಂದು ಮಹಿಳೆಯರ ಭಾಗವಹಿಸುವಿಕೆಯನ್ನು ತಪ್ಪಾಗಿ ಅರ್ಥೈಸಲಾಗುತ್ತದೆ. ಮಹಿಳೆಯರ ಜೀವನದ ಉತ್ಪಾದನೆ ಹಾಗೂ ಸಂತಾನೋತ್ಪತ್ತಿಯ ನಡುವಿರುವ ಅಂತರ ಸಂಬಂಧವನ್ನು ನಿರ್ಲಕ್ಷಿಸಿರುವುದೆಂದು ಟೀಕಿಸಲಾಗಿದೆ. ಇದಲ್ಲದೆ ಮಹಿಳಾ ಶ್ರಮದ ಪುನರ್ ಚೈತನ್ಯ ಶಕ್ತಿಯ ಮೇಲೆ ಅತಿಯಾದ ಅವಲಂಬನೆ ಹೊಂದಿದೆ. ಅತಿಯಾದ ದೀರ್ಘ ಕೆಲಸದ ಅವಧಿ ಹಾಗೂ ವೇತನರಹಿತ ಕೆಲಸ. ಜೊತೆಗೆ ಇವರನ್ನು ಮನುಷ್ಯರನ್ನಾಗಿ ಪರಿಗಣಿಸದೇ ಕೇವಲ ಅಭಿವೃದ್ಧಿಗೆ ಅನುಕೂಲ ಮಾಡುವವರು ಎಂದು ತಿಳಿಸುತ್ತದೆ. ಮಹಿಳೆಯರನ್ನು ಇತರೆ ಅಭಿವೃದ್ಧಿ ಉದ್ದೇಶಗಳಿಗಾಗಿ ಪರಿಗಣಿಸಿ ಅವರಿಗೆ ದೊರೆಯುವ ಹಕ್ಕುಗಳನ್ನು ಪರಿಗಣಿಸದೆ ನೋಡುವ ಈ ದೃಷ್ಟಿಕೋನ ವಿವಾದಕ್ಕೆ ಒಳಗಾಯಿತು.

## ಸಬಲೀಕರಣ ದೃಷ್ಟಿಕೋನ

ಸಬಲೀಕರಣ ವಿಧಾನವು ಕೇವಲ ಇತ್ತೀಚಿನ ವಿಧಾನವಾಗಿದ್ದು, ಇದನ್ನು ೧೯೮೦ರಲ್ಲಿ ಸ್ತ್ರೀವಾದಿಗಳು ಹಾಗೂ ದಕ್ಷಿಣದ ಪ್ರಗತಿಪರರು ಪ್ರಾರಂಭಿಸಿದರು. ಆದ್ದರಿಂದ ಈ ಸಿದ್ಧಾಂತದಲ್ಲಿ ದಕ್ಷಿಣದ ವಾಸ್ತವತೆಗಳು ಅಡಗಿವೆ. ಈ ವಿಧಾನವು ಲಿಂಗ ಹಾಗೂ ಅಭಿವೃದ್ಧಿಯ ಆಯಾಮದಿಂದ ರಚಿಸಲಾಗಿದೆ. ಇದು 'ಕೆಳಗಿನಿಂದ ಮೇಲೆತ್ತು', 'ಬಾಟಮ್ ಅಪ್' ಮತ್ತು ಪಾತ್ರಗಳ ಆಧಾರಿತ ತಂತ್ರವಾಗಿದೆ. ಮಹಿಳೆಯರು ಅಸಮಾತೆಯನ್ನು ಭಿನ್ನವಾಗಿ ಅನುಭವಿಸುತ್ತಾರೆ ಎಂಬುದನ್ನು ಈ ದೃಷ್ಟಿಕೋನ ಗುರುತಿಸಿತು. ಇದು ಅಂದರೆ ವರ್ಗ, ವರ್ಣ, ಜನಾಂಗ, ಜಾತಿ, ವಯಸ್ಸು, ವಸಾಹತುಶಾಹಿ, ನವವಸಾಹತುಶಾಹಿಯನ್ನು ಅವಲಂಬಿಸಿದೆ. ಮಹಿಳೆಯ ಮೇಲೆ ನಡೆಯುವ ಹಿಂಸೆಯು ವಿವಿಧ ಹಂತದಲ್ಲಿ, ವಿವಿಧ ಬಗೆಯಲ್ಲಿ, ವಿವಿಧ ಸಂದರ್ಭಗಳಲ್ಲಿ ನಿರ್ಧಾರವಾಗುತ್ತದೆ. ಮಹಿಳೆ ಮತ್ತು ಪುರುಷರಲ್ಲಿನ ಅಸಮಾನತೆಯು ಕೇವಲ ಅವರ ನಡುವಿನ ಸಂಬಂಧದಿಂದ ಮಾತ್ರ ಬರುವುದಿಲ್ಲ, ಸಮಾಜದಲ್ಲಿನ ಇತರ ಸಂಬಂಧ ಮತ್ತು ರಚನೆಗಳಿಂದ ಬರುತ್ತದೆ ಎಂದು ಭಾವಿಸುತ್ತದೆ.

ಮಹಿಳೆಯರನ್ನು ನಿಯಂತ್ರಣಗೊಳಿಸುವ ಹಾಗೂ ಪುರುಷರಿಗೆ ಒಲವು ತೋರುವ ಸಾಮಾಜಿಕ ಸಂಸ್ಥೆಗಳು ಹಾಗೂ ಸಂಬಂಧಗಳು ಮಹಿಳೆಯರಿಗೆ ಕಾಳಜಿ ತೋರುವುದಕ್ಕಿಂತಲೂ ಪ್ರತ್ಯೇಕ ಗುಂಪಾಗಿ ಪರಿಗಣಿಸಿವೆ. ಆದ್ದರಿಂದ ಲಿಂಗಸಂಬಂಧಗಳು ಮತ್ತು ಅಧಿಕಾರ, ಮಹಿಳಾ ಸಬಲೀಕರಣದ ಮಹತ್ವ, ಪ್ರತ್ಯೇಕತೆ ಮತ್ತು ತಮ್ಮ ಸ್ವ ಜೀವನವನ್ನು ಸ್ವಕ್ರಮ ಮಾರ್ಗದಲ್ಲಿ ನಿಯಂತ್ರಣದಲ್ಲಿ ತೆಗೆದುಕೊಳ್ಳುವ ಕುರಿತು ಈ ವಿಧಾನವು ಗಮನ ಹರಿಸುತ್ತದೆ. ಸಬಲೀಕರಣದ ಮೂಲಕ ಮಹಿಳೆಯರು ಪುರುಷರೊಂದಿಗೆ ಹೆಚ್ಚಿನ ಸಮಾನತೆ ಹೊಂದುತ್ತಾರೆಂದು ಈ ವಿಧಾನವು ಊಹಿಸಿದೆ. ಆದ್ದರಿಂದ ಮಹಿಳಾ ಸಬಲೀಕರಣದ ಮಾರ್ಗವೆಂದರೆ ರಾಜಕೀಯದಲ್ಲಿ ತೊಡಗುವಿಕೆ, ಜಾಗೃತಿಗೊಳ್ಳುವಿಕೆ ಹಾಗೂ ಶಿಕ್ಷಣ ಮತ್ತು ಆದಾಯ ಗಳಿಕೆಯ ಅವಕಾಶಗಳು. ಇದರ ಉದ್ದೇಶ ನೀತಿ ಪ್ರಕ್ರಿಯೆ ಹಾಗೂ ಅಭಿವೃದ್ಧಿ ತಂತ್ರವನ್ನು ಪರಿವರ್ತನೆಗೊಳಿಸುವುದಾಗಿದೆ.

ಮಹಿಳೆ ಮತ್ತು ಅಭಿವೃದ್ಧಿ ಪ್ರಯತ್ನದಲ್ಲಿ ತೊಡಗಿರುವ ಇತರ ನೀತಿ ಮತ್ತು ವಿಧಾನಗಳನ್ನು ಸಬಲೀಕರಣ ವಿಧಾನವು ಕಾನೂನಾತ್ಮಕವಾಗಿಸಲು ಯತ್ನಿಸಿದೆ ಎಂದು ಹಲವು ವಿಮರ್ಶಕರ ನಿಲುವು. ಜ್ಯಾಕ್ಸನ್ "ಮಹಿಳೆಯರು ಜನಸಂಖ್ಯಾ ನಿಯಂತ್ರಣ, ಸಮರ್ಥನೀಯ ಅಭಿವೃದ್ಧಿ, ಬಡತನ ನಿರ್ಮೂಲನೆಯ ಸಾಧನವೆಂದು"(ಜಾಕ್ಸನ್ ಸಿ. ಮತ್ತು ಪಿಯರ್ಸನ್ ಆರ್., ೧೯೯೮, ಪು.೧೫೭) ಸಬಲೀಕರಣ ವಿಧಾನವನ್ನು ವಿಮರ್ಶಿಸಿದ. ಇದಲ್ಲದೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳಾ ಸಬಲೀಕರಣದ ಯೋಚನೆಯು ಪುರುಷರು

ತಮ್ಮ ನಿಯಂತ್ರಣವನ್ನು ಕಳೆದುಕೊಳ್ಳುತ್ತಾರೇನೋ ಎನ್ನುವ ಭಯ ಇರುವುದು ವ್ಯಕ್ತವಾಗುತ್ತಿದೆ ಎನ್ನಬಹುದು.

**ಅಭಿವೃದ್ಧಿಯಲ್ಲಿ ಮಹಿಳೆ ಹಾಗೂ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ ದೃಷ್ಟಿಕೋನಗಳ ಹೋಲಿಕೆ**

ವಿವಿಧ ಸೈದ್ಧಾಂತಿಕ ರೂಪರೇಷೆಗಳಲ್ಲಿ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿಪರಿಕಲ್ಪನೆಗಳು ಹಾಗೂ ನೀತಿ ದೃಷ್ಟಿಕೋನಗಳನ್ನು ಚರ್ಚಿಸಲಾಗಿದೆ. ೧೯೭೦ರಿಂದ ೧೯೯೦ರವರೆಗೂ ನೀತಿ ಹಾಗೂ ರೂಢಿಗಳೆರಡೂ ಅಭಿವೃದ್ಧಿಯಲ್ಲಿ ಮಹಿಳೆ ದೃಷ್ಟಿಕೋನದಿಂದ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿ ದೃಷ್ಟಿಕೋನಕ್ಕೆ ಬದಲಾವಣೆ ಹೊಂದಿವೆ. ಮಹಿಳಾವರ್ಗದಿಂದ ಲಿಂಗವ್ಯವಸ್ಥೆ ವರ್ಗಾವಣೆಯಾಯಿತು. ನಂತರ ಇದರೊಂದಿಗೆ ಸಬಲೀಕರಣ ಹಾಗೂ ಮುಖ್ಯವಾಹಿನಿಗೆ ಎನ್ನುವ ನೂತನ ಪರಿಕಲ್ಪನೆಗಳೂ ಜತೆಗೂಡಿದವು. ಸಬಲೀಕರಣ ದೃಷ್ಟಿಕೋನ ಹಾಗೂ ಲಿಂಗವ್ಯವಸ್ಥೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದ ಪರಿಕಲ್ಪನೆಗಳು ಇತ್ತೀಚಿನ ಸೈದ್ಧಾಂತಿಕ ಆಲೋಚನೆಗಳ ಸಾಲಿಗೆ ಸೇರಿದವು. ಆದ್ದರಿಂದ ಲಿಂಗವ್ಯವಸ್ಥೆಯನ್ನು ಅಧಿಕಾರ ಸಂಬಂಧಿತ ಪರಿಕಲ್ಪನೆಯೆಂದು ಅಭಿಪ್ರಾಯಪಡಲಾಗಿದೆ. ವಲಸೆ ಹಾಗೂ ಗ್ರಾಮೀಣ ಜೀವನಾಧಾರ ಕುರಿತ ವಿಶ್ಲೇಷಣೆಗೆ ಹೆಚ್ಚಿನ ನೆರವನ್ನು ಸ್ತ್ರೀವಾದಿ ಸಿದ್ಧಾಂತಗಳಿಂದ ಪಡೆಯುತ್ತದೆ.

**ಸ್ತ್ರೀವಾದಿ ದೃಷ್ಟಿಕೋನಗಳು**

ಸ್ತ್ರೀವಾದ ಎಂದರೇನು? ಇದು ಪ್ರಾರಂಭಗೊಂಡಿದ್ದು ಯಾವಾಗ? ಸ್ತ್ರೀವಾದದಲ್ಲಿ ಲಿಂಗವ್ಯವಸ್ಥೆಗೆ ಏಕೆ ಇಷ್ಟು ಮಹತ್ವ ಕೊಡಲಾಗಿದೆ? ಒಬ್ಬ ಸ್ತ್ರೀವಾದಿಯೊಡನೆ ವ್ಯಕ್ತಿಯೊಬ್ಬ ಯಾವ ರೀತಿಯಲ್ಲಿ ಸಂಬಂಧ ಹೊಂದಬಹುದು? ಇಂತವೇ ಕೆಲ ಪ್ರಶ್ನೆಗಳು ಇತ್ತೀಚಿನ ಕೆಲ ದಶಕಗಳಲ್ಲಿ ಅತಿ ಹೆಚ್ಚು ಬಳಕೆಯಲ್ಲಿವೆ. ಆದರೆ ಈ ಎಲ್ಲ ಗೌಜುಗದ್ದಲಗಳೇಕೆ ಎನ್ನುವುದು ಅನೇಕರಿಗೆ ಸರಿಯಾಗಿ ಅರ್ಥವೇ ಆಗಿಲ್ಲ. ಯಾವುದೇ ಸಮಾಜ ಸಂಸ್ಕೃತಿಯಲ್ಲಿ ಮಹಿಳೆ ಹಾಗೂ ಪುರುಷ ಇಬ್ಬರಿಗೂ ಒಂದೊಂದು ಪ್ರತ್ಯೇಕ ಚೌಕ್ಕಟ್ಟು ಇದ್ದೇ ಇರುತ್ತದೆ. ಸಾಂಪ್ರದಾಯಿಕ ಪಿತೃಪ್ರಧಾನ ಪದ್ಧತಿಗಳು ಮಹಿಳೆಯರ ಮಹತ್ವಾಕಾಂಕ್ಷೆ ಮತ್ತು ಅಭಿಲಾಷೆಗಳಿಗೆ ಯಾವುದೇ ರೀತಿಯ ಮಹತ್ವ, ಅವಕಾಶಗಳನ್ನು ಕೊಟ್ಟಿಲ್ಲ. 'The chronicle of higher education'ದ ಒಂದು ಲೇಖನದಲ್ಲಿ(ಡಿಸೆಂಬರ್ ೧೯೮೬) ಎಲಿಜೆಬೆತ್ ಜೇನ್‌ವೇ ಮಿಕ್ಕ ಮಾನವ ಜಾತಿಯಂತೆ ಮಹಿಳೆಯರ ಜೀವನಕ್ಕೆ ಸರಿಯಾದ ಒಂದು ಸ್ಥಾನ ಕಲ್ಪಿಸಿಲ್ಲ. ಅವಳ ಅನುಭವಗಳಿಗೆ ಅವಕಾಶವನ್ನೂ ಸಹ ಮಾಡಿಕೊಟ್ಟಿಲ್ಲ. ಈಗಲೂ ಮಹಿಳೆಯ ಜೀವನವನ್ನು ಅಪ್ರಸ್ತುತವೆಂದೇ ತಿಳಿಯಲಾಗುತ್ತದೆ ಎಂದು ಹೇಳುತ್ತಾಳೆ. ಸಮಾಜದಲ್ಲಿ ಹೆಣ್ಣುಮಕ್ಕಳನ್ನು ಅತಿ ಚಿಕ್ಕ ವಯಸ್ಸಿನಿಂದಲೇ ಗಂಡು ಮಕ್ಕಳಿಗಿಂತ ಭಿನ್ನವಾಗಿ ಬೆಳೆಸುತ್ತಾರೆ. ಅವರ ಮನಸ್ಸು ಮೊದಲಿನಿಂದಲೇ ಈ ವ್ಯತ್ಯಾಸವನ್ನು

ಒಪ್ಪಿಕೊಳ್ಳುವಂತೆ ಮಾಡುತ್ತಾರೆ. ಹೆಣ್ಣುಮಕ್ಕಳಿಗೆ ನಯ-ನಾಜೂಕು ವಿನಯವಂತಿಕೆ ಬೆಳೆಸಿಕೊಳ್ಳುವ ಶಿಕ್ಷಣವನ್ನು ನೀಡಿದರೆ; ಗಂಡುಮಕ್ಕಳಿಗೆ ಇಂತಹ ಗುಣಗಳನ್ನು ಬೆಳೆಸಿಕೊಳ್ಳುವುದು ಹೇಡಿಯ ಲಕ್ಷಣ, ಅದೊಂದು ವ್ಯಕ್ತಿತ್ವದ ಕೊರತೆಯೆಂಬಂತೆ ಬಿಂಬಿಸುತ್ತಾರೆ. ಹೆಣ್ಣಿನಲ್ಲಿ ದಯೆ ಮತ್ತು ಸಹನಶೀಲತೆಗಳನ್ನು ಬೆಳೆಸಿದರೆ, ಗಂಡಿನಲ್ಲಿ ಮಹತ್ವಾಕಾಂಕ್ಷೆ ಹಾಗೂ ವಿವೇಚನಾಶೀಲತೆಯನ್ನು ಬೆಳೆಸಲಾಗುತ್ತದೆ. ಹೆಣ್ಣುಮಕ್ಕಳ ಯಾವುದೇ ರೀತಿಯ ಗಡಸುತನದ ಪ್ರದರ್ಶನ, ಸಾಹಸ ಹಾಗೂ ಗಂಡುಬೀರಿತನದ ಪ್ರವೃತ್ತಿಯನ್ನು ಕಂಡರೆ ಅವುಗಳನ್ನು ಆದಷ್ಟು ಬೇಗನೆ ತಂದೆ ತಾಯಿ ಹಾಗೂ ಸ್ನೇಹಿತರ ಒತ್ತಾಯ, ಪ್ರಭಾವಗಳಿಂದ ಸರಿದಾರಿಗೆ ತರಲಾಗುತ್ತದೆ. ಇದರಿಂದ ಇಂತಹ ಕ್ರಾಂತಿಕಾರಿ ಹುಡುಗಿಯರು ಎಲ್ಲರೂ ಒಪ್ಪುವಂತಹ ಸ್ಥಿರ ಮಾದರಿಯಾಗಿ ರೂಪುಗೊಳ್ಳುವುದು ಕಂಡು ಬರುತ್ತದೆ. ಇಂತಹ ಎಲ್ಲ ಬೆಳವಣಿಗೆಯನ್ನು ಗುರುತಿಸಿ, ಚರ್ಚಿಸಿದ್ದು ಸ್ತ್ರೀವಾದವಾಗಿದೆ.

೨೦ನೇ ಶತಮಾನದ ಅನೇಕ ಮಹತ್ವದ ಚಳುವಳಿಗಳಲ್ಲಿ ಸ್ತ್ರೀವಾದವು ಸಹ ಒಂದು. ಇದರ ಪ್ರಭಾವ ಮಾನವನ ಎಲ್ಲ ಚಟುವಟಿಕೆಗಳ ಮೇಲೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ಆಗಿದೆ. ಇಂತಹ ಸ್ತ್ರೀವಾದದ ಸೈದ್ಧಾಂತಿಕ ಚೌಕಟ್ಟನ್ನು ನಾಲ್ಕು ಎಳೆಗಳನ್ನಾಗಿ ವರ್ಗೀಕರಿಸಬಹುದು. ಅವುಗಳೆಂದರೆ ಉದಾರ, ತೀವ್ರಗಾಮಿ, ಮಾರ್ಕ್ಸ್‌ವಾದಿ ಮತ್ತು ಸಮಾಜವಾದಿ ಸ್ತ್ರೀವಾದ ಎಂದು. ಹಾಗೆಯೇ ಸ್ತ್ರೀವಾದಿ ವ್ಯಾಖ್ಯೆಯನ್ನು ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಜನಾಂಗೀಯ ಆಯಾಮಗಳನ್ನು ಒಳಗೊಳ್ಳಲು ವಿಸ್ತೃತಗೊಳಿಸಲಾಗಿದೆ. ಅಸಮಾನತೆಯ ಮೂಲಗಳ ಕುರಿತು ಸ್ತ್ರೀವಾದಿ ದೃಷ್ಟಿಕೋನಗಳಲ್ಲಿ ಭಿನ್ನತೆಗಳು ಇವೆ. ಹಾಗೆಯೇ ಹೇಗೆ ಸಮಾನತೆ ಹೊಂದಬೇಕು ಮತ್ತು ಯಾವ ಮಟ್ಟದಲ್ಲಿ ಜಂಡರ್ ಆಧಾರಿತ ಗುರುತಿಸುವಿಕೆಯನ್ನು ಪ್ರಶ್ನಿಸಬೇಕು ಹಾಗೂ ವಿಮರ್ಶಿಸಬೇಕು ಎನ್ನುವುದರ ಕುರಿತು ಸಹ ಅನೇಕ ನಿಲುವುಗಳಿವೆ. ಈ ವ್ಯಾಖ್ಯೆಗಳಲ್ಲಿ ಹಾಗೂ ದೃಷ್ಟಿಕೋನಗಳಲ್ಲಿ ವ್ಯತ್ಯಾಸಗಳಿದ್ದರೂ, ಸ್ತ್ರೀವಾದಿ ಸಿದ್ಧಾಂತಗಳು ನಾಲ್ಕು ಪ್ರಮುಖ ವಿಚಾರಗಳ ಕುರಿತು ತಮ್ಮ ವಾದವನ್ನು ಮಂಡಿಸುತ್ತವೆ. ಅದರಲ್ಲಿ ಒಂದು, ಸಿದ್ಧಾಂತಗಳು ಪುರುಷ ಹಾಗೂ ಮಹಿಳೆಯರ ಜಂಡರ್ ಸ್ವರೂಪವನ್ನು ಅರಿತುಕೊಳ್ಳುವುದು. ಎರಡು, ಎಲ್ಲ ವಿಧದ ಅಸಮಾನತೆಗೂ ಜಂಡರ್ ಸಂಬಂಧಿ ಸಮಸ್ಯೆಗಳಿಗೂ ಇರುವ ಸಂಬಂಧವನ್ನು ಗುರುತಿಸುವುದು; ಮೂರು, ಜಂಡರ್ ಸಂಬಂಧಗಳನ್ನು ಐತಿಹಾಸಿಕ, ಸಾಮಾಜಿಕ-ಸಾಂಸ್ಕೃತಿಕ ಆಯಾಮಗಳ ಹಿನ್ನೆಲೆಯಲ್ಲಿ ಗ್ರಹಿಸುವುದು. ನಾಲ್ಕು, ಎಲ್ಲ ಸ್ತ್ರೀವಾದಿ ವಿಧಾನಗಳು ಸಹ ಸಾಮಾಜಿಕ ಬದಲಾವಣೆಯನ್ನು ಪ್ರತಿಪಾದಿಸುತ್ತವೆ. ಈ ರೀತಿಯಾಗಿ ವಿಸ್ತೃತ ವ್ಯಾಖ್ಯಾನಗಳಿಂದ ಕಪ್ಪು ಸ್ತ್ರೀವಾದ, ಆಫ್ರಿಕನ್ ಸ್ತ್ರೀವಾದ ಹಾಗೂ ಭಾರತದ ಸ್ತ್ರೀವಾದಗಳು ಹುಟ್ಟಿಕೊಂಡವು. ಈ ಲೇಖನವು ಉದಾರವಾದಿ ಸ್ತ್ರೀವಾದ, ತೀವ್ರವಾದಿ ಸ್ತ್ರೀವಾದ, ಮಾರ್ಕ್ಸ್‌ವಾದಿ ಸ್ತ್ರೀವಾದ ಮತ್ತು ಸಮಾಜವಾದಿ ಸ್ತ್ರೀವಾದದ ಕುರಿತು ಸಂಕ್ಷಿಪ್ತ ನೋಟವನ್ನು ನೀಡಲು ಪ್ರಯತ್ನಿಸುತ್ತದೆ.

## ಉದಾರವಾದಿ ಸ್ತ್ರೀವಾದ

ಉದಾರವಾದಿ ಸ್ತ್ರೀವಾದವು ೫೦ರ ದಶಕದ ಮಹಿಳೆಯರ ಸಮಸ್ಯೆಯನ್ನು ವಿವರಿಸುವ ದೃಷ್ಟಿಕೋನವಾಗಿದೆ. ಅಂದರೆ ೧೯೫೦ ಮತ್ತು ೧೯೬೦ರ ಮೊದಲನೆಯ ಸ್ತ್ರೀವಾದದ ಅಲೆಯ ಸಂದರ್ಭದಲ್ಲಿ ನಡೆದ ಹಲವು ನಾಗರಿಕ ಹಕ್ಕುಗಳಿಗಾಗಿ ನಡೆದ ಚಳುವಳಿಗಳ ಸಂದರ್ಭಗಳಲ್ಲಿ ಉದಾರವಾದಿ ಸ್ತ್ರೀವಾದವು ಅತ್ಯಂತ ಜನಪ್ರಿಯವಾಯಿತು. ಉದಾರವಾದದೊಂದಿಗೆ ಉದಾರವಾದಿ ಸ್ತ್ರೀವಾದದ ಉಗಮವಾಯಿತು. ಉದಾರವಾದವು ಪ್ರತಿಯೊಬ್ಬ ವ್ಯಕ್ತಿಗೂ ಸ್ವ-ಹಿತಾಸಕ್ತಿಯನ್ನು ಕಾಯ್ದುಕೊಳ್ಳುವ ಹಕ್ಕುಂಟು. ಅದಕ್ಕಾಗಿ ಸರ್ಕಾರ ಅವರನ್ನು ಬಲಪಡಿಸಬೇಕು ಎಂದು ಹೇಳುತ್ತದೆ, ಇದೇ ಅಂಶವನ್ನು ಮಹಿಳೆಯರಿಗೆ ಅನ್ವಯಿಸಿಕೊಂಡು ಉದಾರವಾದಿ ಸ್ತ್ರೀವಾದ ಬೆಳೆಯಿತು. ಇದು ೨೦ನೆಯ ಶತಮಾನದ ಪ್ರಾರಂಭದಲ್ಲಿ ತನ್ನ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ೧೯೬೦ರ ದಶಕದಲ್ಲಿ ಪಶ್ಚಿಮದ ಮಹಿಳಾ ಚಳುವಳಿಯು ಇದರ ಮುಂದಾಳತ್ವವನ್ನು ವಹಿಸಿಕೊಂಡಿತು. ಸ್ವಾತಂತ್ರ್ಯ, ಸಮಾನತೆಯ ಆದರ್ಶಗಳನ್ನು ಆಧಾರವಾಗಿಟ್ಟುಕೊಂಡು ಸರ್ಕಾರಿ ಹಾಗೂ ಖಾಸಗಿ ಜೀವನದ ನಡುವಿನ ವ್ಯತ್ಯಾಸಕ್ಕೆ ಹೆಚ್ಚಿನ ಒತ್ತು ನೀಡಿತು.

ಉದಾರವಾದಿ ಸ್ತ್ರೀವಾದವು ಮಹಿಳೆಯರು ತಮ್ಮ ಜೀವನದ ಪಥವನ್ನು ಆಯ್ದುಕೊಳ್ಳಲು ಸ್ವತಂತ್ರರು ಎನ್ನುವ ನಂಬಿಕೆಯನ್ನು ಹುಟ್ಟುಹಾಕುತ್ತದೆ. ಇದು ಮಹಿಳೆಯರಿಗೆ ಸಮಾನ ಅವಕಾಶ ಮತ್ತು ಸಮಾನ ಹಕ್ಕುಗಳನ್ನು ಪ್ರತಿಪಾದಿಸುತ್ತದೆ ಏಕೆಂದರೆ ಪ್ರತಿಯೊಬ್ಬ ಮಹಿಳೆಯೂ ಅಭಿವೃದ್ಧಿಯ ಲಾಭಕ್ಕೆ ಅರ್ಹಳು ಎನ್ನುವ ಹಿನ್ನೆಲೆಯಲ್ಲಿ ಮಹಿಳೆ ಮತ್ತು ಪುರುಷರ ನಡುವೆ ಸಮಾನ ಅವಕಾಶಕ್ಕೆ ಒತ್ತು ನೀಡುತ್ತದೆ. ಮಹಿಳೆಯರ ಸಮಾನ ಹಕ್ಕುಗಳಿಗಾಗಿ ಹೋರಾಟ ಮಾಡುತ್ತದೆ. ಪುರುಷರಂತೆ ಮಹಿಳೆಯರು ಹೊರಗಿನ ದುಡಿಮೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ಪುರುಷರು ಮನೆಕೆಲಸದಲ್ಲಿ ಸಮಾನ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು ಹಾಗೂ ಕುಟುಂಬದ ಜವಾಬ್ದಾರಿಗಳು ವೇತನ ನೀಡುವ ವೃತ್ತಿಗಳಾಗಬೇಕೆಂದು ಹೇಳುತ್ತದೆ. ಮಹಿಳೆಯರು ತಮ್ಮ ಸ್ಥಿತಿಯನ್ನು ತಾವೇ ಉತ್ತಮಪಡಿಸಿಕೊಳ್ಳಬೇಕು. ಮಹಿಳೆಯರು ಪುರುಷರ ವೃತ್ತಿಗಳನ್ನು ಉದಾಹರಣೆಗೆ ಕಾನೂನು, ಬ್ಯಾಂಕ್ ವ್ಯವಹಾರ, ಆರಕ್ಷಕ, ಸೈನ್ಯ, ತಾಂತ್ರಿಕ ಕ್ಷೇತ್ರಗಳನ್ನು ಪ್ರವೇಶಿಸಲು ಮತ್ತು ನಿರ್ಧಾರ ಕೈಗೊಳ್ಳುವ ಸ್ಥಾನಗಳನ್ನು ಪಡೆಯಲು ಪ್ರೋತ್ಸಾಹ ನೀಡುತ್ತದೆ. ವಿವಾಹದಷ್ಟೇ ವೃತ್ತಿಯು ಮುಖ್ಯವೆಂದು ಭಾವಿಸಿ, ಅದನ್ನು ಪಡೆಯಲು ಮಹಿಳೆಯರನ್ನು ಪ್ರೇರೇಪಿಸುತ್ತದೆ, ಸಮಾಜದ ಸ್ಥಾಪಿತ ಬದಲಾವಣೆ ಸುಧಾರಣಾವಾದಿ ಧೋರಣೆಗಳಿಂದ ಸಾಧ್ಯವೇ ಹೊರತು ಕ್ರಾಂತಿಕಾರಿ ಧೋರಣೆಗಳಿಂದ ಅಲ್ಲವೆನ್ನುತ್ತದೆ. ಈ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿದ್ದುಕೊಂಡೇ ಕುಟುಂಬ ಹಾಗೂ ವೃತ್ತಿಗಳೆರಡನ್ನೂ ಹೊಂದಿಸಿಕೊಂಡು ಲಿಂಗ ಸಮಾನತೆಯನ್ನು ಪಡೆಯಲು ಪ್ರಯತ್ನಿಸಬೇಕು ಎಂದು ಭಾವಿಸುತ್ತದೆ. ಮಹಿಳೆಯ ಸಹಜ

ಪ್ರತಿಭೆ ಮತ್ತು ಸಾಮರ್ಥ್ಯ ಪುರುಷನಿಗೆ ಸರಿ-ಸಮನಾಗಿ ಬೆಳೆದಿಲ್ಲ. ಎಂದರೆ ಅದಕ್ಕೆ ಕಾರಣ ಅವರ ಮೇಲೆ ಬಲವಂತವಾಗಿ ಹೇರಿರುವ ಕೌಟುಂಬಿಕ ಜವಾಬ್ದಾರಿ ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಅವಳ ಭಾಗವಹಿಸುವಿಕೆಯನ್ನು ನಿರಾಕರಿಸಿರುವುದೇ ಕಾರಣ ವಿನಾ ಅವಳ ಪ್ರತಿಭೆ ಮತ್ತು ಸಾಮರ್ಥ್ಯಗಳ ಕೊರತೆಯಿಂದಲ್ಲ ಎನ್ನುತ್ತದೆ. ಈ ದೃಷ್ಟಿಕೋನವು ಲಿಂಗಸಮಾನತೆಗೆ ಅಡ್ಡಿ ಬರುವ ಕಾಯಿದೆ ಕಾನೂನು, ಸಂಪ್ರದಾಯದ ಕಟ್ಟುಪಾಡುಗಳನ್ನು ತೊಡೆದು ಹಾಕಿ, ಆ ಮೂಲಕ ಕಾನೂನು, ರಾಜಕೀಯ ಭಾಗವಹಿಸುವಿಕೆ, ಶಿಕ್ಷಣದಲ್ಲಿ ಹೆಣ್ಣುಮಕ್ಕಳ ದಾಖಲಾತಿಯನ್ನು ಹೆಚ್ಚಿಸಿತು.

ಇದು ನಮ್ಮ ಸಮಾಜದಲ್ಲಿ ಸ್ತ್ರೀ-ಪುರುಷರ ನಡುವೆ ಅಸಮಾನತೆಯಿದೆ ಎಂದು ನಂಬಿದರೂ ಅದನ್ನು ಪ್ರಶ್ನಿಸುವುದಿಲ್ಲ. ಪುರುಷಪ್ರಧಾನತೆ ಕುರಿತು ಚರ್ಚಿಸುವುದಿಲ್ಲ. ಸಾಮಾಜಿಕ ರಚನೆಗಳನ್ನು ಆಕ್ಷೇಪಿಸುವುದಿಲ್ಲ. ಮಹಿಳೆಯರಲ್ಲಿ ತಾರತಮ್ಯ ತೋರುವಂತಹ ಸಂದರ್ಭದಲ್ಲಿ ಕೂಡ ಇದು ಏನನ್ನೂ ಹೇಳುವುದಿಲ್ಲ. ಉದಾಹರಣೆಗೆ ಮಹಿಳೆಯರಿಗೆ ಕಡಿಮೆ ಕೂಲಿ ಕೊಡುವ ಬಗ್ಗೆ ಅಥವಾ ವೇತನವಿಲ್ಲದೆ ಮನೆ ಒಡತಿಯರನ್ನಾಗಿಸುವ ಸಾಮಾಜಿಕ ರಚನೆ ಮತ್ತು ವ್ಯವಸ್ಥೆಯನ್ನು ಪ್ರಶ್ನಿಸುವುದಿಲ್ಲ. ಲಿಂಗ ಅಸಮಾನತೆ ತೋರುವ ಸಾಮಾಜಿಕ ಪರಂಪರೆ, ಸಂಪತ್ತು ಮತ್ತು ಅಧಿಕಾರ ಹಂಚಿಕೆ, ಕಾನೂನು ಪದ್ಧತಿ ಹಾಗೂ ಲೈಂಗಿಕತೆಗೆ ಸಂಬಂಧಿಸಿದ ನೀತಿನಿಯಮಗಳನ್ನು ವಿರೋಧಿಸುವುದಿಲ್ಲ. ಲಿಂಗ ಅಸಮಾನತೆಯನ್ನು ಹೋಗಲಾಡಿಸಬೇಕೆಂದು ಹೇಳಿದರೂ ಸ್ತ್ರೀ ಪುರುಷರ ನಡುವಿನ ವ್ಯತ್ಯಾಸವನ್ನು ಒಪ್ಪಿಕೊಳ್ಳುತ್ತದೆ. ಮಹಿಳೆಯರಲ್ಲಿನ ಸಾಮಾಜಿಕ ಭಿನ್ನತೆಗಳನ್ನು ಪರಿಗಣಿಸುವುದಿಲ್ಲ. ಒಂದು ಗುಂಪಿಗೆ ಪರಿಹಾರ ಕಂಡುಹಿಡಿದರೆ ಅದು ಬೇರೆ ಗುಂಪಿಗೂ ಉಪಯೋಗವಾಗುತ್ತದೆ ಎಂದು ಭಾವಿಸುತ್ತದೆ. ಅಸಮಾನತೆಯಿಂದ ಕೂಡಿದ ಲಿಂಗಾಧಾರಿತ ಸಂಬಂಧಗಳಿಗೆ ಕಾರಣಗಳನ್ನು ಹುಡುಕುವುದಿಲ್ಲ. ಕೇವಲ ಮುಂಜಾಗ್ರತಾ ಸುಧಾರಣೆಗಳನ್ನು ಅಳವಡಿಸಿಕೊಳ್ಳಲು ಹೇಳುತ್ತದೆ.

ಇದು ಪಿತೃಪ್ರಧಾನತೆ, ಅಧಿಕಾರ ಮತ್ತು ಮಹಿಳೆಯ ವ್ಯವಸ್ಥಿತ ಅಧೀನತೆಯನ್ನು ನಿರ್ಲಕ್ಷಿಸುತ್ತದೆ. ವರ್ಗ ಮತ್ತು ವರ್ಣದ ಪ್ರಭಾವವನ್ನು ಪರಿಗಣಿಸಿಲ್ಲ. ಉದಾರವಾದಿ ಸ್ತ್ರೀವಾದದ ಈ ನ್ಯೂನತೆಗಳನ್ನು ಗಮನಿಸಿದರೆ ಈ ವಿಧಾನವು ಲಿಂಗಸಂಬಂಧಗಳ ರಚನಾತ್ಮಕ ಕಾರಣಗಳ ಬಗೆಗೆ ಆಧಾರವಾಗಿರುವ ಊಹಾಪೋಹಗಳು ಅನೇಕ ಅಭಿವೃದ್ಧಿಶೀಲ ದೇಶಗಳ ಸುಧಾರಣೆಗೆ ಸ್ವೀಕಾರಾರ್ಹವಲ್ಲ ಎಂದು ತೋರುತ್ತದೆ. ಉದಾರವಾದಿ ಸ್ತ್ರೀವಾದ ಇಂತಹ ಹಲವಾರು ನ್ಯೂನತೆಗಳ ಮಧ್ಯೆಯೂ ಮಹಿಳೆಯರನ್ನು ಪರಿಗಣನೆಗೆ ತೆಗೆದುಕೊಂಡು ಅಭಿವೃದ್ಧಿಯನ್ನು ವಿಭಿನ್ನ ರೀತಿಯಲ್ಲಿ ಕಾಣಲು ದಾರಿ ಮಾಡಿಕೊಟ್ಟಿತು ಎನ್ನಬಹುದು.

## ತೀವ್ರವಾದಿ ಸ್ತ್ರೀವಾದ

೧೯೬೦ರ ಅಂತ್ಯ ಹಾಗೂ ೧೯೭೦ರ ಆರಂಭದಲ್ಲಿ ತೀವ್ರವಾದಿ ಸ್ತ್ರೀವಾದದ ಬೆಳವಣಿಗೆಯಾಯಿತು. ಉದಾರವಾದಿ ಸ್ತ್ರೀವಾದಿ ಕಾನೂನು, ಮತ ಚಲಾಯಿಸುವಿಕೆ ಮತ್ತು ಉದ್ಯೋಗದಲ್ಲಿ ಮಹಿಳೆಯರ ಸಂದರ್ಭದಲ್ಲಿ ಸಣ್ಣ ಬದಲಾವಣೆಯನ್ನು ಉಂಟುಮಾಡಿದರ ಪರಿಣಾಮ ತೀವ್ರವಾದಿ ಸ್ತ್ರೀವಾದವು ಬೆಳವಣಿಗೆ ಹೊಂದಿತು. ಅರವತ್ತರ ದಶಕದ ಕೊನೆಯಲ್ಲಿ ಬಂದ ಸ್ತ್ರೀವಾದದ ಎರಡನೆಯ ಅಲೆಯ ಜೊತೆ, ಪಶ್ಚಿಮದಲ್ಲಿ ಹುಟ್ಟಿಕೊಂಡ ಹೊಸ ಮಹಿಳಾ ವಿಮೋಚನಾ ಚಳುವಳಿಯೊಂದಿಗೆ ಈ ಸ್ತ್ರೀವಾದ ಉಗಮವಾಯಿತು.

ಜೈವಿಕ ಭಿನ್ನತೆಯೇ ಲಿಂಗ ಅಸಮಾನತೆಗೆ ಕಾರಣ ಎಂಬ ವಾದವನ್ನು ಈ ಸ್ತ್ರೀವಾದ ಖಂಡಿಸುತ್ತದೆ. ಜೈವಿಕ ಮತ್ತು ಮನೋವೈಜ್ಞಾನಿಕ ಲಕ್ಷಣಗಳಲ್ಲಿ ಕಂಡುಬರುವ ವ್ಯತ್ಯಾಸವೇ ಸ್ತ್ರೀ ಪುರುಷರ ನಡುವಿನ ಭಿನ್ನತೆಗೆ ಕಾರಣ ಎಂಬುದು ಒಂದು ಮಿಥ್ಯೆ ಎಂದು ಹೇಳುತ್ತದೆ. ಸ್ತ್ರೀ ಪುರುಷರ ನಡುವಿನ ಘರ್ಷಣೆ ಸಮಾಜದ ಒಂದು ವಿಪರ್ಯಾಸ. ಇದಕ್ಕೆ ಪುರುಷ ಶಕ್ತಿಯೇ ಮೂಲಾಧಾರ. ಇಂತಹ ಮಹಿಳೆಯ ತುಳಿತಕ್ಕೆ ಕಾರಣವಾಗುವ ಪುರುಷರನ್ನು ವೈರಿಗಳೆಂದು ಭಾವಿಸುತ್ತದೆ. 'ತಾಯ್ತನವೇ ಮಹಿಳೆಯ ಶೋಷಣೆಯ ಮೂಲ'. ಅವಳ ಜೈವಿಕ ಕ್ರಿಯೆಗಳ ಮೇಲೆ ನಿಯಂತ್ರಣ ಹೇರುವುದರ ಮೂಲಕ ಅವಳ ಸ್ವಾತಂತ್ರ್ಯ ಮತ್ತು ವ್ಯಕ್ತಿತ್ವದಂತಹ ಬೆಳವಣಿಗೆಯನ್ನು ಕುಂಠಿತಗೊಳಿಸಲಾಗುತ್ತದೆ. ಲಿಂಗ ತಾರತಮ್ಯವನ್ನು ವಿವಾಹ, ಕುಟುಂಬ, ಲಿಂಗಾಧಾರಿತ ಶ್ರಮವಿಭಜನೆ ಮತ್ತು ಸಾಮಾಜಿಕ ಕಟ್ಟುಪಾಡುಗಳ ಮೂಲಕ ನಡೆಸಿಕೊಂಡು ಹೋಗಲಾಗುತ್ತದೆ. ಪುರುಷಪ್ರಧಾನತೆಯ ಮೂಲ ಸ್ತ್ರೀ–ಪುರುಷರ ನಡುವಿನ ಜೈವಿಕ ಭಿನ್ನತೆಯಲ್ಲಿದೆ ಎಂದು ಹೇಳುವುದರ ಮೂಲಕ ಸಮಾಜದ ಎಲ್ಲ ಸ್ತರಗಳಲ್ಲೂ ಪುರುಷರು ಮಹಿಳೆಯರನ್ನು ಆಳುತ್ತಾ ಬಂದಿದ್ದಾರೆ ಎಂದು ಹೇಳುತ್ತದೆ. ಲಿಂಗ ಅಸಮಾನತೆ ಮತ್ತು ಸ್ತ್ರೀ ಶೋಷಣೆಯ ಮೂಲ ಪುರುಷಪ್ರಧಾನ ವ್ಯವಸ್ಥೆಯ ಮೌಲ್ಯಗಳಾಗಿವೆ. ಈ ಮೌಲ್ಯಗಳು ಯಾವಾಗಲೂ ಪುರುಷರ ಪರವಾಗಿರುತ್ತವೆ. ಕುಟುಂಬವು ಪುರುಷಪ್ರಧಾನ ವ್ಯವಸ್ಥೆಯ ಒಂದು ಅಂಗವಾಗಿ ಮಹಿಳೆಯರನ್ನು ಲೈಂಗಿಕವಾಗಿ, ಆರ್ಥಿಕವಾಗಿ ಹಾಗೂ ಮಾನಸಿಕವಾಗಿ ತುಳಿಯುತ್ತದೆ. ಮಾನವ ಸಮಾಜದಲ್ಲಿ ಕಂಡುಬರುವ ಬೇರೆಲ್ಲ ತುಳಿತ ಮತ್ತು ಶೋಷಣೆಗಳಿಗಿಂತ ಮುಂಚೆ ಅಸ್ತಿತ್ವಕ್ಕೆ ಬಂದಿದ್ದು ಪುರುಷಪ್ರಧಾನತೆ; ಇದು ಪುರುಷರ ದೌರ್ಜನ್ಯ ಮತ್ತು ನಿಯಂತ್ರಣಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ ಎಂದು ಹೇಳುತ್ತದೆ.

ಪುರುಷಪ್ರಧಾನತೆಯು ಸಾರ್ವತ್ರಿಕವಾದುದು ಎಂದು ಪರಿಗಣಿಸಿ, ಮಾನವ ಸಂಬಂಧಗಳಲ್ಲಿರುವ ಸಾಂಸ್ಕೃತಿಕ ಭಿನ್ನತೆ ಮತ್ತು ಐತಿಹಾಸಿಕ ವಿಶ್ಲೇಷಣೆಯನ್ನು ಕಡೆಗಣಿಸುತ್ತದೆ. ಪುರುಷರ ಜೈವಿಕತೆ ಹಾಗೂ ಪುರುಷಪ್ರಧಾನತೆಗೂ ಸಂಬಂಧವನ್ನು

ವಿಶ್ಲೇಷಿಸುತ್ತದೆ. ಮಹಿಳೆಯರ ಮೇಲೆ ಅತ್ಯಾಚಾರ ಮಾಡುವ ಪುರುಷರ ಸಮರ್ಥನೆಯನ್ನು ಖಂಡಿಸುತ್ತದೆ. ಜೈವಿಕ ಸಂತಾನೋತ್ಪತ್ತಿಗೆ ಬದಲು ತಾಂತ್ರಿಕ ಸಂತಾನೋತ್ಪತ್ತಿ ವಿಧಾನವನ್ನು ಅಳವಡಿಸಿಕೊಂಡು ಮಕ್ಕಳನ್ನು ಪಡೆಯುವ ಹಕ್ಕು ಸಂಪೂರ್ಣವಾಗಿ ಸ್ತ್ರೀಗೆ ಸಿಕ್ಕರೆ ಅವಳ ಶೋಷಣೆ ಕೊನೆಗೊಳ್ಳುತ್ತದೆ ಎಂದು ಹೇಳುತ್ತದೆ. ಪುರುಷಪ್ರಧಾನತೆಯನ್ನು ಪುರುಷರಿಗೆ ಉನ್ನತ ಅಧಿಕಾರ ಮತ್ತು ಅಧಿಕಾರದ ಸವಲತ್ತುಗಳನ್ನು ನೀಡುವ ವ್ಯವಸ್ಥೆಯೆಂದು ವ್ಯಾಖ್ಯಾನಿಸುತ್ತದೆ.

ಪ್ರಸ್ತುತ ಪದ್ಧತಿಯೊಳಗಿನ ರಾಜಕೀಯ ಕ್ರಮದ ಕುರಿತು ಸಂಶಯವನ್ನು ಈ ವಿಧಾನ ವ್ಯಕ್ತಪಡಿಸುತ್ತದೆ. ಆದರೆ ಪಿತೃಪ್ರಧಾನತೆ ಮತ್ತು ಶ್ರೇಣಿ ರಚನೆಗೆ ಸಂಬಂಧಿಸಿದಂತೆ ವಿಷಯಗಳನ್ನು ಕಡೆಗಣಿಸುವ ಸಾಂಸ್ಕೃತಿಕ ಬದಲಾವಣೆಯನ್ನು ಬೆಂಬಲಿಸುತ್ತದೆ. ಆದ್ದರಿಂದ ಈ ಸ್ತ್ರೀವಾದವು ಪುರುಷ ಹಾಗೂ ಮಹಿಳೆಯ ನಡುವಿನ ಅಸಮಾನತೆಯು ಪಿತೃಪ್ರಧಾನ ಬೇರುಗಳ ಕುರಿತು ಅಥವಾ ಇನ್ನೂ ನಿಖರವಾಗಿ ಹೇಳಬೇಕೆಂದರೆ ಪುರುಷರಿಂದ ಸ್ತ್ರೀಯರ ಮೇಲೆ ಆಗಿರುವ ಸಾಮಾಜಿಕ ಶೋಷಣೆಯ ಕುರಿತು ವಿಶೇಷ ಒತ್ತನ್ನು ನೀಡುತ್ತದೆ. ಆದರೂ ಈ ದೃಷ್ಟಿಕೋನವು ಹಲವು ನ್ಯೂನತೆಗಳಿಂದ ಕೂಡಿದೆ. ಅಂದರೆ ಇದು ವರ್ಗ, ಜಾತಿ ಭೇದಗಳ ಕುರಿತು ಚರ್ಚಿಸುವುದಿಲ್ಲ. ಮಹಿಳೆಯರಲ್ಲಿರುವ ಭಿನ್ನಾಭಿಪ್ರಾಯಗಳಿಗೆ ಸ್ಪಂದಿಸುವುದಿಲ್ಲ. ಲಿಂಗಾಧಾರಿತ ಶ್ರಮವಿಭಜನೆ ಮತ್ತು ಆರ್ಥಿಕ ಶ್ರಮವಿಭಜನೆಗಿರುವ ಸಂಬಂಧದ ಕುರಿತು ಚರ್ಚಿಸುವುದಿಲ್ಲ. ಲಿಂಗವ್ಯವಸ್ಥೆಯ ಸಮಂಜಸತೆಯನ್ನು ಒಪ್ಪಿಕೊಳ್ಳುವುದಿಲ್ಲ, ಆದರೆ ಲಿಂಗ ವರ್ಗೀಕರಣವನ್ನು ಬಳಸುತ್ತದೆ. ಮಹಿಳೆಯರಲ್ಲಿ ಏನಾದರೂ ನಕಾರಾತ್ಮಕ ಮನೋಭಾವನೆಗಳು, ನಡವಳಿಕೆಗಳು ಅಥವಾ ಮಾನಸಿಕ ದ್ವಂದಗಳು ಇವೆಯೇ ಎಂದು ಪ್ರಶ್ನಿಸುವುದಿಲ್ಲ. ಕುಟುಂಬವೇ ಮಹಿಳೆಯರ ತುಳಿತದ ಕೇಂದ್ರಬಿಂದು ಆಗಿರುವುದರಿಂದ ಕುಟುಂಬವ್ಯವಸ್ಥೆಯನ್ನು ನಿರ್ಮೂಲನ ಮಾಡಬೇಕೆಂದು ಹೇಳುತ್ತದೆ. ಆದರೆ ಇದು ವಾಸ್ತವಕ್ಕೆ ದೂರವಾದುದು. ವೇತನವು ಸೇರಿದಂತೆ ಇತರ ಆರ್ಥಿಕ ವಿಷಯಕ್ಕೆ ಸಂಬಂಧಪಟ್ಟ ಹೋರಾಟಗಳು ಕೇವಲ ಜನಸಂಘಟನೆಗಳಾಗಿರುತ್ತವೆ. ಅವು ಸಂಪೂರ್ಣವಾಗಿ ಪುರುಷರ ಅಧೀನದಲ್ಲಿರುವುದರಿಂದ ವಾಸ್ತವವಾಗಿ ಸ್ತ್ರೀಪರವಾಗಿರುವುದಿಲ್ಲ ಎಂದು ಅಭಿಪ್ರಾಯಪಡುತ್ತದೆ. ಸ್ತ್ರೀವಾದಿ ಅರಿವನ್ನು ಮೂಡಿಸುವ ಚರ್ಚೆಗಳಲ್ಲಿ ಲೈಂಗಿಕತೆ ಹಾಗೂ ದೌರ್ಜನ್ಯಕ್ಕೆ ಹೆಚ್ಚು ಒತ್ತು ನೀಡುತ್ತದೆ. ಸ್ಟಾಂಪ್(೧೯೮೯)ರ ಪ್ರತಿಪಾದನೆಯಂತೆ ಈ ದೃಷ್ಟಿಕೋನವು ಭಾರತಕ್ಕೆ ಸಂಬಂಧಿಸಿದಂತೆ ಸೂಕ್ತವಲ್ಲದಿದ್ದರೂ ಮಹಿಳೆಯರ ಶೋಷಣೆಯನ್ನು ಉತ್ತಮವಾಗಿ ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿದೆ ಎನ್ನಬಹುದು.

## ಮಾರ್ಕ್ಸ್‌ವಾದಿ ಸ್ತ್ರೀವಾದ

ಉದಾರವಾದಿಗಳು ಹೇಳುವ ವ್ಯಕ್ತಿಯಲ್ಲಿ ವಿವೇಚನಾಶೀಲತೆಯೇ ಮುಖ್ಯ ಎಂಬ ಸಮರ್ಥನೆಯನ್ನು ಮಾರ್ಕ್ಸ್‌ವಾದಿಗಳು ನಿರಾಕರಿಸಿದರು. ಅವರು, ನಾವು ಪ್ರಾಣಿಗಳ ರಾಜ್ಯಕ್ಕಿಂತ ಭಿನ್ನರು. ಕಾರಣವೆಂದರೆ ನಾವು ನಮ್ಮ ಜೀವನಾಧಾರದ ಸಾಧನಗಳನ್ನು ನಮ್ಮ ಕಾರ್ಯಗಳ ಮುಖಾಂತರ ನಾವೇ ಉತ್ಪಾದಿಸುತ್ತೇವೆ ಎಂದು ವಾದಿಸಿದರು. ನಾವು ಇದನ್ನು ಎರಡು ಬಹುಮುಖ್ಯವಾದ ಒಂದನ್ನೊಂದು ಅಂತರ್ಗತವಾದ ಪ್ರಕ್ರಿಯೆಗಳ ಮೂಲಕ ಮಾಡುತ್ತೇವೆ. ಅಂದರೆ ಉತ್ಪಾದನೆ ಹಾಗೂ ಸಂತಾನೋತ್ಪತ್ತಿ, ಆಹಾರ, ಬಟ್ಟೆ ಹಾಗೂ ವಸತಿಯಂತಹ ಮೂಲಭೂತ ಅವಶ್ಯಕತೆಗಳನ್ನು ಪಡೆಯುವುದಕ್ಕಾಗಿ ಒಂದು ಸಮುದಾಯದ ಸದಸ್ಯರು ಮಾಡುವಂತಹ ಕೆಲಸಗಳು ಉತ್ಪಾದನೆಯಡಿಯಲ್ಲಿ ಬರುತ್ತವೆ. ಸಂತಾನೋತ್ಪತ್ತಿಯಲ್ಲಿ ಮಕ್ಕಳನ್ನು ಹೇರುವುದು ಅವರನ್ನು ಸಮಾಜವು ಒಪ್ಪುವಂತೆ ಬೆಳೆಸುವುದು ಉತ್ಪಾದನೆಯ ಪ್ರಕ್ರಿಯೆಯಲ್ಲಿ ಪೂರಕ ಪಾತ್ರಗಳನ್ನು ವಹಿಸುವುದು. ಈ ಪ್ರಕ್ರಿಯೆಗಳು ಸಂತಾನೋತ್ಪತ್ತಿ ವೃತ್ತಿಯಲ್ಲಿ ತನ್ನ ಸಹವರ್ತಿ ಮೌಲ್ಯಗಳಾದ ಆಸರೆ, ಸಹಬಾಳ್ವೆ ಮತ್ತು ಪ್ರೀತಿಗಳ ಮುಖಾಂತರ ವ್ಯಕ್ತಿಯನ್ನು ಕಾಪಾಡುತ್ತದೆ.

ಮಾರ್ಕ್ಸ್‌ವಾದದ ಪ್ರಕಾರ ಪ್ರತಿಯೊಂದು ಸಮಾಜದಲ್ಲಿ ಉತ್ಪಾದನೆಗೆ ನಿರ್ದಿಷ್ಟ ಮಾರ್ಗಗಳಿವೆ. ಅವು ವಿವಿಧ ವರ್ಗಗಳನ್ನು ಉಂಟು ಮಾಡಿವೆ. ಅದರಲ್ಲಿ ಕಾರ್ಮಿಕ ವರ್ಗವು ಮಿಗುತಾಯ ಮೌಲ್ಯಗಳಿಂದ ಶೋಷಣೆಗೆ ಒಳಗಾಗಿದೆ. ಇಂತಹ ಕಾರ್ಮಿಕ ವರ್ಗವು ಒಂದು ಪ್ರತ್ಯಕ್ಷ ಕ್ರಾಂತಿಯ ಮುಖಾಂತರ ಉತ್ಪಾದನೆಯ ಕ್ರಮವನ್ನು ಸ್ವಾಧೀನಪಡಿಸಿಕೊಂಡರೆ ಇನ್ನೊಂದು ವರ್ಗದ ಅಧಿಕಾರ ಸಂಬಂಧಗಳು ಸೋಲನ್ನೊಪ್ಪುತ್ತವೆ ಎಂದು ಭಾವಿಸುತ್ತದೆ.

ವರ್ಗ ಹಾಗೂ ಅಧಿಕಾರಸಂಬಂಧಿ ಮಾರ್ಕ್ಸ್‌ವಾದಿ ವಿಶ್ಲೇಷಣೆಯು ಸ್ತ್ರೀವಾದಿಗಳಿಗೆ ಮಹಿಳೆಯರ ದಾಸ್ಯವನ್ನು ಅರಿತುಕೊಳ್ಳುವ ಒಂದು ಕಲ್ಪನಾತ್ಮಕ ಚೌಕಟ್ಟನ್ನು ಕೊಟ್ಟಿತು. ಮಾರ್ಕ್ಸ್‌ವಾದಿ ಸ್ತ್ರೀವಾದವು ಎಲ್ಲ ಮಹಿಳೆಯರನ್ನು ಒಂದು ವರ್ಗದಡಿ ತರಲು ಹಿಂಜರಿಯುತ್ತದೆ. ಮಧ್ಯಮವರ್ಗದ ಕೆಲ ಮಹಿಳೆಯರು ಕೆಳವರ್ಗದವರಿಗಿಂತ ಒಂದಿಷ್ಟು ಉತ್ತಮರೆನಿಸಿದರೂ ಅದೇ ವರ್ಗದ ಸ್ತ್ರೀಯರು ಸಂಬಳವಿಲ್ಲದ ಕುಟುಂಬ ಕಾರ್ಮಿಕರಾಗಿಯೇ ದುಡಿಯುವ ಸಂಗತಿಯಲ್ಲಿ ಯಾವುದೇ ಬದಲಾವಣೆ ಕಂಡುಬರಲಿಲ್ಲ. ಜೈವಿಕ ಕಾರ್ಯಗಳ ಸಾರ್ವತ್ರಿಕತ್ವ ಮತ್ತು ಮಹಿಳೆಯರ ಮೇಲೆ ಹೇರಲಾದ ಕಟ್ಟಳೆಗಳು ಹಾಗೂ ಎಲ್ಲ ಮಹಿಳೆಯರ ಸಾಮಾಜಿಕ ಹಾಗೂ ಆರ್ಥಿಕ ವರ್ಗಗಳ ಅಪಮಾನಕ್ಕೆ ಕಾರಣವಾದ ಈ ಭಿನ್ನತೆಗಳನ್ನು ತಿರಸ್ಕರಿಸಲು ಎಲ್ಲ ಮಹಿಳೆಯರು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಒಂದು ಸಾರ್ವಜನಿಕ ಬ್ಯಾನರಿನಡಿಯಲ್ಲಿ ಒಂದುಗೂಡಿದರು.

ಚಾರಿತ್ರಿಕವಾಗಿ ನೋಡಿದರೆ ಮಹಿಳೆಯರು ಸಂತಾನೋತ್ಪತ್ತಿಯ ಕೆಲಸವನ್ನು, ಕಾರ್ಮಿಕ ವರ್ಗದವರು ಮಾಡುವ ಕೆಲಸವನ್ನು ಮಾಡುತ್ತಾರೆ. ಜೊತೆಗೆ ಅಗತ್ಯ ಸಂದರ್ಭದಲ್ಲಿ ಅವರ ಹೊಲಗಳನ್ನು ಉತ್ತರು. ಅವರ ದನ ಕರುಗಳನ್ನು ಪೋಷಣೆ ಮಾಡಿದರು. ಮಕ್ಕಳನ್ನು ಮಲಗಿಸಿದರು. ಬಟ್ಟೆ ಒಗೆದರು. ಅಡುಗೆ ಮಾಡಿದರು, ವೃದ್ಧರ ಹಾಗೂ ರೋಗಿಗಳ ಸೇವೆ ಮಾಡಿದರು ಹಾಗೂ ಇವತ್ತಿಗೂ ಸ್ತ್ರೀಯರು ಹಲವೆಡೆ ಇದನ್ನೇ ಮಾಡುತ್ತಿದ್ದಾರೆ. ಜರ್ಮನ್ ಗ್ರೀರ್ 'ದ ಹೋಲ್ ವುಮೆನ್' ಕೃತಿಯಲ್ಲಿ ಹೇಳುವಂತೆ ಲೈಂಗಿಕ ಕಾರ್ಯವಿಭಜನೆಯು ಜಗತ್ತಿನ ಅನೇಕ ಭಾಗಗಳಲ್ಲಿ ಲಿಂಗಾಧಾರಿತವಾಗಿರುವುದು. ಇದು ಅನೇಕ ರೀತಿಗಳಲ್ಲಿ ಅಸ್ತಿತ್ವದಲ್ಲಿದ್ದು ಮಹಿಳೆಯರ ಸ್ಥಿತಿ ಏನೂ ಬದಲಾಗಿಲ್ಲ ಎಂಬುದನ್ನು ಎತ್ತಿ ತೋರಿಸುತ್ತಾಳೆ. ಮಹಿಳೆಯರ ಕೆಲಸ, ವಿಶೇಷವಾಗಿ ಕೌಟುಂಬಿಕ ಕೆಲಸವು ಒಂದು ಕೆಲಸವೆಂದೇ ಗುರುತಿಸಲ್ಪಡುವುದಿಲ್ಲ. ಮಗುವನ್ನು ಪೋಷಿಸುವ, ಬಟ್ಟೆ ಒಗೆಯುವ, ನೆಲ ಒರೆಸುವ ಕೆಲಸಗಳು ಸಹಜವೆನಿಸುತ್ತವೆ. ಇತ್ತೀಚಿನವರೆಗೆ ಇವು ಯಾವುದೇ ವೈಜ್ಞಾನಿಕ ದೃಷ್ಟಿಗೆ ಬಿದ್ದಿಲ್ಲ ಹಾಗೂ ಯಾರನ್ನು ಆಕರ್ಷಿಸಿಲ್ಲ. ಮಾರ್ಕ್ಸ್‌ವಾದಿ ಸ್ತ್ರೀವಾದವು ಮನೆಗೆಲಸವು ಸ್ತ್ರೀಯರು ಮಾಡಲೇಬೇಕಾದ ಕೆಲಸ. ಅದು ಪುರುಷರು ಮಾಡುವುದಕ್ಕಿಂತ ಕಡಿಮೆ ದರ್ಜೆಯದಾಗಿದೆ ಎಂದು ಎತ್ತಿ ತೋರಿಸುತ್ತದೆ ಎನ್ನುವರು.

ಈಗಿನ ಆಧುನಿಕ ಕುಟುಂಬವೆಂಬ ಸಂಸ್ಥೆ ಬಂಡವಾಳಶಾಹಿಗೆ ಹೇಗೆ ಸಂಬಂಧಿಸಿದೆ? ಮಹಿಳೆಯರಿಗೆ ಸಾಮಾನ್ಯವಾಗಿ ಬೇಜಾರಾಗುವ ಅಥವಾ ಕಡಿಮೆ ಸಂಬಳದ ಕೆಲಸವನ್ನೇ ಏಕೆ ಕೊಡಲಾಗುತ್ತದೆ? ದೈಹಿಕ ಶ್ರಮದ ಮನೆಗೆಲಸವನ್ನು ಹಂಚಿಕೊಳ್ಳುವುದು ಹೇಗೆ? ಪುರುಷರು ಆಟಗಳಲ್ಲಿ, ರಚನಾತ್ಮಕ ಕೆಲಸಗಳಲ್ಲಿ, ಕಲಾತ್ಮಕ ಅಭಿವ್ಯಕ್ತಿಯಲ್ಲಿ ತೊಡಗಿರುವಾಗ ಮಹಿಳೆಯರು ಕೇವಲ ಮನೆಗೆಲಸಗಳಿಗೆ ಸೀಮಿತಗೊಂಡು ತನ್ನ ರಚನಾತ್ಮಕ ಜೀವನ ಹಾಗೂ ತನ್ನ ಯೌವನದ ದೊಡ್ಡ ಭಾಗವನ್ನು ಕಳೆಯಬೇಕಾಗುತ್ತದೆ ಎಂಬುದನ್ನು ತೋರಿಸುತ್ತದೆ. ವೇತನರಹಿತ ಕೆಲಸಗಳಿಂದ ಹೊರಬರುವ ಒಂದು ಮಾರ್ಗವೆಂದರೆ ಮನೆಗೆಲಸವನ್ನು ತೂಗಿ ನೋಡುವುದು ಮತ್ತು ಕೌಟುಂಬಿಕ ಕೆಲಸವನ್ನು ಸಾಮಾಜೀಕರಿಸುವುದು. ಇದು ಔದ್ಯೋಗಿಕ ಕ್ರಾಂತಿಯಾಗುವುದಕ್ಕೂ ಮೊದಲು ಸಾಧ್ಯವಿತ್ತು. ಆಗ ಮನೆಯೇ ಎಲ್ಲ ಆರ್ಥಿಕ ಚಟುವಟಿಕೆಗಳ ಕೇಂದ್ರವಾಗಿತ್ತು ಮತ್ತು ಮನೆಯ ಎಲ್ಲ ಸದಸ್ಯರೂ ಕೂಡಿಕೊಂಡು ಕೆಲಸ ಮಾಡುತ್ತಿದ್ದರು. ಇದರಿಂದಾಗಿ ಮಹಿಳೆಯರು ಮಾಡುತ್ತಿದ್ದ ಮಗುವನ್ನು ಪೋಷಿಸುವ, ಅಡುಗೆ ಮಾಡುವ, ಉಪ್ಪಿನಕಾಯಿ ಹಾಕುವ, ಬಟ್ಟೆ ಒಗೆಯುವ ಮತ್ತು ಇನ್ನೂ ಹೆಚ್ಚಿನ ಕೆಲಸವನ್ನು ಪುರುಷನು ಮಾಡುವ ಯಾವುದೇ ಕೆಲಸಗಳಿಗೂ ಕಡಿಮೆ ಇರಲಿಲ್ಲ. ಆದರೆ ಔದ್ಯೋಗೀಕರಣವೆಂದರೆ ಉತ್ಪಾದನೆಯ ವರ್ಗ ಖಾಸಗಿ ಕೆಲಸದಿಂದ ಸಾರ್ವಜನಿಕ ಕ್ಷೇತ್ರಕ್ಕೆ ವರ್ಗಾವಣೆ ಹೊಂದಿತು. ಮಹಿಳೆಯರು ಅನುತ್ಪಾದಿತ ಮನೆಗೆಲಸವೆಂಬ ಹಣೆಪಟ್ಟಿಯೊಡನೆ ಹಿಂದೆ ಬಿದ್ದರು. ಪುರುಷರು ಉತ್ಪಾದಕ ಸಂಬಳ

ಗಳಿಸುವವರೆಂದು ಬದಲಾದರು. ಆದರೆ ಮಹಿಳೆಯರು ಕೇವಲ ಗ್ರಾಹಕರಾಗಿ ಉಳಿದರು. ಸಂಬಳ ತೆಗೆದುಕೊಳ್ಳುವ ಪುರುಷರು ಉತ್ಪಾದಕರ ಸ್ಥಾನಕ್ಕೆ ಏರಿದರು. ಹಾಗಾಗಿ ಮಾರ್ಗರೆಟ್ ವೆನ್‌ಸ್ಪನ್ ಮತ್ತು ಜರ್ಮನ್ ಗ್ರೀರ್‌ರಂಥ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು, ಕೌಟುಂಬಿಕ ಕರ್ತವ್ಯಗಳು ಮತ್ತು ಮಗುವಿನ ಪೋಷಣೆ ಇವು ಮಹಿಳಾ ಕಾರ್ಯಗಳಾಗಿರುವವರೆಗೆ, ಸ್ತ್ರೀವಾದಿ ವಿಮೋಚನೆ ಎನ್ನುವುದು ಕೇವಲ ದೂರದ ಕನಸಾಗಿಯೇ ಉಳಿಯುತ್ತದೆ ಎಂದು ಹೇಳುತ್ತಾರೆ. ಮಹಿಳೆಗೆ ಸಂಬಳ ಗಳಿಸುವ ಸಾರ್ವಜನಿಕ ಕ್ಷೇತ್ರಗಳಲ್ಲಿ ಪ್ರವೇಶ ಪಡೆಯಲು ಅನುವು ಮಾಡಿಕೊಟ್ಟರಷ್ಟೇ ಸಾಲದು ಅಥವಾ ಮಹಿಳೆಯರು ವಿಶೇಷವಾಗಿ ಮದುವೆಯಾದ ಮಹಿಳೆಯರು ತಮ್ಮ ಮಕ್ಕಳೊಡನೆ ಕೇವಲ ಹೆಚ್ಚಿನ ಕೆಲಸ ಮಾಡುವುದನ್ನು ನಿಲ್ಲಿಸುವುದು ಅಲ್ಲ. ಮನೆಗೆಲಸವು ಖಾಸಗಿ ವಿಷಯವಾಗಿ ಉಳಿಯುವವರೆಗೆ, ಮಹಿಳೆ ಎರಡು ಪಟ್ಟು ಕೆಲಸದ ಭಾರ ಹೊರುವುದು ತಪ್ಪದು ಎಂದು ವ್ಯಾಖ್ಯಾನಿಸುತ್ತಾರೆ.

ಈ ಅಸಮಾನತೆಯ ಪರಿಸ್ಥಿತಿಯಿಂದ ಹೊರಬರುವ ಒಂದೇ ಮಾರ್ಗವೆಂದರೆ ಕೌಟುಂಬಿಕ ಕೆಲಸವನ್ನು ಉತ್ಪಾದಕ ಕೆಲಸವೆಂದು ಮರು ವ್ಯಾಖ್ಯಾನಿಸುವುದು ಮತ್ತು ಮಹಿಳೆಯರು ಮನೆಗೆಲಸಕ್ಕೆ ಸಂಬಳ ಬೇಡುವುದು. ಮತ್ತೊಂದು ರೀತಿಯೆಂದರೆ ಮನೆಗೆಲಸವನ್ನು ಸಾಮಾಜೀಕರಣಗೊಳಿಸಿ ಇದರ ಸ್ಥಾನವನ್ನು ಮೇಲೇರಿಸುವುದು. ಇದರಿಂದಾಗಿ ಮಕ್ಕಳನ್ನು ಬೆಳೆಸುವ ಕೆಲಸವು ಸಮುದಾಯದ ಒಂದು ಹೊಣೆಗಾರಿಕೆಯಾಗುವುದು. ಕೌಟುಂಬಿಕ ಕೆಲಸವು ಸಂಬಳದಿಂದ ಗೌರವಿಸಲ್ಪಡುವುದಾದರೆ ಇದೂ ಒಂದು ಉದ್ಯಮವಾಗಿದೆ. ಪುರುಷರು ಇದರಲ್ಲಿ ಪ್ರವೇಶಿಸುತ್ತಾರೆ. ಈ ರೀತಿಯಾಗಿ ಮಹಿಳೆಯರು ಪುರುಷರೊಂದಿಗೆ ಸಮಾನವಾಗಿ ಇತರೆ ಕ್ಷೇತ್ರಗಳಲ್ಲಿ ಸ್ಪರ್ಧಿಸಲು ಮುಕ್ತರಾಗುತ್ತಾರೆ ಎಂದು ಭಾವಿಸುತ್ತಾರೆ.

ಮನೆಗೆಲಸದ ಚರ್ಚೆಯಲ್ಲಿ ಎತ್ತಲಾದ ತಾತ್ವಿಕ ಸಮಸ್ಯೆಗಳಲ್ಲಿ ಪ್ರಮುಖವಾದುದು. ಮಹಿಳೆಯರ ಕೆಲಸಗಳ ಅಳತೆ ಮಾಡುವುದು ಹೇಗೆ? ಕೆಲಸ ಮತ್ತು ವಿಶ್ರಾಂತಿಗಳ ಚಟುವಟಿಕೆಗಳ ನಡುವಿನ ಅಂತರವನ್ನು ಹೇಗೆ ಕಾಣಬೇಕು? ಏಕೆಂದರೆ ವಿಶ್ರಾಂತಿಯ ಚಟುವಟಿಕೆಗೆ ಸಂಬಳವಿರುವುದಿಲ್ಲ. ಉದಾಹರಣೆಗೆ ಒಬ್ಬ ತಾಯಿ ಮಗುವಿನೊಡನೆ ಆಡುತ್ತಿದ್ದಾಳೆ. ಆಕೆಯದು ಕೆಲಸವೋ, ಆಟವೋ? ಆಕೆ ಮಗುವಿಗೆ ಕಥೆ ಹೇಳುತ್ತಿದ್ದಾಳೆ. ಅದು ಆಕೆಗೂ ಮನರಂಜನೆಯೋ ಅಥವಾ ಆಕೆ ತನ್ನ ಕಲ್ಪನೆಗಾಗಿ ತನ್ನ ಹಕ್ಕು ಪ್ರತಿಪಾದಿಸುವಳೋ? ಒಂದು ವೇಳೆ ಇದು ಕೆಲಸವೆಂದು ತಿಳಿದರೆ, ಆಕೆಯ ಈ ಕೆಲಸವನ್ನೂ ಆಕೆಯ ಪತಿಯ ಕೆಲಸದೊಡನೆ ತುಲನೆ ಮಾಡಿದರೆ, ಅದು ಆಕೆಯ ಪತಿ ತನ್ನ ಕುಟುಂಬಕ್ಕಾಗಿ ಮಾಡಿದ ಉತ್ಪಾದನೆ ಅಥವಾ ಸಂತಾನೋತ್ಪತ್ತಿಯ ಕೆಲಸದ ಅವಧಿಗಿಂತ ಕಡಿಮೆಯಾಗುತ್ತದೆಯೆ? ಅದರಲ್ಲಿ ಸಂಬಂಧಾತ್ಮಕ ಶೋಷಣೆ ಇದೆಯೆ? ಆದರೆ, ಮಕ್ಕಳ

ಪೋಷಣೆಯು ಕೇವಲ ಒಂದು ವಿಶ್ರಾಂತಿ ಚಟುವಟಿಕೆಯಾಗಿರುವವರೆಗೂ ಅದರಲ್ಲಿ ದುರ್ಬಳಕೆಯು ಒಳಗೊಳ್ಳುವುದಿಲ್ಲ. ಮಾರುಕಟ್ಟೆಯದಲ್ಲದ ಚಟುವಟಿಕೆ(ಮಾರಲಿಕ್ಕೆ ಬಾರದ ಸಂಬಳವಿಲ್ಲದ)ಯನ್ನು ಗುಣಮಟ್ಟದ ಚಟುವಟಿಕೆಯನ್ನಾಗಿಸುವುದು, ಸ್ಪಷ್ಟವಾದ ಮಾನದಂಡವಿಲ್ಲದ್ದನ್ನು ಕೆಲಸ ಅಥವಾ ಕೆಲಸವಲ್ಲವೆಂದು ಬೇರ್ಪಡಿಸುವುದು ಸಿದ್ಧಾಂತದಲ್ಲಿ ಕಂಡುಬರುವಷ್ಟು ಸರಳವಾದದ್ದಲ್ಲ. ಮಕ್ಕಳನ್ನು ಪೋಷಿಸುವುದು ಮತ್ತು ಇತರ ರಕ್ತಸಂಬಂಧಗಳ ಚಟುವಟಿಕೆಗಳು ಕೆಲಸವೂ ಹೌದು ಆಟವೂ ಹೌದು. ಮಗುವಿನ ಮನೋವೈಜ್ಞಾನಿಕ ಬೆಳವಣಿಗೆಯು ಹೆಚ್ಚಾಗಿ ಆಟದ ಮುಖಾಂತರವೇ ಪರಿಣಾಮಕಾರಿ ಯಾಗಿರುವುದರಿಂದ ಆಟವೂ ಕೆಲಸವೆಂತಲೇ ಗಣನೆಯಾಗಬೇಕು. ಆದರೆ ಇಲ್ಲಿ ಆಟವು ಯಾವಾಗ ಮುಗಿಯಿತು ಹಾಗೂ ಕೆಲಸವು ಯಾವಾಗ ಪ್ರಾರಂಭಗೊಂಡಿತು ಎಂದು ನಿರ್ಧರಿಸುವವರಾರು? ಈ ರೀತಿ ಕ್ರಮವಲ್ಲದ ಅಥವಾ ಅನಿಯಂತ್ರಿತ ಅಂಶವೊಂದು ತೆವಳುತ್ತ ಸರಿದು ಒಳ್ಳೆಯ ಅಳತೆಗೋಲು ಆಗುವುದನ್ನು ಅನ್ವಯಿಸುವುದು ಕಠಿಣವಾಗಿ ಕಂಡುಬರುತ್ತದೆ.

ಈ ಸಮಸ್ಯೆಗೆ ಒಂದೇ ಪರಿಹಾರವೆಂದರೆ ಮನೆಗೆಲಸದ ಎಲ್ಲ ಚಟುವಟಿಕೆಗಳನ್ನು ಕೂಲಿಯವರಿಂದ ಮಾಡಿಸಬಹುದು ಅಂದರೆ ಅಡುಗೆಯವರು, ಮನೆಗೆಲಸದವರು, ತೋಟದ ಕೆಲಸಗಳನ್ನು ಮಾಡಿಸಿ, ತೌಲನಿಕ ಬೆಲೆಯನ್ನು ಅಗತ್ಯವಿದ್ದ ಕೆಲಸದ ಸಂಬಳವೆಂದು ಕೊಟ್ಟರೆ ಆಯಿತು. ಇದನ್ನು ಕೆಲಸವೋ ಅಥವಾ ಆಟವೋ ಎಂದೂ ಕೆಲವರು ವಾದಿಸಬಹುದು. ಇದು ಮಾನವ ಕಲ್ಯಾಣವನ್ನು ಪ್ರೋತ್ಸಾಹಿಸಬಹುದಾದರೆ, ಕೆಲಸ. ಇಂಥ ಚಟುವಟಿಕೆಯನ್ನು ನಿಜವಾದ ಕೆಲಸವೆಂದು ಪರಿಗಣಿಸಿ ಸರಿದೂಗಿಸಬೇಕು.

ಮಾರ್ಕ್ಸ್‌ವಾದಿಗಳು ಲಿಂಗಸಮಾನತೆಯ ಜಗತ್ತಿನಲ್ಲಿ ಮಾತನಾಡುತ್ತಿರುವಾಗ ಮಹಿಳೆಯ ಆರ್ಥಿಕ ಸಂಪತ್ತು ಹಾಗೂ ಸ್ವಾತಂತ್ರ್ಯ ಹೆಚ್ಚು ಮಹತ್ವವನ್ನು ಪಡೆಯುತ್ತವೆ ಎಂದು ನಂಬುತ್ತಾರೆ. ಕುಟುಂಬವು ಒಂದು ಆರ್ಥಿಕ ಘಟಕವಾಗಿ, ಕುಟುಂಬದಲ್ಲಿ ನಡೆಯುತ್ತಿರುವ ಮಹಿಳಾ ಕೆಲಸದ ಅಪಮೌಲ್ಯವನ್ನು ತಡೆಯುವುದಕ್ಕಾಗಿ ಸಾರ್ವಜನಿಕ ಉದ್ಯಮವನ್ನು ಪ್ರವೇಶಿಸಬೇಕು, ಮಹಿಳೆಯು ಆರ್ಥಿಕವಾಗಿ ಸ್ವತಂತ್ರಳಾಗಬೇಕೆಂದಲ್ಲಿ ಮನೆಗೆಲಸವನ್ನು ಹಾಗೂ ಪೋಷಣೆಯನ್ನು ಸಾಮಾಜೀಕರಣಗೊಳಿಸುವುದು ಮೊದಲ ಹೆಜ್ಜೆ. ಆನಂತರ ಕುಟುಂಬವು ಒಂದು ಆರ್ಥಿಕ ಘಟಕವಷ್ಟೇ ಅಲ್ಲ. ಭಾವನಾತ್ಮಕ ಘಟಕವೂ ಆಗಿದೆ. ಇಲ್ಲಿ ಕುಟುಂಬದ ಸದಸ್ಯರ ಬೇಡಿಕೆಗಳನ್ನು ವೈಯಕ್ತಿಕವಾಗಿ ಪೂರೈಸಲಾಗುತ್ತದೆ. ತಾಯ್ತನ ಮತ್ತು ಇದಕ್ಕೆ ಸಂಬಂಧಿಸಿದ ಚಟುವಟಿಕೆಗಳು ಎಲ್ಲರಿಗೂ ಕಾಣುವಂತಾಗಬೇಕು (ಗೋಚರತೆ), ಗೌರವಿಸುವಂತಾಗಬೇಕು. ಮಹಿಳೆಯರು ಸಾರ್ವಜನಿಕ ಕಾರ್ಯಕ್ಷೇತ್ರದಲ್ಲಿ ಹೆಚ್ಚು ಮುಕ್ತವಾಗಿ ಪ್ರವೇಶಿಸಲು ಇದು ಒಂದು ಹೊಸ ಜಗತ್ತಿನ ಮಾರ್ಗವಾಗುತ್ತದೆ, ಮಹಿಳೆ ಆರ್ಥಿಕವಾಗಿ ಸ್ವತಂತ್ರಳಾದಾಗ, ಮನೆಗೆಲಸಗಳಲ್ಲಿ ಮತ್ತು ವಿಶಾಲಾರ್ಥದಲ್ಲಿ ಆಕೆಯ ಅಂತಸ್ತು ಹಾಗೂ

ಕಾರ್ಯಗಳು ಬದಲಾಗುತ್ತವೆ. ಮಾರ್ಕ್ಸ್‌ವಾದಿ ಸ್ತ್ರೀವಾದಿಗಳಿಗೆ ಇದು ಮತ್ತೊಂದು ವರ್ಗಕ್ರಾಂತಿ ಎಂದು ಎನ್ನಿಸಬಹುದು. ಏಕೆಂದರೆ ಮಹಿಳೆಯು ಇಲ್ಲಿ ಜೈವಿಕ ವಿಜ್ಞಾನದಿಂದ ಮುಕ್ತಳಾಗಿ ಒಂದು ವರ್ಗವಾಗಿ ಪಿತೃಪ್ರಧಾನತೆ ಮತ್ತು ಬಂಡವಾಳಶಾಹಿತ್ವ ಎರಡೂ ಕಡೆಗಳ ಉತ್ಪಾದನಾ ಮೌಲ್ಯಗಳನ್ನು ಜೊತೆ ಜೊತೆಯಾಗಿಯೇ ನಾಶ ಮಾಡಬಹುದು ಎಂದು ಹೇಳಬಹುದು.

ಈ ಎಲ್ಲ ಚರ್ಚೆಗಳನ್ನು ಮಾಡುವ ಮಾರ್ಕ್ಸ್‌ವಾದಿ ಸ್ತ್ರೀವಾದವು ಲಿಂಗಾಧಾರಿತ ಶ್ರಮವಿಭಜನೆ ಹಿನ್ನೆಲೆಯಲ್ಲಿ ಮಹಿಳೆಯರ ಶೋಷಣೆಯನ್ನು ವಿಶ್ಲೇಷಿಸುವ ಭರದಲ್ಲಿ ಇತರೆ ಸಾಮಾಜಿಕ ಭಿನ್ನತೆಗಳನ್ನು ಇದು ಕೇಂದ್ರೀಕರಿಸುವಲ್ಲಿ ಸೋಲುತ್ತದೆನ್ನಬಹುದು.

**ಸಮಾಜವಾದಿ ಸ್ತ್ರೀವಾದ**

ಸಮಾಜವಾದಿ ಸ್ತ್ರೀವಾದವು ಉದಾರವಾದ ಮತ್ತು ಮಾರ್ಕ್ಸ್‌ವಾದಿ ಸ್ತ್ರೀವಾದಿ ನಿಲುವುಗಳನ್ನು ಇಟ್ಟುಕೊಂಡು ಬೆಳೆದಂತಹ ಸ್ತ್ರೀವಾದವಾಗಿದೆ. ತೀವ್ರವಾದಿ ಸ್ತ್ರೀವಾದದಿಂದ ಕೂಡ ಪ್ರಭಾವಗೊಂಡಿದೆ. ಇತರ ಸ್ತ್ರೀವಾದಗಳು ಒಂದೊಂದು ಅಂಶಕ್ಕೆ ಒತ್ತುಕೊಟ್ಟು ಅದರ ಮೂಲಕ ಸ್ತ್ರೀ ಶೋಷಣೆಯ ಮೂಲವನ್ನು ಹುಡುಕಲು ಯತ್ನಿಸಿದರು. ಆದರೆ ಈ ಎಲ್ಲ ಅಂಶಗಳು ಸೇರಿದ ಒಂದು ಸಮಗ್ರ ದೃಷ್ಟಿಕೋನದಿಂದ ಲಿಂಗತಾರತಮ್ಯ, ಸ್ತ್ರೀ ಶೋಷಣೆಗೆ ಕಾರಣವನ್ನು ಹುಡುಕುವ ಪ್ರಯತ್ನವಾಗಬೇಕೆಂದು ಅರಿತ ಕೆಲವು ಸ್ತ್ರೀವಾದಿಗಳು ಸಮಾಜವಾದಿ ಸ್ತ್ರೀವಾದವನ್ನು ಹುಟ್ಟು ಹಾಕಿದರು.

ಉದಾರವಾದ, ತೀವ್ರವಾದಿ ಮತ್ತು ಮಾರ್ಕ್ಸ್‌ವಾದವನ್ನು ಟೀಕಿಸುವ ಸಮಾಜವಾದಿ ಸ್ತ್ರೀವಾದವು ಈ ಮೂರು ನಿಲುವುಗಳು ಸರಿಯೆನಿಸಿದರೂ ಮಹಿಳಾ ಶೋಷಣೆಯ ವಿಚಾರ ಇವನ್ನು ಮೀರಿದ್ದು ಎಂದು ಹೇಳುತ್ತದೆ. ವರ್ಗಭೇದದ ಜೊತೆಗೆ ಲಿಂಗಭೇದವನ್ನು ಮಹಿಳೆಯರ ಪರಾಧೀನತೆಗೆ ಮುಖ್ಯಕಾರಣವೆಂದು ಗುರುತಿಸುತ್ತದೆ. ಲಿಂಗವ್ಯವಸ್ಥೆಯ ಸಂಬಂಧಗಳು ಅಧಿಕಾರಕ್ಕೆ ಸಂಬಂಧಪಟ್ಟ ಸಂಬಂಧಗಳೆಂದು ಅರ್ಥ ಮಾಡಿಕೊಳ್ಳುವುದರಿಂದ ಸಮಾಜದ ಸ್ವರೂಪವನ್ನು ಅರ್ಥ ಮಾಡಿಕೊಳ್ಳಬೇಕೆಂದರೆ ಅವುಗಳನ್ನು ವರ್ಗ ಮತ್ತು ಇತರ ಅಧಿಕಾರ ಸಂಬಂಧಗಳ ಜೊತೆಯೇ ವಿಶ್ಲೇಷಿಸಬೇಕೆಂದು ಹೇಳುತ್ತದೆ. ಮಹಿಳೆಯರಿಗೆ ಕಡಿಮೆ ವೇತನ, ಭವಿಷ್ಯದಲ್ಲಿ ಉದ್ಯೋಗ ಭರವಸೆಯಿಲ್ಲದ ಕೆಲವು ಕೆಲಸಗಳನ್ನು ನೀಡುವುದರಿಂದ ಉದ್ಯೋಗ ಕ್ಷೇತ್ರದಲ್ಲೂ ಲಿಂಗಾಧಾರಿತ ಶ್ರಮವಿಭಜನೆಯು ಮಹಿಳೆಯರ ವಿರುದ್ಧವಾಗಿ ಕೆಲಸ ಮಾಡುತ್ತದೆ. ಈಗಿರುವ ವ್ಯವಸ್ಥೆಯಲ್ಲಿ ಸ್ತ್ರೀ ತುಳಿತವನ್ನು ಕೊನೆಗೊಳಿಸುವುದು ಸಾಧ್ಯವಿಲ್ಲ. ಎಲ್ಲ ರೀತಿಯ ತುಳಿತಗಳ ವಿರುದ್ಧ ಹೋರಾಡಬೇಕು ಎನ್ನುತ್ತದೆ. ಹೊಸ ಸಮಾಜವನ್ನು ಕಟ್ಟುವಲ್ಲಿ ಸ್ತ್ರೀ ಪುರುಷರಿಬ್ಬರೂ ಒಟ್ಟಾಗಿ ಸೇರಿ ಕೆಲಸ ಮಾಡಬೇಕು. ಎಲ್ಲ ಪ್ರಕಾರದ ಅನ್ಯಾಯಗಳನ್ನು ಹೋಗಲಾಡಿಸಲು ಎಲ್ಲ

ವರ್ಗದ ಮಹಿಳೆಯರು ಒಗ್ಗೂಡಬೇಕು ಎನ್ನುತ್ತದೆ. ಖಾಸಗಿ ಆಸ್ತಿಯ ಪರಿಕಲ್ಪನೆ ಹುಟ್ಟುವುದಕ್ಕೆ ಮುಂಚೆಯೇ ಪುರುಷಪ್ರಧಾನತೆ ಇತ್ತು ಎಂದು ನಂಬುತ್ತದೆ. ಆದರೆ ಖಾಸಗಿ ಆಸ್ತಿ ಹೋದ ತಕ್ಷಣ ಪುರುಷಪ್ರಧಾನತೆ ಅಳಿಸಿ ಹೋಗುತ್ತದೆ ಎಂದು ಅರ್ಥವಲ್ಲ ಎಂದು ಅಭಿಪ್ರಾಯಪಡುತ್ತದೆ.

ಲಿಂಗಾಧಾರಿತ ಶ್ರಮವಿಭಜನೆಯ ಮೂಲ ಮತ್ತು ಸಮಾಜದ ವಿವಿಧ ಸಂಸ್ಥೆಗಳಲ್ಲಿ ಕಂಡುಬರುವ ಮಹಿಳೆಯರ ಪರಾಧೀನತೆಯನ್ನು ಪ್ರಶ್ನಿಸುತ್ತದೆ. ಪುರುಷಪ್ರಧಾನತೆ ಮಹಿಳಾ ಸಬಲೀಕರಣಕ್ಕೆ ದೊಡ್ಡ ಅಡ್ಡಿಯಾಗಿದೆ ಎಂದು ಹೇಳುತ್ತದೆ. ಸ್ತ್ರೀ ಪುರುಷರ ರೂಢಿಬದ್ಧ ಮನೋಭಾವನೆಗಳನ್ನು ಬೆಳೆಸುವಲ್ಲಿ ಶಿಕ್ಷಣ ಮತ್ತು ಸಮೂಹ ಮಾಧ್ಯಮದ ಪಾತ್ರವನ್ನು ಗುರುತಿಸುತ್ತದೆ. ಜೊತೆಗೆ ಶಾಲಾ ಪಠ್ಯಕ್ರಮವನ್ನು ಬದಲಾಯಿಸುವ ಅಗತ್ಯವನ್ನು ಎತ್ತಿಹಿಡಿಯುತ್ತದೆ. ಸರ್ಕಾರ ಮತ್ತು ಕಾರ್ಮಿಕ ಸಂಘಗಳು ಒಂದಾಗಿ ಲೈಂಗಿಕ ಮನೋಭಾವ ಮತ್ತು ಪದ್ಧತಿಗಳ ವಿರುದ್ಧ ಹೋರಾಡಬೇಕೆಂದು ಹೇಳುತ್ತದೆ. ಬಂಡವಾಳಶಾಹಿ ವಿರುದ್ಧ ಹೋರಾಡುವುದು ಮತ್ತು ಸಮಾಜವಾದಿ ಸಮಾಜವನ್ನು ಹೇಗೆ ಕಟ್ಟುವುದು ಎಂದು ತಿಳಿಸುವ ಸಿದ್ಧಾಂತಗಳನ್ನು ಸ್ವೀಕರಿಸಿದರಷ್ಟೇ ಸಾಲದು, ಸ್ತ್ರೀ ಪುರುಷರಿಗೆ ಒಂದೇ ರೀತಿಯ ಕೌಶಲ್ಯ, ಮೌಲ್ಯ ನೀಡುವ ಬದಲಿ ಸಂಬಂಧವನ್ನು ಹುಟ್ಟುಹಾಕಬೇಕೆಂದು ಪ್ರತಿಪಾದಿಸುತ್ತದೆ. ಮಹಿಳಾ ವಿಮೋಚನಾ ಹೋರಾಟಕ್ಕೆ ಸ್ವಾಯತ್ತ ಮಹಿಳಾ ಸಂಘಟನೆಗಳ ಸ್ಥಾಪನೆಯ ಅಗತ್ಯವಿದೆಂದು ನಂಬುತ್ತದೆ. ಈ ಸಂಘಟನೆಗಳು ಮಹಿಳೆಯರನ್ನು ರಾಜಕೀಯಕರಣಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಮಹಿಳೆಯರು ವಿಚಾರ ಮಾಡಲು ಅವಕಾಶ ಮಾಡಿಕೊಡುತ್ತದೆ. ಮಹಿಳೆಯರ ಜೀವನದ ಮೇಲೆ ಪರಿಣಾಮ ಬೀರುವ ಸಾಮಾಜಿಕ ರಾಜಕೀಯ ಮತ್ತು ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಮಹಿಳೆಯರ ಬೇಡಿಕೆಗಳ ಪರವಾಗಿ ವಾದಿಸಲು ಒಂದು ಚೌಕಟ್ಟನ್ನು ಹಾಕಿ ಕೊಡುತ್ತದೆ.

ಸಮಾಜವಾದಿ ಸ್ತ್ರೀವಾದಿ ವಿಶ್ಲೇಷಣೆಯ ಒಂದು ಪ್ರಮುಖ ಕೊಡುಗೆ ಎಂದರೆ "ಮಹಿಳಾ ಕಾರ್ಮಿಕರ ಸ್ವರೂಪವನ್ನು ವಿವರಿಸುವ ಪ್ರಯತ್ನ ಮಾಡಿದುದು"(ಹಾರ್ಡಿಂಗ್ ಎಸ್. (ಇಡಿ) ೧೯೮೭, ಪು. ೮೧-೯೦). "ಆರಂಭದ ಪ್ರಯತ್ನವು ಮನೆಗೆಲಸವು ಬಂಡವಾಳಶಾಹಿಗೆ ಅವಶ್ಯಕವಾಗಿ ಲಾಭವಾಗಿರುವುದರಿಂದ ಅವರಿಗೆ ವೇತನ ನೀಡುವುದು ಅವಶ್ಯಕವೆಂದು ಆಗ್ರಹ ಮಾಡಿತು. ಈ ವಿಚಾರಗಳು ಮನೆಗೆಲಸ ಸಹಜವಲ್ಲ/ನೈಸರ್ಗಿಕವಲ್ಲ, ಆದರೆ ಸಾಮಾಜಿಕ ಜಾಗೃತಿ ಮೂಡಿಸಿತು. ಆದ್ದರಿಂದ ಈ ಪರಿಕಲ್ಪನೆಯು ಸಮರ್ಪಕವಾಗಿ ನಿರಂತರ ಸ್ತ್ರೀವಾದ ಹೋರಾಟಕ್ಕೆ ಒಂದು ವೇದಿಕೆಯನ್ನು ಕಲ್ಪಿಸಿತು" (ಗ್ರೇ, ಇ. ಡಿ., ೧೯೮೩, ಪು.೧೬೭). "ಗೃಹದ ಶ್ರಮವನ್ನು ಗೃಹದ ಉತ್ಪಾದನಾ ಕ್ರಮದ ಪರಿಸ್ಥಿತಿಯಲ್ಲಿ ಮಾತ್ರ ಅರ್ಥ ಮಾಡಿಕೊಳ್ಳಬಹುದು ಮತ್ತು ಪುರುಷರು ಸ್ತ್ರೀಯರನ್ನು ನಿಯಂತ್ರಿಸುವುದರಲ್ಲಿ ಅವರ ಶ್ರಮದ ಲಾಭವನ್ನು ಪಡೆದಿರುತ್ತಾರೆ. ಕಾರ್ಮಿಕ ಮಾರುಕಟ್ಟೆಯಲ್ಲಿ ಹಂಚಿಕೆಯನ್ನು

ಜಂಡರ್ ಜೀವನೋಪಾಯದಿಂದ ಅಥವಾ ವೃತ್ತಿಯಿಂದ ವಿಶ್ಲೇಷಿಸುತ್ತಾರೆ. ಬಂಡವಾಳಶಾಹಿ ಪದ್ಧತಿಯನ್ನು ಅಂತರ್ಗತವಾಗಿ ನಿರಾಕರಿಸುವುದಾಗಿದೆ" (ಮುರ್ರೆ, ಸಿ., ೧೯೮೧, ಪು. ೩೧೮) ಎಂದು ವಿವರಿಸಲಾಗಿದೆ.

"ವಿವಿಧ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಪರಿಸ್ಥಿತಿಗಳಲ್ಲಿ ಸ್ತ್ರೀವಾದಿ ದೃಷ್ಟಿಕೋನ ಮಾಡುವ ಮಹಿಳೆಯರ ಅಧೀನತೆಯ ವಿವರಣೆಯು ದುರ್ಬಲವಾಗಿದೆ ಎಂದು. ಆದರೂ ಜಂಡರ್ ಸಮಸ್ಯೆಗಳ ಕುರಿತ ಮಹತ್ವದ ಚೌಕಟ್ಟನ್ನು ನೀಡಿದೆ ಎಂದು" (ಹಾರ್ಕೋರ್ಟ್ ಡಬ್ಲ್ಯೂ (ಇಡಿ), ೧೯೯೪, ಪು. ೧೯) ಎಂಬ ಪ್ರತಿಪಾದನೆ ಇದೆ. ಅದಕ್ಕೆ ಸಂಬಂಧಿಸಿದಂತೆ ಉತ್ಪಾದನೆ ಮತ್ತು ಸಂತಾನೋತ್ಪತ್ತಿ ಸಂಬಂಧದ ಪರಿಶೀಲನೆಯ ಅಗತ್ಯವಿದೆ. ಕಾರಣ ಕಾಲಾನುಕ್ರಮದಲ್ಲಿ ವಿಶ್ವ ಆರ್ಥಿಕ ಪದ್ಧತಿಯಲ್ಲಿ ಬದಲಾವಣೆ ಹೊಂದುತ್ತಿರುತ್ತದೆ ಎಂದು ಭಾವಿಸಬಹುದು. ಮೋಸರ್(೧೯೯೩) ಅವರು "ಜಂಡರ್ ಹಾಗೂ ಅಭಿವೃದ್ಧಿ ಯೋಜನೆಗಳಲ್ಲಿ ಸ್ತ್ರೀವಾದಿ ಸಿದ್ಧಾಂತಗಳ ಜ್ಞಾನದ ಅಗತ್ಯವಿದೆ ಎನ್ನುತ್ತಾರೆ"(ಮೋಸರ್ ಸಿ., ೧೯೯೩, ಪು.೨೧೩).

ವಂದನಾ ಶಿವ ಅವರ ಪ್ರಕಾರ "ಅಭಿವೃದ್ಧಿಯು ವಸಾಹತುಶಾಹಿಯ ಆರ್ಥಿಕ-ರಾಜಕೀಯ ಅನಭಿವೃದ್ಧಿ ಹಾಗೂ ಆಧುನಿಕ ಪಾಶ್ಚಿಮಾತ್ಯ ಪಿತೃಪ್ರಧಾನತೆಯ ಸ್ಪಷ್ಟ ಗುರುತುಗಳನ್ನು ಹೊಂದಿದೆ. ಈ ಪ್ರಕ್ರಿಯೆಗಳಿಂದಾಗಿ ಬಹುಸಂಖ್ಯಾತ ಮಹಿಳೆ-ಪುರುಷರು ತಮ್ಮೆಲ್ಲವನ್ನೂ ಕಳೆದುಕೊಂಡರೂ ಅದರಲ್ಲೂ ಮಹಿಳೆಯರು ಕಳೆದುಕೊಂಡದ್ದು ಹೆಚ್ಚು. ಆದಾಯ ಸೃಷ್ಟಿಗಾಗಿ ಭೂಮಿಯನ್ನು ಖಾಸಗೀಕರಣಗೊಳಿಸಿದ್ದರಿಂದ ಮಹಿಳೆಯರು ಭೂಮಿಯಿಂದ ಸ್ಥಳಾಂತರಿಸಲ್ಪಟ್ಟು, ಅವರ ಭೂಮಿ ಬಳಕೆಯ ಹಕ್ಕನ್ನು ತೆಳುವಾಗಿಸಿತು. ವಾಣಿಜ್ಯ ಬೆಳೆಗಳ ವಿಸ್ತರಣೆಯು ಆಹಾರ ಉತ್ಪಾದನೆಯನ್ನು ಕುಂಠಿತಗೊಳಿಸಿತಲ್ಲದೆ, ಮಕ್ಕಳು ದುರ್ಬಲರ ದೇಖರೇಖಿಗೆ ಕಡಿಮೆ ಸಂಪನ್ಮೂಲವನ್ನು ಉಳಿಸಿತು. ಇದೇ ಸಮಯದಲ್ಲಿ ಕುಟುಂಬದ ಗಂಡಸರು ವಲಸೆ ಹೋದರು ಇಲ್ಲವೇ ವಸಾಹತುಕಾರರ ಪಿತೂರಿಯಿಂದಾಗಿ ಕೂಲಿಗಳಾಗಿಬಿಟ್ಟಿರು... ಮತ್ತೊಂದು ದಾಖಲೆ ಪ್ರಕಾರ ಮಹಿಳೆಯರಿಗೆ ಆರ್ಥಿಕ ಸಂಪನ್ಮೂಲ, ಆದಾಯ ಮತ್ತು ಉದ್ಯೋಗ ಲಭ್ಯತೆ ಪ್ರಮಾಣ ಕಡಿಮೆಯಾಗಿ. ಕೆಲಸದ ಭಾರ ಹೆಚ್ಚಿದೆ. ಅವರ ಆರೋಗ್ಯ, ಪೌಷ್ಟಿಕತೆ ಮತ್ತು ಶಿಕ್ಷಣ ಪ್ರಮಾಣ ಕಡಿಮೆಯಾಗಿದೆ ಎನ್ನುತಾರೆ" (ವಂದನಾ ಶಿವ(ಮೂಲ) ಮಾಧವ ಐತಾಳ(ಕನ್ನಡಕ್ಕೆ), ೨೦೦೫, ಪು. ೨). ಈ ತರಹದ ಲಿಂಗಸಂಬಂಧಿ ಜ್ಞಾನವನ್ನು ನೋಡುವುದಾದರೆ ಅದು ಏಕರೂಪವಾಗಿಲ್ಲ, ಅವು ಬಹುರೂಪಿ ನೆಲೆಯನ್ನು ಪಡೆದುಕೊಂಡಿವೆ. ಅಂದರೆ ಮಹಿಳೆ ಕುರಿತ ನಿರ್ವಚನಗಳು ಆಕೆ ಬದುಕುವ ಸಾಮಾಜಿಕ ನೆಲೆಗಟ್ಟಿನಲ್ಲಿ ನಡೆದಿವೆ. ಆಯಾ ದೇಶ, ಸಮಯ, ಕಾಲ ಧರ್ಮ, ಶಿಕ್ಷಣ, ವರ್ಗ, ಜಾತಿ, ಪ್ರದೇಶ, ವಯಸ್ಸು ಇತ್ಯಾದಿ ಸಾಮಾಜಿಕ ಭಿನ್ನತೆಗಳು ಆಧಾರವಾಗಿವೆ. ಈ

ಹಿನ್ನೆಲೆಯಲ್ಲಿ ಭಾರತದ ಸಂದರ್ಭದ ಮಹಿಳಾ ವಲಸೆ ಅಧ್ಯಯನಗಳನ್ನು ನೋಡುವುದಾದರೆ ಅದು ಇನ್ನೂ ಭಿನ್ನವಾದುದಾಗಿದೆ.

**೩.೩. ಭಾರತದಲ್ಲಿ ಮಹಿಳಾ ವಲಸೆ ಸಂಬಂಧಿ ಚಿಂತನೆಗಳು**

ಕಳೆದ ಕೆಲವು ದಶಕಗಳಿಂದ ಮಹಿಳಾ ವಲಸೆಯ ಕುರಿತ ಅಧ್ಯಯನ, ಸಂಶೋಧನೆ, ಚರ್ಚೆ, ಯೋಜನೆ ರಚಿಸುವವರಿಗೆ ಎಷ್ಟು ಆಸಕ್ತಿಕರ ವಿಷಯವೋ ಅಷ್ಟೇ ಸವಾಲು ಮತ್ತು ಸಂಕೀರ್ಣತೆಯ ವಿಷಯವಾಗಿದೆ. ಏಕೆಂದರೆ ವಲಸೆ ಬಂದ ಮಹಿಳೆಯ ಮೇಲೆ ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ, ಕೌಟುಂಬಿಕ ಹಿಂಸೆ, ಸಮಾನ ಕೆಲಸಕ್ಕೆ ಅಸಮಾನ ವೇತನ ಇತ್ಯಾದಿ ಅಂಶಗಳನ್ನು ನೇರವಾಗಿ, ಸರಳವಾಗಿ, ಶೀಘ್ರವಾಗಿ ಬಗೆಹರಿಸಲು ಸಾಧ್ಯವಿಲ್ಲ. ಜಗತ್ತಿನಲ್ಲಿ ಮಹಿಳಾ ವಲಸೆಯು ಅಂತಾರಾಷ್ಟ್ರೀಯ ವಲಸೆಗಿಂತ ಆಂತರಿಕ ವಲಸೆಯಾಗಿದೆ. ಅಭಿವೃದ್ಧಿ ಹೊಂದುತ್ತಿರುವ ಭಾರತ ದೇಶದಲ್ಲಿ ಆಂತರಿಕ ವಲಸೆಯೇ ಹೆಚ್ಚಾಗಿದೆ ಹಾಗೂ ಅದರ ಮೂಲಭೂತ ಪ್ರಶ್ನೆಗಳು ಬೇರೆಯಾಗಿವೆ. ವಲಸೆ ಎನ್ನುವ ಅಂಶವೇ ಕೃಷಿ ಬಿಕ್ಕಟ್ಟಿನಿಂದ ಉಂಟಾದ ಜೀವನೋಪಾಯದ ಮೇಲಿನ ನಕಾರಾತ್ಮಕ ಪರಿಣಾಮದಿಂದ ಆಗಿದೆ ಎಂಬುದು ನ್ಯಾಷನಲ್ ಸ್ಯಾಂಪಲ್ ಸರ್ವೇ ಮತ್ತು ಜನಗಣತಿಗಳ ಅಭಿಪ್ರಾಯವಾಗಿದೆ.

ಭಾರತದ ಹಿಂದಿನ ಆರ್ಥಿಕತೆಗಿಂತ ಇಂದಿನ ಎಲ್‌ಪಿಜಿ(ಉದಾರೀಕರಣ, ಖಾಸಗೀಕರಣ, ಜಾಗತೀಕರಣ) ಆರ್ಥಿಕತೆಯ ಸಿದ್ಧಾಂತವು ಭಾರತವನ್ನು ಸುಧಾರಣೆ ಮಾಡಿದಂತೆ ಕಾಣಿಸುತ್ತದೆ. ಈ ಸಿದ್ಧಾಂತ ಮಹಿಳೆಯ ಸ್ವಾಯತ್ತತೆ, ಆತ್ಮವಿಶ್ವಾಸದ ಹೆಚ್ಚಳ, ಸ್ವಾವಲಂಬಿತನ, ಆರ್ಥಿಕ ಸಬಲತೆ ಮಾಡಬಹುದು ಎಂದು ನಿರೀಕ್ಷಿಸಲಾಯಿತು. ಆದರೆ ಆ ಆಶಾವಾದವು ೧೯೯೦ರ ಮಧ್ಯಭಾಗದಲ್ಲಿನ ಕೃಷಿ ಬಿಕ್ಕಟ್ಟಿನಿಂದಾಗಿ ಕುಂಠಿತಗೊಂಡಿತು. ಹಾಗಾಗಿ ವಲಸೆಯಿಂದಾಗುವ ಸಮಸ್ಯೆಗಳ ಮೇಲೆ ಕೇಂದ್ರೀಕರಿಸುವಂತೆ ಅಂತಾರಾಷ್ಟ್ರೀಯ ಮತ್ತು ರಾಷ್ಟ್ರಮಟ್ಟದಲ್ಲಿನ ಸಂಘ ಸಂಸ್ಥೆಗಳು, ಸಂಘಟನೆಗಳು, ಚಳುವಳಿಗಳು ಒತ್ತಾಯಿಸಿದವು. ಇದರಿಂದಾಗಿ ಅಧ್ಯಯನಗಳು ಆಯಾ ಪ್ರದೇಶದ ವಲಸೆ, ಮಹಿಳಾ ವಲಸೆ, ಸಮುದಾಯಗಳ ವಲಸೆ, ವಲಸೆಯಲ್ಲಿನ ಬದುಕು–ಬವಣೆ, ಸವಾಲು, ಸಮಸ್ಯೆಗಳ ಕುರಿತು ಗಮನ ಹರಿಸಿದವು. ಇದೇ ಸಮಯಕ್ಕೆ ವಲಸೆ ಕುರಿತ ಅಧ್ಯಯನದಲ್ಲಿ ಹೆಚ್ಚು ರಚನಾತ್ಮಕ ಪ್ರಶ್ನೆಗಳನ್ನು ಮತ್ತು ಸಮಸ್ಯೆಗಳನ್ನು ಹುಡುಕಲು ಪ್ರಾರಂಭಿಸಿದ ಕಾರಣಕ್ಕಾಗಿ ಜಂಡರ್ ಮತ್ತು ಆಂತರಿಕ ವಲಸೆಯು ತುಂಬ ಪ್ರಾಮುಖ್ಯತೆಯನ್ನು ಪಡೆಯಿತು.

ವಲಸೆ ಕುರಿತ ಅಭಿವೃದ್ಧಿ ಕೇಂದ್ರಿತ ಸಿದ್ಧಾಂತಗಳು ಕೃಷಿಯಿಂದ ಕೈಗಾರಿಕೆಗಳಿಗೆ, ಕೈಗಾರಿಕೆಗಳ ನಂತರದ ಸಾಮಾಜಿಕ ಆರ್ಥಿಕ ಬದಲಾವಣೆಯ ಬಗೆಗೆ ತಿಳಿಸಿದವು. ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಹೋಗುತ್ತಿರುವ ಅಂಕಿಸಂಖ್ಯೆಗಳು ಇದನ್ನು

ಸಮರ್ಥಿಸಿದವು. ೧೯೫೦ರಿಂದ ೧೯೮೦ರ ಭಾರತದ ಯೋಜನೆಗಳು ವಸಾಹಾತು ಶಾಹಿಯಲ್ಲದ ಅಂಶಗಳ ಬಗೆಗೆ ಕೇಂದ್ರೀಕರಿಸುತ್ತಿದ್ದವು ಆದರೆ ೧೯೯೦ರ ನಂತರದ ಕೃಷಿ ಬಿಕ್ಕಟ್ಟಿನಿಂದ ಉಂಟಾದ ಸ್ಥಿತ್ಯಂತರವು ವಸಾಹತುವಲ್ಲದ ರಾಜ್ಯಕೇಂದ್ರಿತ ಅಭಿವೃದ್ಧಿಯ ಕಡೆಗೆ ಸರಿದವು. ಜಾಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆ, ಖಾಸಗೀಕರಣ ನೀತಿಯಿಂದಾಗಿ ಅರೆ/ಪ್ರಾಕ್ಸಿಯಾದ ಗ್ರಾಮೀಣ ನಗರ ವಲಸೆಯ ಜನರ ಔದ್ಯೋಗಿಕ, ಕೌಶಲ್ಯಗಳ, ಜೀವನ ರೀತಿಯ ಬದಲಾವಣೆ, ಸಾಮಾಜಿಕ ಚಲನೆ, ಆದಾಯ ಉತ್ಪಾದನೆಯನ್ನು ಸ್ವಲ್ಪಮಟ್ಟಿಗೆ ತಂದವು.

ಈ ಸಂದರ್ಭದಲ್ಲಿ "ಭಾರತದಲ್ಲಿ ನಗರೀಕರಣ ಪ್ರಮಾಣ ಕಡಿಮೆಯಿದ್ದರೂ ನಗರೀಕರಣದಿಂದ ಉಂಟಾದ ಸಮಸ್ಯೆಗಳೇ ಹೆಚ್ಚಾಗಿದ್ದವು. ಉದಾಹರಣೆಗೆ ಕೊಳಚೆ ಪ್ರದೇಶಗಳ ಹೆಚ್ಚಳ, ಜನರ ಜೀವನಮಟ್ಟದ ಕುಸಿತ, ಅಪೌಷ್ಟಿಕತೆ, ಅನಾರೋಗ್ಯ, ಮಾನಸಿಕ ಅಶಾಂತಿ ಇತ್ಯಾದಿ. ಉದ್ಯೋಗದ ವಿಸ್ತರಣೆ ಮತ್ತು ಗ್ರಾಮೀಣ-ನಗರ ಉದ್ಯೋಗದ ಸರಣಿಯು ವೃತ್ತಾಕಾರದಲ್ಲಿ ಸುತ್ತುತ್ತಾ, ಸಂಚಲಿಸುತ್ತಾ ಇತ್ತು. ವಲಸೆಯಿಂದ ದೊರೆಯುವ ಕೆಲಸ ಅನೌಪಚಾರಿಕ ಮತ್ತು ರಚನಾತ್ಮಕವಲ್ಲದ ಕೆಲಸಗಾರರ ಸಂಖ್ಯೆಯನ್ನು ಕಡಿಮೆ ಮಾಡಬೇಕಿತ್ತು. ಆದರೆ ಇದು ಹೆಚ್ಚಿಸಿತ್ತು. ಇತ್ತೀಚಿನ ವರ್ಷಗಳಲ್ಲಿ ಸಂಘಟಿತ ವಲಯದ ಅಸ್ಥಿರತೆ ಮತ್ತು ಕುಸಿತವು ಸಹ ಇದಕ್ಕೆ ಕಾರಣವಾಗಿತ್ತು"(ಎಂ. ಹೈನ್ರಿ, ೨೦೧೨, ಪು.೧೩೫). ದುರದೃಷ್ಟವಶಾತ್ ಮ್ಯಾಕ್ರೋ ಸಮೀಕ್ಷೆಗಳು ತಾತ್ಕಾಲಿಕ, ಸರಪಳಿ ವಲಸೆಯ ಕುರಿತು ಮಾಹಿತಿಯನ್ನು ಒದಗಿಸುವುದಿಲ್ಲ. ಶಾಶ್ವತ ಕೆಲಸಗಾರರ ಮಾಹಿತಿಯನ್ನು ಮಾತ್ರ ಒದಗಿಸುವುದು ಕಂಡುಬರುತ್ತದೆ. ೨೦೦೭-೦೮ರ ನ್ಯಾಷನಲ್ ಸ್ಯಾಂಪಲ್ ಸರ್ವೆಯು ಈ ಗ್ಯಾಪನ್ನು ತುಂಬಲು ಪ್ರಯತ್ನಿಸಿತು. ವಲಸೆಯ ಕುರಿತು ಅರೆಕಾಲಿಕ ವಲಸೆ, ಶಾಶ್ವತ ವಲಸೆ, ಸಾಮಾನ್ಯವಾಗಿ ವಾಸಿಸುವ ವಾಸಸ್ಥಾನದಂತಹ ದತ್ತಾಂಶವನ್ನು ಸಮೀಕ್ಷೆಯಲ್ಲಿ ಒಳಗೊಳ್ಳುವ ಪ್ರಯತ್ನಗಳು ಪ್ರಾರಂಭವಾದವು. ಅಲ್ಲದೆ ಭಾರತದಲ್ಲಿ ವಲಸೆ ಕಾರ್ಮಿಕರ ವಿಧ ಮತ್ತು ಮಾದರಿಯನ್ನು ವಿವರಿಸಲು ಪ್ರಯತ್ನಿಸಿದವು.

ಶ್ರೀವಾತ್ಸವ(೨೦೦೫) ಹೇಳಿರುವಂತೆ "ವಲಸೆ ಕುರಿತ ರಾಷ್ಟ್ರೀಯ ದತ್ತಾಂಶ ಅದು ಜನಗಣತಿಯೇ ಆಗಲಿ, ರಾಷ್ಟ್ರೀಯ ಸ್ಯಾಂಪಲ್ ಸರ್ವೇ ಆಗಲಿ ಅಭಿವೃದ್ಧಿ ದೃಷ್ಟಿಕೋನಕ್ಕೆ ವೈರುಧ್ಯದಂತೆ ಜನಸಂಖ್ಯೆಯ ಚಲನೆಯ ಬಗೆಗೆ ಮಾಹಿತಿಯನ್ನು ಮಾತ್ರ ವಿನ್ಯಾಸಗೊಳಿಸಿದೆ. ಇದು ಆರ್ಥಿಕ ಅಥವಾ ಕಾರ್ಮಿಕರ ವಲಸೆಯ ಮೂಲಾಧಾರವಾಗಿದೆ. ಜನಗಣತಿ ಅಥವಾ ರಾಷ್ಟ್ರೀಯ ಸ್ಯಾಂಪಲ್ ಸರ್ವೆ ವ್ಯಾಖ್ಯಾನಿಸಿದಂತೆ ವಾಸಸ್ಥಾನದ ಬದಲಾವಣೆಯೇ ವಲಸೆ ಎಂದು ಸಮೀಕ್ಷೆಗಳಲ್ಲಿ ದಾಖಲಿಸಿರುವುದರಿಂದ ಮಹಿಳೆಯರನ್ನು ಆರ್ಥಿಕತೆಯ ಸ್ವರೂಪವಲ್ಲದ ವಲಸಿಗರು ಎಂದು ಚಿತ್ರಿಸಲಾಗಿದೆ"(ಎಂ. ಹೈನ್ರಿ, ೨೦೧೨, ಪು.೧೩೬). ಇವರನ್ನು ಆರ್ಥಿಕತೆಗೆ ಪೂರಕವಾದ ಅಥವಾ ಸಹ ಆರ್ಥಿಕ ವಲಸಿಗರು ಅಂದರೆ

ಉದಾಹರಣೆಗೆ ಒಬ್ಬ ಪುರುಷ ವಲಸೆ ಹೋಗುತ್ತಾನೆ ಎಂದರೆ ಅವನ ಜೊತೆಗೆ ಹೆಂಡತಿ/ತಾಯಿ/ಅಕ್ಕ/ತಂಗಿ/ಮಗಳು ಹೋದರೆ ಅವರು ರೂಪಾಯಿ ಮೌಲ್ಯದ ದುಡಿಮೆಯನ್ನು ಮಾಡದಿದ್ದರೂ ರೂಪಾಯಿ ಮೌಲ್ಯದ ದುಡಿಮೆಗಾರರಿಗೆ ಎಲ್ಲವನ್ನು ಉಚಿತವಾಗಿ ಕೇವಲ ಸಂಬಂಧದಿಂದ ಮಾತ್ರ ಒದಗಿಸುತ್ತಿರುತ್ತಾರೆ. ಇದನ್ನು ಪರಿಗಣಿಸಿಲ್ಲ ಅಥವಾ ಮಹಿಳೆಯರ ದುಡಿಮೆಯನ್ನು ಅಪಮೌಲ್ಯೀಕರಿಸಿದೆ ಎಂದು ವ್ಯಾಖ್ಯಾನಿಸುವುದು ಸೂಕ್ತ. ಸಮೀಕ್ಷೆಗಳಲ್ಲಿ ವಲಸೆಗೆ ಕಾರಣಗಳನ್ನು ಕೇಳಲಾಗುತ್ತದೆ.ಯಾರು ಉದ್ಯೋಗ/ಕೆಲಸ ಅಥವಾ ಆರ್ಥಿಕ ಅಂಶಗಳ ಕಾರಣಗಳನ್ನು ತಿಳಿಸುತ್ತಾರೋ ಅವರನ್ನು ಕಾರ್ಮಿಕರು ಅಥವಾ ಆರ್ಥಿಕ ವಲಸೆಗಾರರು ಎಂದು ಪರಿಗಣಿಸಲಾಗುತ್ತದೆ. ಈ ಅಂಶವಿದ್ದರೂ ಸಹ ಮಹಿಳೆಯರು ಉದ್ಯೋಗದ ಸಲುವಾಗಿ ವಲಸೆ ಹೋಗುವ ಸಂಖ್ಯೆ ತುಂಬ ಚಿಕ್ಕದು ಅದನ್ನು ವಿಶ್ಲೇಷಣೆಗೆ ತೆಗೆದುಕೊಳ್ಳದಿದ್ದರೂ ಪರವಾಗಿಲ್ಲ ಎಂದು ನಿರೂಪಿಸಲ್ಪಡುವಷ್ಟು ಚಿಕ್ಕದ್ದಾಗಿದೆ. "ಗ್ರಾಮೀಣ ಭಾರತದ ಒಟ್ಟು ವಲಸೆಗಾರರಲ್ಲಿ ಉದ್ಯೋಗದ ಸಲುವಾಗಿ ವಲಸೆ ಹೋಗಿರುವ ಮಹಿಳೆಯರು ೧೯೯೩ರಲ್ಲಿ ಶೇಕಡ ೩.೩ರಷ್ಟಿದ್ದರೆ, ೧೯೯೯-೨೦೦೦ರಲ್ಲಿ ಶೇ.೦.೪ ಮತ್ತು ೨೦೦೭-೦೮ರಲ್ಲಿ ಶೇ.೦.೩ರಷ್ಟಿದೆ. ವಿವಾಹದ ಕಾರಣಕ್ಕಾಗಿ ವಲಸೆ ಹೋಗಿರುವವರ ಸಂಖ್ಯೆ ೧೯೯೩ಕ್ಕಿಂತ ೨೦೦೭-೦೮ರಲ್ಲಿ ದ್ವಿಗುಣಗೊಳ್ಳಲು ಹತ್ತಿರವಾಗುವಷ್ಟು ಹೆಚ್ಚಾಗಿದೆ, ೧೯೯೩ರಲ್ಲಿ ಶೇ.೨೪.೭, ೧೯೯೯-೨೦೦೦ರಲ್ಲಿ ೩೭.೮ ಮತ್ತು ೨೦೦೭-೦೮ರಲ್ಲಿ ಶೇ.೪೩.೫ರಷ್ಟು ಹೆಚ್ಚಾಗಿದ್ದು ಗ್ರಾಮೀಣ ಭಾಗದಿಂದ ನಗರ ಪ್ರದೇಶಕ್ಕೆ ಮದುವೆ ಕಾರಣಕ್ಕೋಸ್ಕರ ವಲಸೆ ಹೋಗುವ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ"(ಎಂ. ಹೈನ್ರಿ, ೨೦೧೨, ಪು-೧೩೯).

ಗ್ರಾಮೀಣ ಭಾಗದಲ್ಲಿ ಸಾರ್ವತ್ರಿಕವಾಗಿ ಮದುವೆಯ ಕಾರ್ಯ ಈಡೇರಬೇಕಾದರೆ ಎಲ್ಲರೂ ಆಚರಿಸುವ ಒಂದು ಆಚರಣೆ ಎಂದರೆ ಅನ್ಯಗೋತ್ರದವರೊಂದಿಗಿನ ವಿವಾಹ. ಸ್ಥಳೀಯ ಅಥವಾ ವಾಸಿಸುವ ಪ್ರದೇಶದಿಂದ ಹೊರಗಿನ ಸಂಬಂಧದೊಂದಿಗೆ ಮದುವೆ ಮಾಡುವುದು ಒಂದು ಸಂಪ್ರದಾಯವಾಗಿದೆ, ಪಿತೃಸ್ಥಾನೀಯ ವಾಸಸ್ಥಾನವಿರುವುದರಿಂದ ಅಂದರೆ ಗಂಡನ ತಂದೆ-ತಾಯಿಗಳ ಜೊತೆಗೆ ಅಥವಾ ಹತ್ತಿರದಲ್ಲಿ ವಾಸಿಸಬೇಕು ಎಂಬ ಆಚರಣೆ ಇರುವುದರಿಂದ ಭಾರತದ ಮಹಿಳೆಯರನ್ನು ಅಗಾಧ ಪ್ರಮಾಣದಲ್ಲಿ ವಲಸಿಗರು ಎಂದು ದಾಖಲಿಸಲು ಕಾರಣವಾಗಿದೆ. ಈ ತೆರನಾದ ಮಾಹಿತಿಯು ವಲಸೆಯಲ್ಲಿ ಜಂಡರ್ ಆಯಾಮವನ್ನು ಅಧ್ಯಯನ ಮಾಡುವವರಿಗೆ ಹಲವು ಸಮಸ್ಯೆಗಳನ್ನು ಮತ್ತು ಸವಾಲುಗಳನ್ನು ಉಂಟುಮಾಡಿದೆ. ಆದ್ದರಿಂದ ಹಲವು ವ್ಯಾಖ್ಯಾನಕಾರರು ವಿಶೇಷವಾಗಿ ಆರ್ಥಿಕ ತಜ್ಞರು ಅತ್ಯಲ್ಪ ಪ್ರಮಾಣದ ಮಹಿಳಾ ವಲಸಿಗರು ಆರ್ಥಿಕತೆಗೆ ಕೊಡುಗೆ ನೀಡುತ್ತಿರುವುದರಿಂದ ಅವರ ಪ್ರಸ್ತುತತೆಯನ್ನು ತಳ್ಳಿ ಹಾಕುತ್ತಾರೆ. ಈ ಪ್ರಕ್ರಿಯೆಯಲ್ಲಿ ಉತ್ಪಾದನೆಯ ವಿಭಿನ್ನ ಆಯಾಮ, ಉತ್ಪಾದನಾ ಆರ್ಥಿಕತೆಯಲ್ಲಿ ಶ್ರಮವಿಭಜನೆ, ಶ್ರೇಣೀಕರಣ ವ್ಯವಸ್ಥೆ, ಸ್ಥಾನಮಾನ,

ಕಾರ್ಮಿಕರ ಉಪಯುಕ್ತತೆ, ಬಂಡವಾಳಶಾಹಿಗಳ ಸಾಮಾಜಿಕ ಪರಿಸ್ಥಿತಿ ಈ ಎಲ್ಲ ಅಂಶಗಳು ಸಹಜವಾಗಿ ಹಾದು ಹೋಗುತ್ತವೆ.

ಈ ಎಲ್ಲ ಪ್ರಶ್ನೆಗಳನ್ನು ಹೊರತುಪಡಿಸಿ, ಮ್ಯಾಕ್ರೋ ಪ್ರಮಾಣದ ದತ್ತಾಂಶಗಳು ವಲಸೆಯ ಒಂದು ಕಾರಣವನ್ನು ಮಾತ್ರ ಗುರುತಿಸಿದವು. ಸಾಮಾಜಿಕ, ಆರ್ಥಿಕೇತರ ಕಾರಣಗಳಲ್ಲಿ ಮಹಿಳಾ ವಲಸೆಯ ಕಾರಣವನ್ನು ದಾಖಲಿಸಿ ಇತರ ಸಂಗತಿಗಳನ್ನು ಮರೆ ಮಾಚಿದವು. ಉದಾಹರಣೆಗೆ ಕೆಲವು ಮಹಿಳಾ ಕಾರ್ಮಿಕರ ವಲಸೆಯು ಮದುವೆ ಕಾರಣವೆಂದು ಗೋಚರಿಸಬಹುದು ಅಥವಾ ಸಹಸಂಚಲನವು ಕಾರಣವಾಗಿರಬಹುದು, ಏಕಕಾಲದಲ್ಲಿ ಇವೆರಡು ಕಾಣಿಸಬಹುದು, ಕಾರಣಗಳು ಹೊಂದಾಣಿಕೆಯಾಗಬಹುದು ಆದರೆ ಸಾಮಾಜಿಕ ಕಾರಣವೇ ಮುಖ್ಯವೆಂದು ಭಾವಿಸಲಾಗಿದೆ. ಮ್ಯಾಕ್ರೋ ಮಾಹಿತಿಯು ಮಹಿಳೆಯರ ಆರ್ಥಿಕ ಚಟುವಟಿಕೆಗಳನ್ನು ವಾಸ್ತವಕ್ಕಿಂತ ಕನಿಷ್ಠಗೊಳಿಸಲಾಗಿದೆ. ವಲಸೆ ಕುರಿತ ಹಲವು ಸಮೀಕ್ಷೆಗಳ ಮಾಹಿತಿ ಮತ್ತು ಅಂಕಿ ಸಂಖ್ಯೆಗಳು ಮಹಿಳೆಯನ್ನು ಸಾಮಾಜಿಕ ಕಾರಣಕ್ಕಾಗಿ ಪುರುಷನನ್ನು ಆರ್ಥಿಕ ಕಾರಣಕ್ಕಾಗಿ ವಲಸೆ ಹೋಗುತ್ತಾರೆ ಎಂದು ತಿಳಿಸಿದವು.

ವಲಸೆ ಕುರಿತ ಅಭಿವೃದ್ಧಿ ಸಿದ್ಧಾಂತದ ಮೂಲವಾದ ಆರ್ಥಿಕ ವಲಸೆಯು ಪುರುಷರ ವಲಸೆಯನ್ನು ಸಮರ್ಥಿಸುತ್ತದೆ. ಈ ದತ್ತಾಂಶವು ಸಮಕಾಲೀನ ಭಾರತದ ಜಂಡರ್ ವಲಸೆ ಮತ್ತು ಅಭಿವೃದ್ಧಿಯನ್ನು ಅರ್ಥ ಮಾಡಿಕೊಳ್ಳಲು, ಹಲವು ಪ್ರಶ್ನೆಗಳನ್ನು ಹಾಕಿಕೊಳ್ಳಲು ಸಾಧ್ಯವಾಗಿಸಿದೆ. ೧೯೯೩ ಮತ್ತು ೨೦೦೭-೦೮ರ ಅವಧಿಯಲ್ಲಿ ಭಾರತದ ನಗರ ಮತ್ತು ಗ್ರಾಮೀಣ ಪ್ರದೇಶದ ಮಹಿಳಾ ವಲಸಿಗರ ಸಂಖ್ಯೆಯಲ್ಲಿ ಏರಿಕೆ ಕಂಡುಬಂದರೆ ನಗರ ಪ್ರದೇಶದ ಪುರುಷರ ವಲಸೆಯಲ್ಲಿ ಪ್ರಾರಂಭದಲ್ಲಿ ಏರಿಕೆ ಕಂಡುಬಂದಿದ್ದು ನಂತರ ನಿಶ್ಚಲವಾಗಿದೆ ಮತ್ತು ಗ್ರಾಮೀಣ ಭಾಗದ ಪುರುಷರ ವಲಸೆಯಲ್ಲಿ ಇಳಿಕೆ ಕಂಡುಬಂದಿದೆ.

ವಲಸೆಗಿರುವ ಕಾರಣಗಳಲ್ಲಿ ಮದುವೆಯು ಸಹ ಒಂದು ಪ್ರಮುಖ ಕಾರಣವಾಗಿದೆ. ಸಹವಲಸಿಗರು ಅಂದರೆ ತಂದೆ-ತಾಯಿ, ಪೋಷಕರು, ಕೆಲಸ ಮಾಡುವವರ ಚಲನೆಯಿಂದಾಗಿ ವಲಸೆ ಬಂದವರು ಮತ್ತು ಉದ್ಯೋಗದ ಕಾರಣಕ್ಕಾಗಿ ವಲಸೆ ಬಂದವರು. ಈ ಎಲ್ಲ ವಿಧಗಳಲ್ಲೂ ಮಹಿಳಾ ವಲಸಿಗರ ಸಂಖ್ಯೆಯೇ ಅಧಿಕವಾಗಿದೆ. "೨೦೦೭-೦೮ರ ಸಮೀಕ್ಷೆಯಲ್ಲಿ ಒಟ್ಟು ವಲಸಿಗರಲ್ಲಿ ಮಹಿಳಾ ವಲಸಿಗರು ಶೇಕಡ ೮೦ಕ್ಕೂ ಅಧಿಕವಾಗಿದ್ದಾರೆ. ೧೯೯೩ರಲ್ಲಿ ಒಟ್ಟು ವಲಸೆಗಾರರಲ್ಲಿ ಮಹಿಳಾ ವಲಸಿಗರು ಶೇಕಡ ೭೮ರಷ್ಟಿದ್ದರು. ಮಹಿಳಾ ವಲಸಿಗರ ದರವು ಮದುವೆ ಕಾರಣಕ್ಕಾಗಿ ತೀವ್ರಗತಿಯಲ್ಲಿ ಏರಿಕೆಯಾಗಿರುವುದು ಕಂಡು ಬಂದಿದೆ. ಗ್ರಾಮೀಣ ಭಾರತದ ಮಹಿಳಾ ವಲಸಿಗರು ೧೯೯೩ರಲ್ಲಿ ಶೇಕಡ ೪೦ರಷ್ಟಿದ್ದು ೨೦೦೭-೦೮ರಲ್ಲಿ ಶೇಕಡ ೪೭.೭ರಷ್ಟಾಗಿದೆ. ಮದುವೆಗೋಸ್ಕರ ವಲಸೆ ಹೋದ ಮಹಿಳೆಯರ ಸಂಖ್ಯೆ ೧೯೯೩ರಲ್ಲಿ ೨೪.೭ರಷ್ಟಿದ್ದು, ೨೦೦೭-೦೮ರಲ್ಲಿ ಶೇಕಡ ೪೩.೫%ರಷ್ಟಕ್ಕೆ

ಹೆಚ್ಚಾಗಿದೆ, ಅದೇ ತೆರನಾಗಿ ನಗರ ಪ್ರದೇಶದ ವಲಸೆ ಶೇಕಡ ೭ರಿಂದ ಶೇಕಡ ೧೬%ಕ್ಕೆ ಹೆಚ್ಚಾಗಿದೆ"(ಎಂ. ಹೈನ್ರಿ, ೨೦೧೨, ಪು-೧೪೧). ಗ್ರಾಮೀಣ ಪ್ರದೇಶದ ಮಹಿಳೆಯ ವಿವಾಹದ ವಲಸೆಯ ಹೆಚ್ಚಳವನ್ನು ರಾಷ್ಟ್ರೀಯ ಸ್ಯಾಂಪಲ್ ಸರ್ವೆ ಮತ್ತು ಜನಗಣತಿ ಎರಡರಲ್ಲೂ ಪ್ರತಿಫಲಿಸುತ್ತದೆ. ಗ್ರಾಮೀಣ ಪ್ರದೇಶದ ವಿವಾಹದ ವಲಸೆಯು ನಗರ ಪ್ರದೇಶದ ಮಹಿಳೆಯರ ವಿವಾಹದ ವಲಸೆಗಿಂತ ಹೆಚ್ಚಾಗಿದೆ. ಇದಕ್ಕಿರುವ ಕಾರಣಗಳಲ್ಲಿ ೧. ಸುಧಾರಿತ ಸಂಪರ್ಕ, ಸಾರಿಗೆ ಸೌಲಭ್ಯದಿಂದಾಗಿ ಮಹಿಳೆಯರು ದೂರದ ಸಂಬಂಧದೊಂದಿಗೆ ವಿವಾಹವಾಗಿರಬಹುದು ಅಥವಾ ಪ್ರಯಾಣಕ್ಕೆ ಸಿದ್ಧರಿರಬಹುದು ೨. ಮಹಿಳೆ ಅಥವಾ ಜನರ ದೃಷ್ಟಿಕೋನ ಗ್ರಾಮೀಣ ಅಥವಾ ಸ್ಥಳೀಯ ಪ್ರದೇಶದಲ್ಲಿ ವಾಸಿಸಿ ಜೀವನೋಪಾಯ ಕಂಡು ಕೊಳ್ಳುವುದಕ್ಕಿಂತ ನಗರ ಪ್ರದೇಶಗಳಲ್ಲಿ ವಾಸಿಸುವುದು ಉತ್ತಮ ಎಂದುಕೊಂಡಿರಬಹುದು ೩. ಹೆಣ್ಣುಮಕ್ಕಳು ಹತ್ತಿರವಿದಷ್ಟು ಕಿರಿಕಿರಿ, ತೊಂದರೆ, ಕೌಟುಂಬಿಕ ಹಿಂಸೆಯಾದಾಗ ಸಹಿಸಿಕೊಳ್ಳುವ ಸಾಮರ್ಥ್ಯ ಕಡಿಮೆಗೊಳುತ್ತದೆ ಎಂಬ ಭಾವನೆಯೂ ಇರಬಹುದು ಇತ್ಯಾದಿ ಕಾರಣಗಳನ್ನು ಮರುಶೋಧಿಸಬೇಕಾದ ಅಗತ್ಯವಿದೆ.

ರಾಷ್ಟ್ರೀಯ ಸ್ಯಾಂಪಲ್ ಸರ್ವೆ ಪ್ರಕಾರ ಉದ್ಯೋಗಾಧಾರಿತ ಮಹಿಳಾ ವಲಸೆಯ ಪ್ರಮಾಣದಲ್ಲಿ ಕುಸಿತ ಕಂಡು ಬಂದಿದೆ. ಇದು ಗ್ರಾಮೀಣ ಪ್ರದೇಶದಲ್ಲಿ ಶೇಕಡ ೩.೩ರಿಂದ ಶೇಕಡ ೦.೩ಕ್ಕೆ ಕುಸಿದಿದೆ. ಇದೇ ತೆರನಾಗಿ ಉದ್ಯೋಗಾಧಾರಿತ ಪುರುಷ ವಲಸಿಗರಲ್ಲಿಯೂ ಸಹ ಅರ್ಧದಷ್ಟು ಕುಸಿತ ಕಂಡುಬಂದಿದೆ. ಆದರೆ ಮಹಿಳೆಯ ಕುಸಿತದ ಪ್ರಮಾಣ ಹೆಚ್ಚು ಕನಿಷ್ಠವಾಗಿದೆ. ಆದರೆ ನಗರ ಪ್ರದೇಶದ ಮಹಿಳೆಯರ ಕೆಲಸದ ಭಾಗವಹಿಸುವಿಕೆ ದರವೇ ಕಡಿಮೆಯಾಗಿದೆ. ನಗರ ಪ್ರದೇಶದ ಮಹಿಳಾ ವಲಸಿಗರು ಉದ್ಯೋಗಕ್ಕಾಗಿ ೧೯೯೩ರಲ್ಲಿ ಶೇಕಡಾ ೧.೯ರಷ್ಟು ವಲಸೆ ಹೋಗಿದ್ದರೆ ೨೦೦೭-೦೮ರಲ್ಲಿ ೧.೨ಕ್ಕೆ ಕುಸಿತ ಕಂಡುಬಂದಿದೆ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ನಗರ ಪ್ರದೇಶದ ಪುರುಷರ ಉದ್ಯೋಗ ಸಂಬಂಧಿ ವಲಸೆ ೧೯೯೩ರಲ್ಲಿ ಶೇಕಡ ೯.೯ದಿಂದ ಶೇಕಡ ೧೪.೪ಕ್ಕೆ ೨೦೦೭-೦೮ರಲ್ಲಿ ಮೇಲ್ಮುಖವಾಗಿ ಸಾಗಿದೆ. ಇದರಿಂದ ಉದಾರೀಕರಣ, ಖಾಸಗೀಕರಣ, ಮುಕ್ತ ಮಾರುಕಟ್ಟೆ, ಜಾಗತೀಕರಣವು ಮಹಿಳಾ ದುಡಿಮೆಯನ್ನು ಹೆಚ್ಚು ಮಾಡದೇ ಕಡಿಮೆ ಶ್ರಮದ ಲಿಂಗೀಕರಣ ಮಾಡಿದೆ ಎನ್ನಬಹುದು.

**ವಿವಾಹ ವಲಸೆಯ ಹೆಚ್ಚಳ, ಮಹಿಳಾ ದುಡಿಮೆ ಮತ್ತು ವಧುದಕ್ಷಿಣೆಯ ಅಪಮೌಲ್ಯೀಕರಣದ ಅಂತರ ಸಂಬಂಧಿತ ಒಳಸಿಕ್ಕುಗಳು**

೧೯೯೦ರ ಕೃಷಿ ಬಿಕ್ಕಟ್ಟಿನಿಂದಾಗಿ ಗ್ರಾಮೀಣ ಭಾಗದ ಪುರುಷರು ವಲಸೆ ಹೋಗಿರುವುದರಿಂದ ಮಹಿಳೆಯರು ಸಹ ವಿವಾಹದ ವಲಸೆಯಲ್ಲಿ ಹೆಚ್ಚು ಎಂಬುದು ಕಷ್ಟ. ಏಕೆಂದರೆ ಪುರುಷರ ವಲಸೆಗಿಂತ ಮಹಿಳೆಯರ ವಲಸೆ ದ್ವಿಗುಣಕ್ಕೆ ಹತ್ತಿರವಿದೆ. ಆದಕಾರಣ

ಇದಕ್ಕೆ ಸಂಬಂಧಿಸಿದ ಇನ್ನು ಮೂರು ಸಹಸಂಬಂಧಿ ಕಾರಣಗಳನ್ನು ಹೆಸರಿಸಬಹುದು. ಮೊದಲನೆಯದು ಹಿಂದಿನದಕ್ಕಿಂತ ಹೆಚ್ಚು ಅನ್ಯಗೋತ್ರದ ವಿವಾಹಗಳು ಗ್ರಾಮಗಳಲ್ಲಿ ಜರುಗುತ್ತಿವೆ. ಮಹಿಳಾ ಅಭಿವೃದ್ಧಿ ಅಧ್ಯಯನ ಕೇಂದ್ರ "೨೦೦೯-೧೧ರಲ್ಲಿ ೨೦ ರಾಜ್ಯಗಳಲ್ಲಿ ಜಂಡರ್ ಮತ್ತು ವಲಸೆ ಕುರಿತ ಪ್ರಾಥಮಿಕ ಮಾಹಿತಿಯಲ್ಲಿ ೫೦ಕ್ಕಿಂತ ಅಧಿಕ ವಯಸ್ಸಿನ ಮಹಿಳೆಯರಲ್ಲಿ ಗ್ರಾಮದ ಸಂಬಂಧಗಳಲ್ಲಿನ ವಿವಾಹ ಶೇಕಡ ೨೨ಕ್ಕೂ ಅಧಿಕವಾಗಿದ್ದರೆ; ೨೦ ವಯಸ್ಸಿನ ಮತ್ತು ಅದಕ್ಕಿಂತ ಕಡಿಮೆ ವಯಸ್ಸಿನ ಕಿರಿಯ ಮಹಿಳೆಯರಲ್ಲಿ ಈ ಪ್ರಮಾಣ ಶೇಕಡ ೧೯ಕ್ಕೆ ಇಳಿಕೆಯಾಗಿದೆ. ಗ್ರಾಮದಲ್ಲಿರುವ ಜನರು ನಗರ ಪ್ರದೇಶಗಳಲ್ಲಿಯ ಜನರೊಂದಿಗೆ ವಿವಾಹ ಸಂಬಂಧದ ಮೂಲಕ ಮುಖ್ಯವಾಹಿನಿಯ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ, ಆರ್ಥಿಕ ಅನುಭವಗಳನ್ನು ಪಡೆಯಬಹುದಾಗಿದೆ ಎಂಬ ಗ್ರಹಿಕೆಯು ಇರಬಹುದು. ಹಿಂದಿನದಕ್ಕಿಂತ ಇಂದು ಹತ್ತಿರದ ಸಂಬಂಧಗಳಲ್ಲಿ ಮದುವೆಗಳು ನಡೆಯುತ್ತಿರುವುದು ಕಡಿಮೆಯಾಗಿದೆ. ಇನ್ನೊಂದು ಕಾರಣವೆಂದರೆ ಸ್ಥಳೀಯವಾಗಿ ಜೀವನೋಪಾಯಕ್ಕೆ ಹತ್ತು ಹಲವು ಸಂಕಷ್ಟಗಳು ಇರಬಹುದು. ಮದುವೆಯ ಸಂಬಂಧಗಳು ಸ್ಥಳೀಯ ಪ್ರದೇಶದವರಿಗಿಂತ ಅನ್ಯ ಪ್ರದೇಶದವರೊಂದಿಗೆ ಸರಿಯಾಗಬಹುದು ಎಂಬುದು ಇರಬಹುದು. ಆದರೆ ಮಹಿಳೆಗೆ ಸ್ಥಳೀಯವಾಗಿ ದೊರಕುವ ಸಂಪನ್ಮೂಲ, ಕೌಶಲ್ಯಗಳನ್ನು ಆಕೆ ಕಳೆದುಕೊಂಡಂತಾಗುತ್ತದೆ. ಇದು ಸ್ಥಳೀಯ ಮಹಿಳೆಯ ಜ್ಞಾನ ಮತ್ತು ಅವರ ಕೌಶಲ್ಯದ ಮೇಲೆ ನಕಾರಾತ್ಮಕ ಪರಿಣಾಮ ಬೀರುತ್ತದೆ ಅಲ್ಲದೆ ವರದಕ್ಷಿಣೆಯನ್ನು ವಿಸ್ತರಿಸಿದೆ"(ಎಂ. ಹೈನ್ರಿ, ೨೦೧೨, ಪು-೧೪೧) ಎನ್ನಬಹುದು.

ಐತಿಹಾಸಿಕ ಅಧ್ಯಯನಗಳು ಕೃಷಿ ಸಮುದಾಯಗಳಲ್ಲಿ ವಧುದಕ್ಷಿಣೆ ಪದ್ಧತಿ ಆಚರಣೆಯಲ್ಲಿತ್ತು ಎಂದು ತಿಳಿಸುತ್ತವೆ. ನಂತರ ಅವು ವರದಕ್ಷಿಣೆಗೆ ಬದಲಾದವು. ಮಹಿಳೆಯ ಉತ್ಪಾದನೆಯ ಕೆಲಸ ಮೌಲ್ಯವನ್ನು ಕಳೆದುಕೊಂಡಂತೆ ವಧುದಕ್ಷಿಣೆಯಿಂದ ವರದಕ್ಷಿಣೆಗೆ ಬದಲಾಯಿತು. ವಸಾಹಾತುಶಾಹಿಯ ವಾಣಿಜ್ಯೀಕರಣವು ರೈತ ಸಮುದಾಯದ ಹೆಣ್ಣುಮಕ್ಕಳ, ಕೃಷಿ ಕಾರ್ಮಿಕರ ದುಡಿಮೆಯ ಮೌಲ್ಯವನ್ನು ಕಡಿಮೆಗೊಳಿಸಿತು. ಅದೇ ವೇಳೆಗೆ ಲಿಂಗತಾರತಮ್ಯವನ್ನು ಅಧಿಕಗೊಳಿಸಿತು. ಯಾವ ಸಮುದಾಯಗಳು ಮೊದಲು ವಧುದಕ್ಷಿಣೆಯನ್ನು ನೀಡುತ್ತಿದ್ದವೋ ನಂತರ ಅವುಗಳೇ ವರದಕ್ಷಿಣೆಯನ್ನು ಪಡೆಯುವುದು, ನೀಡುವ ಕೆಲಸ ಪ್ರಾರಂಭವಾಯಿತು. ಕಳೆದ ದಶಕದಿಂದಲೂ ಗ್ರಾಮೀಣ ಪ್ರದೇಶದ ಮಹಿಳೆಯ ಕೆಲಸದ ಭಾಗವಹಿಸುವಿಕೆ ದರದಲ್ಲಿಯೂ ಕಡಿತ ಕಂಡುಬಂದಿರುವುದು ಸಮಕಾಲೀನ ಮಹಿಳಾ ಕೆಲಸದ ಮೌಲ್ಯದಲ್ಲಿಯೂ ಕಡಿಮೆಯಾಗಿದೆ. ಸಮಕಾಲೀನ ಬಿಕ್ಕಟ್ಟುಗಳು ಬಗೆಹರಿಯದಾದಾಗ ಜಾಗತಿಕ ವಾಣಿಜ್ಯ ಮತ್ತು ಮಾರುಕಟ್ಟೆಯ ಶಕ್ತಿಗಳು, ಬೆಲೆ ಏರಿಳಿತಗಳು, ವರದಕ್ಷಿಣೆಯನ್ನು ಹೆಚ್ಚಿಸಿರುವುದರಲ್ಲಿ ಯಾವುದೇ ಆಶ್ಚರ್ಯವಿಲ್ಲ!

ಇನ್ನೊಂದು ಕುತೂಹಲಕಾರಿ ಅಂಶವೆಂದರೆ ವರದಕ್ಷಿಣೆ ಹೆಚ್ಚಾದಷ್ಟು ಮದುಮಗನ ಮದುವೆಯ ಖರ್ಚುಗಳು ಹೆಚ್ಚಾಗುತ್ತವೆ ಎಂಬುದಕ್ಕೆ ಪುರಾವೆಗಳು ಇವೆ. ನೆರೆ–ಪ್ರದೇಶದ ವಿವಾಹಗಳ ಕುರಿತ ಒಂದು ಅಧ್ಯಯನದಲ್ಲಿ ಕೇರಳ ಮತ್ತು ಮೈಸೂರು ಪ್ರದೇಶದ ಮುಸ್ಲಿಂ ಸಮುದಾಯದ ವಿವಾಹಗಳನ್ನು ಅವಲೋಕಿಸಿದಾಗ ಮೈಸೂರಿನ ಹುಡುಗ ಕಡಿಮೆ ವರದಕ್ಷಿಣೆ ಪಡೆದುಕೊಂಡು ಅನ್ಯ ಪ್ರದೇಶದ ಕೇರಳ ಹುಡುಗಿಯನ್ನು ಮದುವೆಯಾಗಲು ಇಷ್ಟಪಡುತ್ತಾನೆ ಮತ್ತು ಮದುವೆಯೂ ಆಗುತ್ತಾನೆ. ಏಕೆಂದರೆ ಸ್ಥಳೀಯವಾಗಿ ಹೆಚ್ಚು ವರದಕ್ಷಿಣೆಯನ್ನು ನೀಡುವ ಹುಡುಗಿಯ ಮನೆಯವರ ನಿರೀಕ್ಷೆಗಳು ಹೆಚ್ಚಾಗಿರುತ್ತವೆ ಅಲ್ಲದೆ ಸ್ಥಳೀಯವಾಗಿ ಇಷ್ಟು ವರದಕ್ಷಿಣೆಯನ್ನು ಪಡೆದು ಎಂತಹ ಮದುವೆ ಮಾಡಿದ್ದಾರೆ ಎಂಬ ಸಾಮಾಜಿಕ ದೃಷ್ಟಿಕೋನವು ಸಹ ಹುಡುಗನನ್ನು ಮತ್ತು ಹುಡುಗನ ಮನೆಯವರನ್ನು ಮುಜುಗರಕ್ಕೆ ಈಡು ಮಾಡುತ್ತದೆ. ಅಲ್ಲದೆ ಮದುವೆ ಖರ್ಚು–ವೆಚ್ಚಗಳನ್ನು ಭರಿಸಿಕೊಳ್ಳಲು ಕಷ್ಟವೂ ಆಗುತ್ತದೆ. ಆದಕಾರಣ ಕಡಿಮೆ ವರದಕ್ಷಿಣೆ ಪಡೆದು, ಕಡಿಮೆ ಖರ್ಚಿನಲ್ಲಿ ವಿವಾಹವಾಗುವುದು ಉತ್ತಮ ಎಂಬ ಅಭಿಪ್ರಾಯ ಹೊಂದಿದ್ದಾರೆ. ದಕ್ಷಿಣದ ರಾಜ್ಯಗಳಲ್ಲಿ ಕೇರಳದಂತಹ ಪ್ರದೇಶದ ವಿವಾಹದ ನಿಯಮವು ಕಠಿಣವು, ಸಾರ್ವತ್ರಿಕವು ಅಲ್ಲ ಎಂಬುದು ಎಲ್ಲರಿಗೂ ಗೊತ್ತಿರುವ ಅಂಶ. ಈ ತೆರನಾದ ವಿವಾಹಗಳು ವಲಸೆಯನ್ನು ವಿಸ್ತರಿಸಿವೆ.

ವೈಯಕ್ತಿಕ ದೃಷ್ಟಿಕೋನ, ಪ್ರೇರಣೆ, ಗ್ರಹಿಕೆ, ಸಂಸ್ಕೃತಿ, ವರದಕ್ಷಿಣೆಯ ವಿಸ್ತರಣೆ, ವಿವಾಹದ ಖರ್ಚುವೆಚ್ಚ, ವಿವಾಹದ ವಲಸೆ, ಮಹಿಳಾ ಕೆಲಸದ ಅಪಮೌಲ್ಯೀಕರಣ, ಮಹಿಳಾ ಕೆಲಸದ ಪ್ರಸ್ತುತತೆಯ ವಿಶ್ಲೇಷಣೆಗಳು ಸಂಕೀರ್ಣವಾಗಿವೆ ಮತ್ತು ವೈರುಧ್ಯತೆಯಿಂದ ಕೂಡಿವೆ. ವೈಯಕ್ತಿಕ ಪ್ರೇರಣೆ ಮತ್ತು ಗ್ರಹಿಕೆಯು ವಿವಾಹದ ವಲಸೆ, ಅನ್ಯಗೋತ್ರದ ವಿವಾಹ, ವಿವಾಹದ ಸಾಂಪ್ರದಾಯಿಕ ಚೌಕಟ್ಟನ್ನು ಸಡಿಲಗೊಳಿಸುವ ಪ್ರವೃತ್ತಿಯ ಕಡೆಗೆ ಸಾಗುತ್ತಿದೆ. ಸಂಬಳಸಹಿತ ಮತ್ತು ಸಂಬಳರಹಿತ ಮಹಿಳಾ ದುಡಿಮೆಯು ವಿವಾಹ ಮತ್ತು ಸಾಮಾಜಿಕ ಆಚರಣೆಯ ಮೇಲೆ ಒತ್ತಡವನ್ನು ಉಂಟುಮಾಡುತ್ತಿದೆ. ಆದ್ದರಿಂದ ಮದುವೆ ವಲಸೆಯು ಆಯಾ ಪ್ರದೇಶದ ಸಂಸ್ಕೃತಿ, ಸಂಪ್ರದಾಯ, ಗ್ರಹಿಕೆ, ಪ್ರೇರಣೆಗಳನ್ನು ಆಳವಾದ ಅಧ್ಯಯನಕ್ಕೆ ಒಳಪಡಿಸಬೇಕಾಗಿದೆ. ಆಗ ಮಾತ್ರವೇ ಮಹಿಳಾ ವಲಸೆಯನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಆಕರ ಗ್ರಂಥಸೂಚಿ**

ಆಗೆಸಾ ಜೆ ಆ್ಯಂಡ್ ಅಗೆಸಾ ಆರ್, ೧೯೯೯, ಜಂಡರ್ ಡಿಫರೆನ್ಸ್ ಇನ್ ದ ಇನ್ಸಿಡೆನ್ಸ್ ಆಫ್ ರೂರಲ್ ಟು ಅರ್ಬನ್ ಮೈಗ್ರೇಶನ್: ಎವಿಡೆನ್ಸ್ ಫ್ರಮ್ ಕಿನ್ಯಾ: ದ ಜರ್ನಲ್ ಆಫ್ ಡೆವಲಪ್‌ಮೆಂಟ್ ಸ್ಟಡೀಸ್, ವಾಲ್ಯೂಮ್ ೩೫ (೬) ಪು. ೩೬–೫೮.

ಆಡೋ, ಎನ್.ಓ. ಮತ್ತು ಕ್ವೆಗಿರ್ ಎ., ೧೯೯೦ ಶಾರ್ಟ್-ಟರ್ಮ್ ಸೆಕ್ಯುಲರ್ ಮೈಗ್ರೇಶನ್ ಇನ್ ದ ಕಾಂಟೆಕ್ಸ್ಟ್ ಆಫ್ ಸೋಷಿಯೊ-ಎಕನಾಮಿಕ್ ಡೆವಲಪ್‌ಮೆಂಟ್ ಇನ್ ರೂರಲ್ ಘಾನಾ: ದ ಕೇಸ್ ಆಫ್ ರೈಸ್ ಫಾರ್ಮರ್ಸ್ ಇನ್ ಸಮ್ ಸೆಲೆಕ್ಟಡ್ ರೂರಲ್ ಕಮ್ಯುನಿಟಿಸ್ ಇನ್ ದ ನಾರ್ಥ್-ಈಸ್ಟರ್ನ್ ವೋಲ್ಟಾ ರಿಜನ್, ವರ್ಕಿಂಗ್ ಪೇಪರ್ ನಂ.೧೭೩. ಜಿನೀವಾ, ಇಂಟರ್‌ನ್ಯಾಷನಲ್ ಲೇಬರ್ ಆಫೀಸ್ ಪು. ೪೧೧.

ಅಡೆಪೋಜು ಅಡೆರೆಂಟ್, ೨೦೦೮ ಇಂಟರ್ ನ್ಯಾಷನಲ್ ಮೈಗ್ರೇಶನ್ ಆ್ಯಂಡ್ ನ್ಯಾಷನಲ್ ಡೆವಲಪ್‌ಮೆಂಟ್ ಇನ್ ಸಬ್-ಸಹಾರನ್ ಆಫ್ರಿಕಾ: ಬ್ರಿಲ್, ಲೈಡೆನ್ ಪು. ೨೧.

ಅಹೂಜಾ-ಪಟೇಲ್ ಕೆ., ೧೯೯೫, ವುಮೆನ್ ಆಂಡ್ ಸಸ್ಟೈನಬಲ್ ಡೆವಲಪ್ಮೆಂಟ್: ಆನ್ ಇಂಟರ್‌ನ್ಯಾಷನಲ್ ಡೈಮೆನ್ಷನ್: ಆಶೀಸ್ ಪಬ್ಲಿಷಿಂಗ್ ಹೌಸ್, ನವದೆಹಲಿ, ಪು. ೧೬೫.

ಎಂ. ಹೈನ್ರಿ, ೨೦೧೨, ನ್ಯಾಷನಲ್ ವರ್ಕ್‌ಶಾಪ್ ಆನ್ ಇಂಟರ್‌ನಲ್ ಮೈಗ್ರೇಶನ್ ಆ್ಯಂಡ್ ಹ್ಯೂಮನ್ ಡೆವಲಪ್‌ಮೆಂಟ್ ಇನ್ ಇಂಡಿಯಾ, ವರ್ಕ್‌ಶಾಪ್ ಕಂಪೆಂಡಿಯಮ್, ವಾಲ್ಯೂಮ್.೨: ವರ್ಕ್‌ಶಾಪ್ ಪೇಪರ್ಸ್: ಯುನೈಟೆಡ್ ನೇಷನ್ ಎಜುಕೇಷನಲ್, ಸೈಂಟಿಫಿಕ್ ಆ್ಯಂಡ್ ಕಲ್ಚರಲ್ ಆರ್ಗನೈಜೇಶನ್, ಯುನಿಎಸ್‌ಸಿಒ, ನ್ಯೂ ಡೆಲ್ಲಿ. ಪು. ೧೩೫-೧೪೧.

ಕಬೀರ್ ಎನ್., ೧೯೯೪, ಜಂಡರ್-ಅವೇರ್ ಪಾಲಿಸಿ ಪ್ಲಾನಿಂಗ್: ಎ ಸೋಶಿಯಲ್ ರಿಲೇಶನ್ಸ್ ಪರ್‌ಸ್ಪೆಕ್ಟಿವ್ಸ್. ಇನ್ ಎಂ. ಮ್ಯಾಕ್ ಡೊನಾಲ್ಡ್(ಇಡಿ) ಜಂಡರ್ ಪ್ಲಾನಿಂಗ್ ಇನ್ ಡೆವಲ್‌ಪ್‌ಮೆಂಟ್ ಏಜೆನ್ಸಿ: ಆಕ್ಸ್‌ಫ್ಯಾಮ್: ಆಕ್ಸ್‌ಫರ್ಡ್, ಪು. ೮೦-೯೭

ಗಾರ್ಡ್ನರ್ ಕೆ. ಆ್ಯಂಡ್ ಲೂಯಿಸ್ ಡಿ., ೧೯೯೬, ಆ್ಯನ್ಥ್ರೋಪಾಲಜಿ ಡೆವಲಪ್‌ಮೆಂಟ್ ಆ್ಯಂಡ್ ದ ಪೋಸ್ಟ್ ಮಾರ್ಡನ್ ಚಾಲೆಂಜ್: ಪ್ಲೂಟೊ ಪ್ರೆಸ್, ಯುಕೆ. ಪು. ೪೨-೮೯.

ಗ್ರೇ ಇ. ಡಿ., ೧೯೮೨, ಪೆಟ್ರಿಯಾರ್ಕಿ ಅಸ್ ಅ ಕನ್ಸೆಪ್ಚುವಲ್ ಟ್ರಾಪ್. ಮ್ಯಾಸಚೂಸೆಟ್ಸ್: ರೌಂಡ್ಟೇಬಲ್ ಪ್ರೆಸ್, ವೆಲೆಸ್ಲಿ, ಪು. ೧೬೭.

ಘೋರೈಶಿ ಪಿ. ಮತ್ತು ಬೆಲಾಂಜರ್ ಸಿ., ೧೯೯೬, ವುಮನ್, ವರ್ಕ್ ಆ್ಯಂಡ್ ಜಂಡರ್ ರಿಲೇಷನ್ಸ್ ಇನ್ ಡೆವಲಪಿಂಗ್ ಕಂಟ್ರಿಸ್: ಎ ಗ್ಲೋಬಲ್ ಪರ್ಸ್‌ಪೆಕ್ಟಿವ್: ಗ್ರೀನ್‌ವುಡ್ ಪ್ರೆಸ್, ಕನೆಕ್ಟಿಕಟ್, ಪು. ೯೨.

ಚಾಂಟ್ ಎಸ್ ಮತ್ತು ರಾಡ್‌ಕ್ಲಿಫ್ ಎಸ್., ೧೯೯೨, ಮೈಗ್ರೇಶನ್ ಆ್ಯಂಡ್ ಡೆವಲಪ್ಮೆಂಟ್: ದ ಇಂಪಾರ್ಟನ್ಸ್ ಆಫ್ ಜಂಡರ್ ಇನ್ ಜಂಡರ್ ಆ್ಯಂಡ್ ಮೈಗ್ರೇಶನ್ ಇನ್ ಡೆವಲಪಿಂಗ್ ಕಂಟ್ರಿಸ್: ಬೆಲ್ಹೇವನ್ ಪ್ರೆಸ್, ಲಂಡನ್ ಆ್ಯಂಡ್ ನ್ಯೂಯಾರ್ಕ್, ಪು. ೮೭.

ಚಾಂಟ್ ಎಸ್., ೧೯೯೨, ಜಂಡರ್ ಆ್ಯಂಡ್ ಮೈಗ್ರೇಶನ್ ಇನ್ ಡೆವಲಪಿಂಗ್ ಕಂಟ್ರೀಸ್: ಬೆಲ್ಹೇವನ್ ಪ್ರೆಸ್, ಲಂಡನ್, ಪು. ೭೭.

ಚಾಂಟ್ ಎಸ್ ಮತ್ತು ಗುಟ್ಮನ್ ಎಮ್., ೨೦೦೦, ಮೇನ್‌ಸ್ಟ್ರೀಮಿಂಗ್ ಮೆನ್ ಇನ್‌ಟು ಜಂಡರ್ ಆ್ಯಂಡ್ ಡೆವಲಪ್‌ಮೆಂಟ್: ಡಿಬೆಟ್ಸ್, ರಿಫ್ಲೆಕ್ಷನ್ ಆ್ಯಂಡ್ ಎಕ್ಸ್‌ಪೀರಿಯನ್ಸ್. ಆಕ್ಸ್‌ಫರ್ಡ್: ಆಕ್ಸ್‌ಫ್ಯಾಮ್. ಪು. ೬೩.

ಜಸ್ಪಿನಾ ಡುಗ್ಬಾಜಾ, ೨೦೧೨, ಜಂಡರ್, ಲೈವಲಿಹುಡ್ ಆ್ಯಂಡ್ ಮೈಗ್ರೇಶನ್ ಇನ್ ಆಫ್ರಿಕಾ: ಕ್ಲಿಬ್ರಿಸ್, ಕಾರ್ಪ್, ಪು. ೫–೪೫.

ಜಾಕ್ಸನ್ ಸಿ. ಆ್ಯಂಡ್ ಪಿಯರ್ಸನ್ ಆರ್, ೧೯೯೮, ಫೆಮಿನಿಷ್ಟ ವಿಜನ್ ಆಫ್ ಡೆವಲಪ್‌ಮೆಂಟ್: ಜಂಡರ್ ಅನಾಲಿಸಿಸ್ ಆ್ಯಂಡ್ ಪಾಲಿಸಿ: ರೂಟ್ಲೆಡ್ಜ್, ನ್ಯೂಯಾರ್ಕ್, ಪು.೩೩–೧೫೭.

ಜೆಲಿನ್ಸ್ಕಿ, ವಿಲ್ಬರ್, ೧೯೭೧, ದಿ ಹೈಪೋಥಿಸಿಸ್ ಆಫ್ ದಿ ಮೊಬಿಲಿಟಿ ಟ್ರಿನ್ಸಿಶನ್: ಜಿಯಾಗ್ರಫಿಕಲ್ ರಿವ್ಯೂ ೬೧(೨) ಪು. ೨೧೯–೨೪೯.

ಟಕೋಲಿ ಸಿ. ಮತ್ತು ಸ್ಯಾಟರ್ತ್‌ವೈಟ್ ಡಿ., ೨೦೦೩, ದ ಅರ್ಬನ್ ಪಾರ್ಟ್ ಆಫ್ ರೂರಲ್ ಡೆವಲಪ್‌ಮೆಂಟ್: ದ ರೋಲ್ ಆಫ್ ಸ್ಮಾಲ್ ಆ್ಯಂಡ್ ಇಂಟರ್‌ಮಿಡಿಯೇಟ್ ಅರ್ಬನ್ ಸೆಂಟರ್ಸ್ ಇನ್ ರೂರಲ್ ಆ್ಯಂಡ್ ರೀಜನಲ್ ಡೆವಲಪ್‌ಮೆಂಟ್ ಆ್ಯಂಡ್ ಪಾವರ್ಟಿ ರಿಡಕ್ಷನ್. ವರ್ಕಿಂಗ್ ಪೇಪರ್ ೯, ರೂರಲ್–ಅರ್ಬನ್ ಇಂಟರ್‍ಯಾಕ್ಷನ್ ಸಿರೀಸ್, ಐಐಇಡಿ, ಲಂಡನ್ ಪು. ೩೭.

ಟ್ವಾಮಾಸಿ–ಅಂಕ್ರಾ ಕೆ. ೧೯೯೫, ರೂರಲ್–ಅರ್ಬನ್ ಮೈಗ್ರೇಶನ್ ಆ್ಯಂಡ್ ಸೋಸಿಯೋ ಎಕಾನಿಮಿಕ್ ಡೆವಲಪ್‌ಮೆಂಟ್ ಇನ್ ಘಾನಾ: ಸಮ್ ಡೀಸ್ಕಶನ್ಸ್, ಜರ್ನಲ್ ಆಪ್ ಸೋಸಿಯಲ್ ಡೆವಲಪ್‌ಮೆಂಟ್ ಇನ್ ಆಫ್ರಿಕಾ ೧೦(೨) ಪು. ೧೩–೨೨.

ಡ್ಯಾಂಗ್ ಎನ್., ಟಕೋಲಿ ಸಿ. ಮತ್ತು ಹೊವಾಂಗ ಎಕ್ಸ್., ೨೦೦೩, ವಿಯಟ್ನಾಂ: ಅ ರಿವ್ಯೂ ಆಫ್ ಇನ್ಫಾರ್ಮೇಶನ್ ಆನ್ ಕರೆಂಟ್ ಟ್ರೆಂಡ್ಸ್ ಆ್ಯಂಡ್ ಪ್ಯಾಟರ್ನ್ಸ್ ಆ್ಯಂಡ್ ದೆಯರ್ ಪಾಲಸಿ ಇಂಪ್ಲಿಕೇಶನ್: ಪೇಪರ್ ಪ್ರಿಪೇರ್ಡ್ ಫಾರ್ ಡಿಎಫ್‌ಐಡಿ, ಲಂಡನ್. ಪು. ೫೬.

ಡಿ. ಹಾನ್ ಎ., ೨೦೦೦ ಮೈಗ್ರೇಟ್ಸ್, ಲೈವಲಿಹುಡ್ ಆ್ಯಂಡ್ ರ್‍ಯಾಟ್ಸ್: ದ ರೆಲೆವನ್ಸ್ ಆಫ್ ಮೈಗ್ರೇಶನ್ ಇನ್ ಡೆವಲಪ್‌ಮೆಂಟ್ ಪಾಲಸಿಸ್, ಸೋಶಿಯಲ್ ಡೆವಲಪ್‌ಮೆಂಟ್: ಡಿಪಾರ್ಟ್‌ಮೆಂಟ್ ಫಾರ್ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್, ಲಂಡನ್, ವರ್ಕಿಂಗ್ ಪೇಪರ್ ನಂ.೪. ಪು. ೧೭.

ಧ್ರಿ, ಜಿ., ೧೯೯೫ ಎನ್‌ಜಂಡರಿಂಗ್ ಡೆವಲಪ್‌ಮೆಂಟ್? ವುಮನ್ ಇನ್ ಡೆವಲಪ್‌ಮೆಂಟ್ ಇನ್ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್ ರಿಜೀಮ್ಸ್: ಇನ್ ಫೆಮಿನಿಸಮ್ / ಪೋಸ್ಟ್‌ಮಾಡರ್ನಿಸ್ಮ್ /ಡೆವಲಪ್‌ಮೆಂಟ್: ರೂಟ್‌ಲೆಡ್ಜ್, ನ್ಯೂಯಾರ್ಕ್, ಪು. ೯೪.

ದೇಸಾಯಿ ವಿ. ಆ್ಯಂಡ್ ಪಾಟರ್, ಆರ್(ಇಡಿ), ೨೦೦೨, ದಿ ಕಂಪ್ಯಾನಿಯನ್ ಟು ಡೆವಲಪ್‌ಮೆಂಟ್ ಸ್ಟಡೀಸ್: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ಪು೧೨೬–೧೭೪.

ಪಾಮರ್ ಐ., ೧೯೮೮, ದಿ ಇಂಪ್ಯಾಕ್ಟ್ ಆಫ್ ಮೇಲ್ ಓಟ್–ಮೈಗ್ರೇಶನ್ ಆನ್ ವುಮನ್ ಇನ್ ಫಾರ್ಮಿಂಗ್–ವುಮನ್ಸ್ ರೋಲ್ಸ್ ಆ್ಯಂಡ್ ಜೆಂಡರ್ ಡಿಫರೆನ್ಸ್ ಇನ್ ಡೆವಲಪ್ಮೆಂಟ್: ಕೇಸ್ ಫಾರ್ ಪ್ಲಾನರ್ಸ್. ಕುಮರಿಯನ್ ಪ್ರೆಸ್, ವೆಸ್ಟ್ ಹಾರ್ಟ್‌ಫೋರ್ಡ್, ಪು. ೩.

ಫರ್ನಾಂಡೀಸ್–ಕೆಲ್ಲಿ ಎಮ್., ೧೯೯೧, ದ ಸೆಕ್ಸುವಲ್ ಡಿವಿಜನ್ ಆಫ್ ಲೇಬರ್, ಡೆವಲಪ್‌ಮೆಂಟ್, ಆ್ಯಂಡ್ ವುಮನ್ ಸ್ಟೇಟಸ್: ಕರೆಂಟ್ ಅಂಥ್ರೊಪಾಲಜಿ ೨೨(೪), ಪು. ೪೧೪–೪೧೯.

ಫಿಷರ್ ಪಿ., ಮಾರ್ಟಿನ್ ಆರ್. ಆ್ಯಂಡ್ ಸ್ಟ್ರಾಬಾರ್ ಟಿ., ೧೯೯೭, ಇಂಟರ್‌ಡಿಫೆಂಡನ್ಸ್ ಬಿಟ್ವೀನ್ ಡೆವಲಪ್‌ಮೆಂಟ್ ಆ್ಯಂಡ್ ಇನ್ ಇಂಟರ್‌ನ್ಯಾಷನಲ್ ಮೈಗ್ರೇಶನ್, ಇಮ್ಮೊಬಿಲಿಟಿ ಆ್ಯಂಡ್ ಡೆವಲಪ್‌ಮೆಂಟ್: ಮಲ್ಟಿಡಿಸಿಪ್ಲಿನರಿ ಪರ್ಸ್‌ಪೆಕ್ಟಿವ್ ಆಕ್ಸ್‌ಫರ್ಡ್: ಬರ್ಗ್, ಪು. ೯೧–೧೩೨.

ಬುವಿನಿಕ್ ಎಮ್., ಲೈಸೆಟ್ ಎ. ಆ್ಯಂಡ್ ವಿಲಿಯಂ ಪಿ., ೧೯೮೩, ವುಮೆನ್ ಆ್ಯಂಡ್ ಪಾವರ್ಟಿ ಇನ್ ದ ಥರ್ಡ್ ವರ್ಲ್ಡ್: ಜಾನ್ ಹಾಪ್ಕಿನ್ಸ್ ಯೂನಿವರ್ಸಿಟಿ ಪ್ರೆಸ್, ಬಾಲ್ಟಿಮೋರ್ ಪು. ೧೩೭–೧೫೮.

ಬ್ರೈಡಾನ್ ಎಲ್. ಆ್ಯಂಡ್ ಚಾಂಟ್ ಎಸ್., ೧೯೮೯, ವುಮನ್ ಇನ್ ದ ಥರ್ಡ್ ವರ್ಲ್ಡ್: ಜಂಡರ್ ಇಶ್ಯೂಸ್ ಇನ್ ರೂರಲ್ ಆಂಡ್ ಅರ್ಬನ್ ಏರಿಯಾಸ್, ಎಡ್ವರ್ಡ್ ಎಲ್ಗರ್ ಪಬ್ಲಿಷಿಂಗ್, ಪು. ೪೧೭.

ಬೋಸ್ತರಪ್ ಇ., ೧೯೭೦, ವುಮನ್ಸ್ ರೋಲ್ ಇನ್ ಎಕನಾಮಿಕ್ ಡೆವಲಪ್‌ಮೆಂಟ್: ಜಾರ್ಜ್ ಅಲೆನ್ ಉರ್ವಿನ್, ಲಂಡನ್, ಪು. ೧೩೮–೧೪೮.

ಮ್ಯಾಕ್ಡೊನಾಲ್ಡ್ ಎಮ್.(ಇಡಿ), ೧೯೯೪, ಜಂಡರ್ ಪ್ಲಾನಿಂಗ್ ಇನ್ ಡೆವಲಪ್‌ಮೆಂಟ್ ಏಜೆನ್ಸಿ: ಆಕ್ಸ್‌ಫರ್ಡ್, ಆಕ್ಸ್‌ಫ್ಯಾಮ್, ಪು. ೮೦–೯೭.

ಮುರ್ರೆ ಸಿ., ೧೯೮೧, ಫ್ಯಾಮಿಲೀಸ್ ಡಿವೈಡೆಡ್: ದಿ ಇಂಪ್ಯಾಕ್ಟ್ ಆಫ್ ಮೈಗ್ರೆಂಟ್ ಲೇಬರ್ ಇನ್ ಲೆಸೊಥೊ: ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಕೇಂಬ್ರಿಡ್ಜ್, ಪು. ೩೧೮.

ಮೆಗರ್ ಕೆ., ದಿ ಇನ್ವೆಷನ್ ಆಫ್ ದಿ ಆಪರ್ಚುನಿಟಿ ಸ್ನ್ಯಾಚರ್ಸ್: ದಿ ರೂರಲ್–ಅರ್ಬನ್ ಇಂಟರ್ಫೇಸ್ ಇನ್ ನಾರ್ದರ್ನ್ ನೈಜೀರಿಯಾ, ಜರ್ನಲ್ ಆಫ್ ಕಾಂಟೆಂಪರರಿ ಆಫ್ರಿಕನ್ ಸ್ಟಡೀಸ್ ೧೯(೧), ಪು. ೩೯–೫೪.

ಮೋಸರ್ ಸಿ., ೧೯೯೩, ಜಂಡರ್ ಪ್ಲಾನಿಂಗ್ ಆ್ಯಂಡ್ ಡೆವಲಪ್‌ಮೆಂಟ್: ಥಿಯರಿ, ಪ್ರಾಕ್ಟಿಸ್ ಆ್ಯಂಡ್ ಟ್ರೈನಿಂಗ್: ರೂಟ್‌ಲೆಡ್ಜ್, ಲಂಡನ್, ಪು. ೧೭೮–೨೧೩.

ಯುಎನ್, ೧೯೯೪, ಮೈಗ್ರೇಶನ್ ಆ್ಯಂಡ್ ದ ಫ್ಯಾಮಿಲಿ, ಯುಎನ್, ವಿಯೆನ್ನಾ, ಆಕೇಸನ್ ಪೇಪರ್ ಸೀರಿಸ್, ನಂ.೧೪, ಪು. ೯.

ರವೆನ್ಸ್ಟೀನ್, ೧೮೮೯, ದಿ ಲಾಸ್ ಆಫ್ ಮೈಗ್ರೇಶನ್, ಜರ್ನಲ್ ಆಫ್ ದಿ ರಾಯಲ್ ಸ್ಟ್ಯಾಟಿಸ್ಟಿಕಲ್ ಸೊಸೈಟಿ, ವಾಲ್ಯೂಮ್.೫೨, ನಂ.೨ (ಜೂನ್), ಪು. ೨೪೧–೩೦೫.

ರಾಥ್‌ಜೆಬರ್ ಇ., ೧೯೯೨, ರಿಪೋರ್ಟ್ ಟು ದ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್ ರಿಸರ್ಚ್ ಸೆಂಟರ್(ಐಡಿಆರ್ಸಿ). ಪು. ೪೮–೧೧೬.

ವರ್ಲ್ಡ್ ಬ್ಯಾಂಕ್, ೨೦೦೧, ವರ್ಲ್ಡ್ ಡೆವಲಪ್‌ಮೆಂಟ್ ರಿಪೋರ್ಟ್– ಅಟ್ಯಾಕಿಂಗ್ ಪಾವರ್ಟಿ: ಆರ್ಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್ ಪು. ೩೩೫.

ವಂದನಾ ಶಿವ(ಮೂಲ) ಮಾಧವ ಐತಾಳ(ಕನ್ನಡಕ್ಕೆ), ೨೦೦೫, ಬತ್ತದ ಚಿಲುಮೆ: ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು. ೨.

ಸಿಲ್ವಿಯಾ ಚಾಂಟ್, ೧೯೯೨, ಮೈಗ್ರೇಶನ್ ಆ್ಯಂಡ್ ಡೆವಲಪ್‌ಮೆಂಟ್: ದ ಇಂಪಾರ್ಟೆನ್ಸ್ ಆಫ್ ಜಂಡರ್: ಬೆಲ್ಹೇವನ್ ಪ್ರೆಸ್, ಲಂಡನ್ ಆ್ಯಂಡ್ ನ್ಯೂಯಾರ್ಕ್, ಪು. ೭೨.

ಹಾರ್ಡಿಂಗ್ ಎಸ್(ಇಡಿ), ೧೯೮೭, ಫೆಮಿನಿಸಂ ಆ್ಯಂಡ್ ಮೆಥಡಾಲಜಿ: ಓಪನ್ ಯೂನಿವರ್ಸಿಟಿ ಪ್ರೆಸ್, ಮಿಲ್ಟನ್ ಕೇನ್ಸ್, ಪು. ೮೧–೯೦.

ಹಾರ್ಕೋರ್ಟ್ ಡಬ್ಲ್ಯೂ(ಇಡಿ), ೧೯೯೪, ಫೆಮಿನಿಸ್ಟ್ ಪರ್ಸ್ಪೆಕ್ಟಿವ್ ಆನ್ ಸಸ್ಟೆನಬಲ್ ಡೆವಲಪ್‌ಮೆಂಟ್: ಜೆಡ್ ಬುಕ್ಸ್ ಇನ್ ಅಸೋಸಿಯೆಷನ್ ವಿಥ್ ದ ಸೊಸೈಟಿ ಫಾರ್ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್, ಯುಕೆ, ಲಂಡನ್. ಪು. ೧೯–೯೦.

ಹ್ಯಾರಿಸ್ ಜೆ. ಆರ್. ಮತ್ತು ಟೊಡಾರೊ ಎಂ.ಪಿ. ೧೯೭೦, ಮೈಗ್ರೇಶನ್, ಅನ್‌ಎಂಪ್ಲಾಯ್‌ಮೆಂಟ್ ಆ್ಯಂಡ್ ಡೆವಲಪ್‌ಮೆಂಟ್: ಎ ಟು ಸೆಕ್ಟರ್ ಅನಾಲಿಸಿಸ್. ದ ಅಮೆರಿಕನ್ ಎಕಾನಿಮಿಕ್ ರಿವ್ಯೂ, ೬೦(೧), ಪು. ೧೨೬–೧೪೨.

ಹೆಲೆನ್ ಗಿನ್ ಡೌಘರ್ಟಿ, ೧೯೯೫, ಆನ್ ಇಂಟ್ರೊಡಕ್ಷನ್ ಟು ಪಾಪ್ಯುಲೇಶನ್: ದಿ ಗಿಲ್ಫೋರ್ಡ್ ಪ್ರೆಸ್, ನ್ಯೂಯಾರ್ಕ್. ಪು. ೧೧೪–೧೧೬.

# ಅಧ್ಯಾಯ ನಾಲ್ಕು

# ವಲಸೆ : ಗುಣಲಕ್ಷಣಗಳು ಮತ್ತು ಪ್ರೇರಕಾಂಶಗಳು

ವಲಸೆ ಮನೆಗಳ ಗುಣಲಕ್ಷಣಗಳಾದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳ ಜೊತೆಗೆ ಕುಟುಂಬದ ಒಳಗಿನ ಕ್ರಿಯಾತ್ಮಕ ಅಂಶಗಳಾದ ಲಿಂಗ ಸಾಮಾಜೀಕರಣ, ಅಧಿಕಾರ ಸಂಬಂಧ, ಶ್ರಮವಿಭಜನೆ ಮತ್ತು ಸಂಪನ್ಮೂಲಗಳ ಲಭ್ಯತೆಯಂತಹ ಸಂಗತಿಗಳ ಹಿನ್ನೆಲೆಯಲ್ಲಿ ವಲಸೆ ಮತ್ತು ಜೀವನೋಪಾಯದ ನಡುವಿನ ಸಂಬಂಧವನ್ನು ವಿಶ್ಲೇಷಣೆ ಮಾಡಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

## ೪.೧. ಸಾಮಾಜಿಕ ನೆಲೆಗಳು

ಈ ಅಧ್ಯಯನದ ವಕ್ತೃಗಳು ಮನೆಯ ಮುಖ್ಯಸ್ಥರು ಮತ್ತು ಅವರ ಸಂಗಾತಿಗಳು ಹಾಗೂ ವಲಸೆ ಹೋದ ಕುಟುಂಬದ ಅಧಿಕೃತ ಪ್ರತಿನಿಧಿಗಳಾಗಿದ್ದಾರೆ. ಈ ಪ್ರದೇಶದಲ್ಲಿ ಪಿತೃಪ್ರಭುತ್ವದ ಕುಟುಂಬಗಳು ಅಧಿಕ. ಹೀಗಾಗಿ ಮಹಿಳಾ ಮುಖ್ಯಸ್ಥರ ಮನೆಗಳನ್ನು ಪುರುಷ ಮುಖ್ಯಸ್ಥರ ಮನೆಗಳ ಸಂಖ್ಯೆಯಷ್ಟೇ ಅಧ್ಯಯನ ಮಾಡಬೇಕಾಗಿರುವುದರಿಂದ ಮಹಿಳಾ ಮುಖ್ಯಸ್ಥರ ಮನೆಗಳನ್ನು ಪತ್ತೆ ಹಚ್ಚುವುದು ಸ್ವಲ್ಪ ಕಷ್ಟವಾಯಿತು. ಆದರೂ ಮಹಿಳಾ ಮುಖ್ಯಸ್ಥರ ಮನೆಗಳು ಇರುವುದನ್ನು ಗುರುತಿಸಲಾಗಿದೆ. ಅವನ್ನು ಪ್ರತಿ ತಾಲೂಕಿನಿಂದ ೫ ಗ್ರಾಮ ಪಂಚಾಯಿತಿಗಳನ್ನು ಆಯ್ಕೆ ಮಾಡಿ, ಅದರ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಂದ ವಲಸೆ ಹೋದ ಕುಟುಂಬದವರ ಪ್ರಾಥಮಿಕ ಮಾಹಿತಿಯನ್ನು ಪಡೆಯಲು ಸ್ನೋಬಾಲ್ ನಮೂನೆ ಆಯ್ಕೆಯನ್ನು ಮಾಡಲಾಗಿದೆ. ಒಟ್ಟು ೨೦೦ ಮಹಿಳಾ ಮುಖ್ಯಸ್ಥ ಮನೆಗಳು ಮತ್ತು ೨೦೦ ಪುರುಷ ಮುಖ್ಯಸ್ಥ ಮನೆಗಳಿಂದ ಅಂದರೆ ಒಟ್ಟು ೪೦೦ ವಕ್ತೃಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಅಧ್ಯಯನದ ಒಟ್ಟು ವಕ್ತೃಗಳಲ್ಲಿ ೨೩೫(೫೮.೭೫%) ಮಂದಿ ಬಳ್ಳಾರಿ ಜಿಲ್ಲೆಯಲ್ಲಿ ಜನಿಸಿದವರು, ಉಳಿದ ೧೬೫(೪೧.೨೫%) ಜನರು ಬೇರೆ ಪ್ರದೇಶದಲ್ಲಿ ಜನಿಸಿ, ಬೇರೆ ಕಾರಣಗಳಿಂದ ಇಲ್ಲಿ ನೆಲೆಸಿದವರು. ಈ ಅಧ್ಯಯನದಲ್ಲಿ ವಯಸ್ಕ, ಮಧ್ಯ, ಹಿರಿಯ, ಮಹಿಳಾ ಮುಖ್ಯಸ್ಥ ಮನೆಗಳು ಇವೆ. ಮಹಿಳಾ ಮುಖ್ಯಸ್ಥ ಮನೆಗಳು ಎಂದರೆ ದೇವದಾಸಿ, ವಿಧವೆ, ವಿಚ್ಛೇದಿತರು, ಗಂಡನಿಂದ ದೂರವಿರುವವರು, ಒಬ್ಬಂಟಿಗರಾಗಿದ್ದು ಸಹಮತದ

ಸಂಬಂಧದಲ್ಲಿ ಜೀವನ ನಡೆಸುತ್ತಿರುವವರು, ಮನೆಗಳ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವವರು ಎಂದು ವ್ಯಾಖ್ಯಾನಿಸದೆ ವರ್ಷದಲ್ಲಿ ಅರ್ಧಕ್ಕೂ ಹೆಚ್ಚು ಕಾಲ ವಿವಾಹವಾದ ಪತಿ ಅಥವಾ ಗಂಡಸು ವಾಸಿಸುವ ಮನೆಯಿಂದ ಕೆಲಸ ಅಥವಾ ದುಡಿಮೆಗೋಸ್ಕರ ಮನೆಯಿಂದ, ಹೆಂಡತಿ ಮಕ್ಕಳಿಂದ ದೂರವಿರುತ್ತಾರೆ. ಅಂತಹ ಮನೆಗಳು ಸಹ ಮಹಿಳಾ ಮುಖ್ಯಸ್ಥ ಮನೆಗಳು ಎಂದು ವ್ಯಾಖ್ಯಾನಿಸಲಾಗಿದೆ. ವಕ್ತೃಗಳಲ್ಲಿ ಹೆಚ್ಚಿನವರು ಅದೇ ಜಾತಿ ಮತ್ತು ವರ್ಗದಲ್ಲಿಯೇ ವಿವಾಹವಾಗಿದ್ದಾರೆ. ಏಕಪತಿ/ಪತ್ನಿಯರನ್ನು ಹೊಂದಿದ್ದಾರೆ. ೧೩(೬.೫%) ಜನ ಪುರುಷರು ಮಾತ್ರ ಇಬ್ಬರು ಹೆಂಡತಿಯರನ್ನು ಹೊಂದಿದ್ದು, ೦೬(೩%) ಜನ ಪುರುಷರು ಬೇರ್ಪಟ್ಟವರು ಅಥವಾ ಅನೌಪಚಾರಿಕವಾಗಿ ವಿಚ್ಛೇದನೆಯನ್ನು ಪಡೆದಿದ್ದಾರೆ. ೪೮(೨೪%) ಮಹಿಳಾ ಮುಖ್ಯಸ್ಥ ಮನೆಗಳಲ್ಲಿ ಸ್ವಂತ ಜೀವನ ನಡೆಸುವವರ ಸಂಖ್ಯೆ ಹೆಚ್ಚಾಗಿದ್ದು ೪೦(೨೦%) ಆಗಿದೆ, ೬(೩%) ಮಹಿಳೆಯರ ವೈವಾಹಿಕ ಸ್ಥಿತಿ ಡೋಲಾಯಮಾನವಾಗಿದೆ. ಅಂದರೆ ಬೇರೆ ಬೇರೆ ಕಾರಣಗಳಿಗಾಗಿ ಇವರು ತಮ್ಮ ಗಂಡನ ಜೊತೆಗೆ ಜೀವನ ನಡೆಸುತ್ತಿಲ್ಲ, ಅದಕ್ಕೆ ಕುಡಿತದ ಚಟ, ಕೌಟುಂಬಿಕ ಹಿಂಸೆ, ನಿರಂತರ ದುಡಿಮೆ ಇಲ್ಲದೆ ಇರುವುದು ಕಾರಣಗಳಾಗಿವೆ. ೮೧(೪೦.೫%) ಮಹಿಳೆಯರು ವಿಧವೆಯರು, ೨೩(೧೧.೫%) ಮಹಿಳೆಯರು ತಮ್ಮ ಮಕ್ಕಳ ಜೊತೆಗೆ ಜೀವನ ಸಾಗಿಸುತ್ತಿದ್ದಾರೆ, ಇನ್ನು ೪೮(೨೪%) ಮಹಿಳೆಯರು ಹಿರಿಯರಾಗಿದ್ದು ಮನೆಯ ಮುಖ್ಯಸ್ಥರಾಗಿ ಕಾರ್ಯ ನಿರ್ವಹಿಸುವುದು ಕಂಡುಬರುತ್ತದೆ.

**ಕುಟುಂಬ**

ಬ್ರೈಡನ್ ಮತ್ತು ಚಾಂಟ್ ಹೇಳುವಂತೆ "ಕುಟುಂಬ ಎಂದರೆ ವಾಸ ಮಾಡಲು ಇರುವ ಒಂದು ಪ್ರದೇಶ ಅಥವಾ ಆಹಾರ ಸೇವನೆಗೆ ಇರುವ ಒಂದು ಸ್ಥಳ ಇವುಗಳಲ್ಲಿ ಯಾವುದಾದರೊಂದನ್ನು ಒಳಗೊಳ್ಳಬಹುದು. ಗ್ರಾಮೀಣ ಕೃಷಿ ಕುಟುಂಬಗಳ ಲಕ್ಷಣಗಳಲ್ಲಿ ಕೌಟುಂಬಿಕ ಸಂಬಂಧಗಳು ಗಟ್ಟಿಯಾಗಿರುವುದನ್ನು ಕಾಣಬಹುದು. ಹಾಗೆಯೇ ವಾಸ ಸ್ಥಳ ಮತ್ತು ಮನೆ ಹಾಗೂ ಆಸ್ತಿ ಪರಂಪರೆಯಿಂದ ಬಂದಿವೆ. ಕುಟುಂಬದ ಅಧಿಕಾರ ಸಂರಚನೆಯಲ್ಲಿ ಉತ್ಪಾದನೆ, ಮರುಉತ್ಪಾದನೆ ಸಂಗತಿಗಳು ಇವೆ. ಅದರ ರಚನೆ ಮತ್ತು ರಕ್ತಸಂಬಂಧಗಳಲ್ಲಿ ವ್ಯತ್ಯಾಸಗಳು ಇವೆ"(ಬ್ರೈಡಾನ್ ಎಲ್. ಆ್ಯಂಡ್ ಚಾಂಟ್ ಎಸ್., ೧೯೮೯, ಪು.೪೧೭).

ಈ ಪ್ರದೇಶದ ಗ್ರಾಮೀಣ ಮನೆಗಳು ನಗರ ಪ್ರದೇಶಗಳಲ್ಲಿ ಕಂಡುಬರುವಂತೆ ಊಟ ಮಾಡಲು, ನಿದ್ರೆ ಮಾಡಲು, ಅಡುಗೆ ಮಾಡಲು, ಬೇರೆಯವರು/ಅಪರಿಚಿತರು ಅತಿಥಿಗಳು

ಬಂದಾಗ ಮಾತನಾಡಿಸಲು ಬೇರೆ-ಬೇರೆ ಕೋಣೆಗಳನ್ನು ಹೊಂದಿರುವುದಿಲ್ಲ, ಇರುವ ಕೋಣೆಗಳಲ್ಲಿಯೇ ಹಂಚಿಕೊಂಡಿರುತ್ತವೆ. ಕುಟುಂಬವೆಂದರೆ ರಕ್ತ ಸಂಬಂಧ ಅಥವಾ ಮದುವೆ ಮೂಲಕ ಮಾಡಿಕೊಂಡ ಸಂಬಂಧವಾಗಿದೆ. ಅಂತಹ ಕುಟುಂಬಗಳು ಒಂದೇ ಸೂರಿನಡಿಯಲ್ಲಿ ವಾಸಿಸುತ್ತವೆ. ಪ್ರತಿ ದಂಪತಿಗಳಿಗೆ ಪ್ರತ್ಯೇಕ ಕೋಣೆಗಳು ಇರುವುದಿಲ್ಲ. ಒಬ್ಬ ದಂಪತಿ ಅಡುಗೆ ಮನೆಯಲ್ಲಿ, ಇನ್ನೊಬ್ಬ ದಂಪತಿ ನಡುಮನೆಯ ಕೋಣೆಗಳನ್ನು ಹಂಚಿಕೊಂಡಿರುತ್ತಾರೆ ಹೊರತು ಪ್ರತ್ಯೇಕವಾಗಿರುವುದಿಲ್ಲ. ಅವರು ಎಲ್ಲರನ್ನು ಕುಟುಂಬದ ಭಾಗವೆಂದು ಭಾವಿಸಿಕೊಂಡಿರುತ್ತಾರೆ. ಅವರ ನಡುವೆ ಸಹಾಯ-ಸಹಕಾರ, ಕೊಡು-ಕೊಳ್ಳುವಿಕೆಗಳು ನಡೆದೇ ಇರುತ್ತವೆ. ಆ ಕುಟುಂಬದ ಶಿಕ್ಷಿತರು ಹಣದ ಮೌಲ್ಯ ತರುವ ಕೆಲಸಗಳನ್ನು ಮಾಡುತ್ತಿರುವರು. ಉದಾಹರಣೆಗೆ ನರ್ಸ್, ಶಿಕ್ಷಕರು ಆ ಪ್ರದೇಶದಲ್ಲಿಯೇ ತಮ್ಮ ದೂರದ ಸಂಬಂಧಿಗಳ ಮನೆಯನ್ನು ಬಾಡಿಗೆ ಪಡೆದು ಅಲ್ಲಿಯೇ ವಾಸಿಸುತ್ತಿರುವರು. ಈ ಪ್ರದೇಶದ ಪುರುಷ ಮತ್ತು ಮಹಿಳಾ ಮುಖ್ಯಸ್ಥ ಮನೆಗಳನ್ನು ವಿಂಗಡಿಸಿ ನೋಡಬೇಕಾಗಿದೆ.

**ಪುರುಷ ಮುಖ್ಯಸ್ಥ ಕುಟುಂಬಗಳು**

ಬಳ್ಳಾರಿ ಜಿಲ್ಲೆಯಾದ್ಯಂತ ಪುರುಷ ಮುಖ್ಯಸ್ಥರ ಕುಟುಂಬಗಳಿರುವುದನ್ನು ಕಾಣಬಹುದು. ಇಲ್ಲಿ ಪಿತೃಪ್ರಧಾನತೆ, ಪಿತೃಸಂಸ್ಕೃತಿ, ಪಿತೃಪ್ರಭುತ್ವ ಕಂಡುಬರುತ್ತದೆ. ಕುಟುಂಬಗಳನ್ನು ಅವಿಭಕ್ತ, ವಿಭಕ್ತ ಮತ್ತು ವಿಸ್ತೃತ ಕುಟುಂಬಗಳು ಎಂಬ ವರ್ಗೀಕರಣದಿಂದ ನೋಡುವುದಾದರೂ ಗ್ರಾಮೀಣ ಪ್ರದೇಶದಲ್ಲಿ ಅವಿಭಕ್ತ ಕುಟುಂಬಗಳು ಮತ್ತು ವಿಸ್ತೃತ ಕುಟುಂಬಗಳು ಕಾಣಸಿಗುತ್ತವೆ. ಆದರೆ ವಲಸೆ ಹೋದ ಸದಸ್ಯರ ಹೆಚ್ಚಿನ ಕುಟುಂಬಗಳು ಅವಿಭಕ್ತ ಮತ್ತು ವಿಸ್ತೃತ ಕುಟುಂಬಗಳಾಗಿವೆ. ವಿಭಕ್ತ ಕುಟುಂಬದ ಏಕಮಾತ್ರ ಸದಸ್ಯರು ಮಾತ್ರ ವಲಸೆ ಹೋಗುವುದು ಕಡಿಮೆ. ಅವರು ವಲಸೆ ಹೋದರೆ ಇಡೀ ಕುಟುಂಬವೇ ವಲಸೆ ಹೋಗುತ್ತದೆ. ಕೆಲ ವಿಭಕ್ತ ಕುಟುಂಬದ ಏಕಮಾತ್ರ ಸದಸ್ಯರು ವಲಸೆ ಹೋಗಲು ಪ್ರಮುಖ ಕಾರಣವೆಂದರೆ ಮಕ್ಕಳು ತುಂಬ ಚಿಕ್ಕವರಿದ್ದು ಶಾಲೆಗೆ ಹೋಗುತ್ತಿರುವುದರಿಂದ ಮತ್ತು ವಲಸೆ ಹೋದ ಪ್ರದೇಶದಲ್ಲಿ ಉತ್ತಮ ಸೌಲಭ್ಯಗಳು ಇಲ್ಲದೆ ಇರುವುದರಿಂದ ಕುಟುಂಬವನ್ನು ಕಟ್ಟಿಕೊಂಡು ಹೋಗಲು ಅವರು ಹಿಂಜರಿಯುತ್ತಾರೆ. ಅಂತಹ ವಿಭಕ್ತ ಕುಟುಂಬಗಳು ತಾವೇ ಕಟ್ಟಿಕೊಂಡ ಮನೆಯಲ್ಲಿ ಅಥವಾ ಬೇರೆಯಾದಾಗ ಅವರಿಗೆ ಬಂದ ಪಿತ್ರಾರ್ಜಿತ ಮನೆಯಲ್ಲಿ ವಾಸಿಸುತ್ತಿರುವುದು ಕಂಡುಬಂದಿದೆ.

ವಿಭಕ್ತ ಕುಟುಂಬ ಮತ್ತು ವಿಸ್ತೃತ ಕುಟುಂಬಗಳು ಅದೇ ಗ್ರಾಮದ ತಮ್ಮ ಸಂಬಂಧಿಗಳ ಮನೆಯ ಹತ್ತಿರ, ಆತ್ಮೀಯ ಸ್ನೇಹಿತರ ಮನೆಯ ಪಕ್ಕದಲ್ಲಿ ವಾಸಿಸುತ್ತಿರುವುದು ಇದೆ. ಇದರಿಂದ ಅವರು ಮಾನಸಿಕ, ಸಾಮಾಜಿಕ ಭದ್ರತೆ ಮತ್ತು ರಕ್ಷಣೆಯನ್ನು ಪಡೆಯಬಹುದು ಎಂದು ಭಾವಿಸುತ್ತಾರೆ. ಏಕೆಂದರೆ ಅದೇ ಗ್ರಾಮದಲ್ಲಿ ವಾಸಿಸುವುದರಿಂದ ಗ್ರಾಮೀಣ ಭಾಗದಲ್ಲಿ ನಗರ ಪ್ರದೇಶಕ್ಕಿಂತ ಹೆಚ್ಚು ಜನರಲ್ಲಿ ಕೊಡು-ಕೊಳ್ಳುವಿಕೆ ನಡೆಯುತ್ತದೆ. ಅದರಿಂದ ಅವರು ಹೆಚ್ಚು ಸುರಕ್ಷಿತ ಭಾವವನ್ನು ಅನುಭವಿಸುತ್ತಾರೆ. ಆದರೆ ಕೆಲವು ಬಾರಿ ಇಂತಹ ಕುಟುಂಬಗಳು ಸಾಮಾಜಿಕ, ರಾಜಕೀಯ ಕಾರಣಗಳಿಂದ ಹೆಚ್ಚಿನ ತೊಂದರೆ ಅಪಾಯಗಳನ್ನು ಎದುರಿಸಿರುವುದು ಇದೆ. ಈ ಪ್ರಮಾಣ ಶೇಕಡ ೧೫ರಷ್ಟಾದರೆ, ಸುರಕ್ಷಿತ ಭಾವನೆಯನ್ನು ಅನುಭವಿಸುವ ಕುಟುಂಬಗಳ ಸಂಖ್ಯೆ ಶೇಕಡ ೮೫ರಷ್ಟಿದೆ.

ಪುರುಷ ಮುಖ್ಯಸ್ಥರನ್ನು ಒಳಗೊಂಡ ಕುಟುಂಬವು ವಂಶಪರಂಪರೆಯಾದುದು. ಪುರುಷ ಮುಖ್ಯಸ್ಥರಾಗಿರುವ ಈ ಕುಟುಂಬದಲ್ಲಿ ಹೆಂಡತಿ, ಮಕ್ಕಳು, ಹಿರಿಯರಾದ ತಂದೆ-ತಾಯಿ, ಅವಿವಾಹಿತ ಅಣ್ಣ-ತಮ್ಮಂದಿರು ಇರುವರು. ಅಧ್ಯಯನದಲ್ಲಿ ಸಾಂಪ್ರದಾಯಿಕ ಕುಟುಂಬದ ಚಿತ್ರಣಗಳು ಕಂಡುಬರುತ್ತವೆ.

**ಮಹಿಳಾ ಮುಖ್ಯಸ್ಥ ಕುಟುಂಬಗಳು**

ಬ್ರೈಡನ್ ಮತ್ತು ಚಾಂಟ್ ಅವರು ಮಹಿಳಾ ಮುಖ್ಯಸ್ಥ ಕುಟುಂಬವನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. "ವರ್ಷದಲ್ಲಿ ಅರ್ಧಕ್ಕೂ ಹೆಚ್ಚು ಕಾಲ ವಿವಾಹವಾದ ಪತಿ ಅಥವಾ ಗಂಡಸು ವಾಸಿಸುವ ಮನೆಯಿಂದ ಕೆಲಸ ಅಥವಾ ದುಡಿಮೆಗೋಸ್ಕರ ಮನೆಯಿಂದ, ಹೆಂಡತಿ ಮಕ್ಕಳಿಂದ ದೂರವಿರುತ್ತಾನೆ. ಅಂತಹ ಕುಟುಂಬಗಳು ಮಹಿಳಾ ಮುಖ್ಯಸ್ಥ ಕುಟುಂಬಗಳ ಎನ್ನುತ್ತಾರೆ"(ಅದೇ ಪು. ೩೧೮). ಈ ಹಿನ್ನೆಲೆಯಿಂದ ವಲಸೆ ಹೋದ ಕುಟುಂಬಗಳನ್ನು ನೋಡುವುದಾದರೆ ಮಹಿಳಾ ಮುಖ್ಯಸ್ಥ ಕುಟುಂಬಗಳ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಕುಟುಂಬದ ಮುಖ್ಯಸ್ಥರು ವಲಸೆ ಹೋದ ಸಮಯದಲ್ಲಿ ಮನೆಯ ಜವಾಬ್ದಾರಿಯನ್ನು ಮಹಿಳೆಯರು ಹೊರುತ್ತಾರೆ. ಇದರ ಜೊತೆಗೆ ಮಹಿಳಾ ಮುಖ್ಯಸ್ಥರ ಕುಟುಂಬಗಳು ಒಂದು ದೇವದಾಸಿ ಕುಟುಂಬಗಳಾಗಿರುತ್ತವೆ ಅಥವಾ ವಿಧವೆಯರ ಕುಟುಂಬಗಳಾಗಿರುತ್ತವೆ ಎನ್ನುವುದಕ್ಕೆ ಈ ಅಧ್ಯಯನ ಸೀಮಿತವಾಗದೆ ಬ್ರೈಡನ್ ಮತ್ತು ಚಾಂಟ್ ಅವರ ವ್ಯಾಖ್ಯೆಯನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ವಲಸೆ ಹೋದ ಕುಟುಂಬದ ಸದಸ್ಯರಲ್ಲಿ ಗಂಡ ಮಕ್ಕಳು ಚಿಕ್ಕವರಾಗಿರುತ್ತಾರೆ. ಪಿತೃಪ್ರಧಾನ ಕುಟುಂಬದ ನೇರ ಸದಸ್ಯ ಚಿಕ್ಕವರಿದ್ದಾಗ, ಮದುವೆ ಇನ್ನು ಆಗದೇ ಇದ್ದಾಗ, ಶಿಕ್ಷಣ ಪಡೆಯುತ್ತಿರುವ

ಕಾರಣಕ್ಕಾಗಿ ಇವುಗಳು ಮಹಿಳಾ ಮುಖ್ಯಸ್ಥರನ್ನು ಹೊಂದಿರುತ್ತವೆ. ಮಹಿಳಾ ಮುಖ್ಯಸ್ಥರನ್ನು ಹೊಂದಿದಂತಹ ಕುಟುಂಬಗಳಲ್ಲಿ ಮಹಿಳೆಯರಿಗೆ ಯಾವುದೇ ತೆರನಾದ ಕಾನೂನಾತ್ಮಕ ಆಸ್ತಿಹಕ್ಕುಗಳು ಇರುವುದಿಲ್ಲ. ದೇವದಾಸಿ ಕುಟುಂಬಗಳನ್ನು ಹೊರತುಪಡಿಸಿ ನೋಡಿದಾಗ ಕುಟುಂಬದ ಮುಖ್ಯಸ್ಥರು ವಲಸೆ ಹೋಗುವುದರಿಂದ ಮಹಿಳೆಯರು ನಿರ್ಣಯ ಪ್ರಕ್ರಿಯೆಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ.

ಕೋಷ್ಟಕ ೪.೧.

**ಕುಟುಂಬದ ಸ್ವರೂಪ**

| **ಕುಟುಂಬದ ರಚನೆ ಸ್ವರೂಪ** | **ಪುರುಷ** | **ಸ್ತ್ರೀ** | **ಒಟ್ಟು** |
|---|---|---|---|
| ಅವಿಭಕ್ತ | ೫೫ | ೪೦ | ೨೩.೭೫ |
| ವಿಭಕ್ತ | ೭೫ | ೯೦ | ೪೧.೨೫ |
| ವಿಸ್ತೃತ | ೭೦ | ೭೦ | ೩೫.೦೦ |
| ಒಟ್ಟು | ೨೦೦ | ೨೦೦ | ೧೦೦ |

ಈ ಅಧ್ಯಯನದಲ್ಲಿ ಸಹ ಅವಿಭಕ್ತ ಕುಟುಂಬಗಳ ಸಂಖ್ಯೆ ಶೇ. ೨೩.೭೫ರಷ್ಟಿದ್ದು, ವಿಭಕ್ತ ಮತ್ತು ವಿಸ್ತೃತ ಕುಟುಂಬಗಳ ಸಂಖ್ಯೆ ಅಧಿಕವಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಇನ್ನು ಕೆಲವು ಅವಿಭಕ್ತ ಕುಟುಂಬಗಳು ಕಂಡುಬರುತ್ತಿದ್ದು ಆ ಕುಟುಂಬದ ಸದಸ್ಯರ ಸಂಖ್ಯೆ ೧೨ ರಿಂದ ೨೫ರವರೆಗೆ ಇರುತ್ತದೆ. ಅಂದರೆ ಅವಿಭಕ್ತ ಕುಟುಂಬಗಳ ಸಂಖ್ಯೆ ಕ್ಷೀಣಿಸುತ್ತಿರುವುದು ಕಂಡುಬರುತ್ತದೆ. ಅವಿಭಕ್ತ ಕುಟುಂಬಗಳಲ್ಲಿ ವಾಸಿಸುವ ಜನರಲ್ಲಿ ಒಗ್ಗಟ್ಟಿಗಿಂತ ಅವರೆಲ್ಲ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುತ್ತಾರೆ. ಒಂದು ತಿಂಗಳಿಗೆ ಬೇಕಾದ ಆಹಾರದ ಖರ್ಚನ್ನು ಎಲ್ಲರು ಭರಿಸುತ್ತಿರುತ್ತಾರೆ. ಉಳಿದ ಸಂಗತಿಗಳು ಅಂದರೆ ಬಟ್ಟೆ, ಮಕ್ಕಳ ಶಾಲಾ ವೆಚ್ಚ, ಆರೋಗ್ಯ ಇತ್ಯಾದಿ ಖರ್ಚನ್ನು ಅವರವರೇ ಭರಿಸುತ್ತಿರುತ್ತಾರೆ. ಅವಿಭಕ್ತ ಕುಟುಂಬಗಳಲ್ಲಿ ಸ್ವಲ್ಪ ಬಿಗಿಯಾದ ಹಿಡಿತ ಕಂಡು ಬರುತ್ತದೆ. ಅಧ್ಯಯನದ ಸಮಯದಲ್ಲಿ ಕಂಡುಬಂದಂತೆ, ಪುರುಷ ಮುಖ್ಯಸ್ಥರಿರುವ ಕುಟುಂಬಗಳ ಸದಸ್ಯರು ಎಲ್ಲದಕ್ಕೂ ಮುಖ್ಯಸ್ಥರನ್ನೇ ಕೇಳಬೇಕು. ಆದರೆ ಮಹಿಳಾ ಮುಖ್ಯಸ್ಥರಿದ್ದ ಕುಟುಂಬಗಳಲ್ಲಿ ಸ್ವಲ್ಪಮಟ್ಟಿಗೆ ಉದಾರವಾದಿ ನೀತಿ, ಧೋರಣೆಗಳು ಕಂಡುಬರುತ್ತವೆ. ಅಂದರೆ ಮಾತನಾಡಲು ಎಲ್ಲರಿಗೂ ಅವಕಾಶವಿದ್ದು ಅಷ್ಟು ಹಿಡಿತ, ಕಟ್ಟುನಿಟ್ಟುಗಳು ಈ ಕುಟುಂಬದ ಸದಸ್ಯರಲ್ಲಿ ಕಂಡುಬರಲಿಲ್ಲ. ಅವಿಭಕ್ತ ಕುಟುಂಬದ ಸದಸ್ಯರು ವಲಸೆ ಹೋದರೆ ಅವರ ಮಕ್ಕಳನ್ನು ನೋಡಿಕೊಳ್ಳುವುದು

ಸಮಸ್ಯೆಯಾಗುವುದಿಲ್ಲ. ಆದರೆ ವಿಸ್ತೃತ ಮತ್ತು ವಿಭಕ್ತ ಕುಟುಂಬಗಳು ವಲಸೆ ಹೋದರೆ ಅವರ ಇಡೀ ಕುಟುಂಬವೇ ವಲಸೆ ಹೋಗುವುದು ಕಂಡುಬರುತ್ತದೆ. ಇದರಿಂದ ಮಕ್ಕಳ ಶೈಕ್ಷಣಿಕ ಬೆಳವಣಿಗೆಗೆ ಹಿನ್ನೆಡೆ ಉಂಟಾಗುತ್ತದೆ.

ವಿಭಕ್ತ ಮತ್ತು ವಿಸ್ತೃತ ಕುಟುಂಬಗಳು ಕುಟುಂಬದ ವಲಸೆಯನ್ನು ಬೆಂಬಲಿಸುವುದು ಕಂಡುಬರುತ್ತದೆ. ವಿಸ್ತೃತ ಕುಟುಂಬದಲ್ಲಿ ಕೇವಲ ಗಂಡನ ಮನೆಯ ಸದಸ್ಯರು, ಅವರ ಸಂಬಂಧಿಗಳು ಮಾತ್ರ ಇರುವುದಿಲ್ಲ. ಹೆಣ್ಣಿನ/ಮಹಿಳೆಯ ತಂದೆ-ತಾಯಿ, ಅತ್ತೆ, ಮಾವನನ್ನು ಸಹ ಒಳಗೊಂಡಿರುತ್ತದೆ. ಪಿತೃಪ್ರಧಾನ ಕುಟುಂಬವ್ಯವಸ್ಥೆ ಇದ್ದರೂ ವಿಸ್ತೃತ ಕುಟುಂಬಗಳನ್ನು ನೋಡಿದಾಗ ಇಲ್ಲಿ ಮುಖ್ಯಸ್ಥರು ಪುರುಷರಿದ್ದರೂ ಮಹಿಳೆಯ ಮನೆಯ ಕಡೆ ಸಂಬಂಧಿಗಳನ್ನು ಒಳಗೊಂಡಿರುವುದನ್ನು ಗುರುತಿಸಬಹುದು.

ಕೋಷ್ಟಕ ೪.೨.

**ವಯೋಮಾನ**

| **ವಯಸ್ಸು** | **ಪುರುಷ** | **ಸ್ತ್ರೀ** | **ಒಟ್ಟು** | **ಶೇಕಡವಾರು** |
|---|---|---|---|---|
| ೨೧-೩೦ | ೧೧ | ೦೦ | ೧೧ | ೨.೭೫ |
| ೩೧-೪೦ | ೨೫ | ೧೦ | ೩೫ | ೮.೭೫ |
| ೪೧-೫೦ | ೫೨ | ೭೦ | ೧೨೨ | ೩೦.೫ |
| ೫೧-೬೦ | ೫೩ | ೯೮ | ೧೫೧ | ೩೭.೭೫ |
| ೬೦> | ೫೯ | ೨೨ | ೮೧ | ೨೦.೨೫ |
| ಒಟ್ಟು | ೨೦೦ | ೨೦೦ | ೪೦೦ | ೧೦೦% |

ಪುರುಷರು ೨೧ನೇ ವಯಸ್ಸಿನಿಂದ ೬೦ರ ನಂತರವು ವಲಸೆ ಹೋದರೂ ೪೧ರಿಂದ ೬೦ರನಂತರವೂ ವಲಸೆ ಹೋಗುವವರ ಪ್ರಮಾಣ ಅಧಿಕವಾಗಿದೆ. ಇದು ಪುರುಷಸ್ಥಾಪಿತ ಸಮಾಜ ಹೇರಿರುವ ಜವಾಬ್ದಾರಿಯನ್ನು ಈಡೇರಿಸಲು ದುಡಿಮೆಯ ಹಿಂದೆ ಬಿದ್ದಿರುವುದನ್ನು ತೋರಿಸುತ್ತದೆ. ಮಹಿಳೆಯರು ೩೧ನೇ ವಯಸ್ಸಿನ ನಂತರವಷ್ಟೇ ವಲಸೆ ಹೋಗುತ್ತಾರೆ. ಆದರೆ, ಮಹಿಳೆಯರು ೨೦-೩೦ನೇ ವಯಸ್ಸಿನಲ್ಲಿ ವಲಸೆ ಪ್ರಮಾಣ ಶೂನ್ಯ. ಇದು ಏಕೆ? ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ವಯಸ್ಸಿಗೆ ಬಂದ ಮಗಳನ್ನು ಕೆಲಸಕ್ಕೆ ಕಳುಹಿಸುವುದಕ್ಕೆ ಹಿಂಜರಿಯುವುದು. ಅಲ್ಲಿ ಆಕೆ ಮೇಲೆ ಕೆಟ್ಟ ಕಣ್ಣು ಬಿದ್ದರೆ ಹೇಗೆ ಎಂಬ ಭಾವನೆ ಅವರ ಕುಟುಂಬದವರ ಮನದಲ್ಲಿ ಬೇರೂರಿರುವುದು ಇದೆ. ೫೧ರಿಂದ ೬೦ ವಯಸ್ಸಿನಲ್ಲಿ ವಲಸೆ

ಹೋಗುವವರ ಪ್ರಮಾಣ ಅಧಿಕವಾಗಿದೆ. ಏಕೆಂದರೆ ಈ ಅವಧಿಯಲ್ಲಿ ಮಹಿಳೆಯರು ಹೆಂಡತಿ ಮತ್ತು ತಾಯಿಯ ಬಹುತೇಕ ಜವಾಬ್ದಾರಿಗಳನ್ನು ನಿಭಾಯಿಸಿರುತ್ತಾರೆ ಹಾಗೂ ಮಕ್ಕಳು ವಯಸ್ಸಿಗೆ ಬಂದಿರುತ್ತಾರೆ. ಗಂಡನ ಆಶ್ರಯದಲ್ಲಿ ಇರುವುದು ಲೇಸು ಎಂಬ ಅಭಿಪ್ರಾಯದಿಂದಾಗಿ ಸಹ ವಲಸಿಗರಾಗಿ ವಲಸೆ ಹೋಗುವುದು ಕಂಡುಬರುತ್ತದೆ.

ಈ ಸಮಾಜ ಮಹಿಳೆಯನ್ನು ಸ್ವತಂತ್ರ ವ್ಯಕ್ತಿಯಾಗಿ ಸಾಮಾಜೀಕರಣ ಮಾಡಿಲ್ಲ. ಆಕೆಯನ್ನು ಮೊದಲು ಸೇವಕಿಯಾಗಿ ಕೆಲಸ ಮಾಡಲು ಅಣಿಗೊಳಿಸಲಾಗುತ್ತದೆ. ೨೦ರಿಂದ ೩೦ನೇ ವಯಸ್ಸಿನಲ್ಲಿ ಮಹಿಳೆಯರು ಶೀಲ ಕಾಪಾಡಿಕೊಳ್ಳುವ ನೆಲೆಯಲ್ಲಿ ಕಟ್ಟಿಹಾಕಲಾಗಿದೆ. ಆದರೆ ಮಹಿಳೆಯ ಸಹ-ವಲಸೆಗೆ ಯಾವುದೇ ವಯೋಮಾನದ ಅಡ್ಡಿಗಳಿಲ್ಲ. ಗಂಡನ ಜೊತೆಗೆ, ಮಕ್ಕಳ ಜೊತೆಗೆ ವಯಸ್ಸಿನ ಅಡ್ಡಿಯಿಲ್ಲದೆ ವಲಸೆ ಹೋಗುತ್ತಾರೆ.

**ಧರ್ಮ**

ಗ್ರಾಮೀಣ ಜನಜೀವನದ ಮೇಲೆ ಧರ್ಮ ಪ್ರಮುಖವಾದ ಪರಿಣಾಮವನ್ನು ಬೀರುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಧಾರ್ಮಿಕ ಆಚರಣೆಗಳು ನಗರ ಪ್ರದೇಶದ ಧಾರ್ಮಿಕ ಆಚರಣೆಗಳಿಗಿಂತ ಹೆಚ್ಚಾಗಿರುತ್ತವೆ. ಎಲ್ಲ ಧರ್ಮದವರ ಕೆಲವು ಆಚರಣೆಗಳನ್ನು ಆಚರಿಸುವುದು ಕಂಡುಬರುತ್ತದೆ. ಅಂದರೆ ಹಿಂದು ಧರ್ಮದ ಆಚರಣೆಗಳನ್ನು ಮುಸ್ಲಿಮರು ಆಚರಿಸುವುದು, ಮುಸ್ಲಿಂ ಧರ್ಮದ ಆಚರಣೆಗಳನ್ನು ಹಿಂದು ಧರ್ಮದವರು ಆಚರಿಸುವುದು ಈ ಪ್ರದೇಶದಲ್ಲಿ ಸಹಜವಾಗಿ ಕಂಡುಬರುತ್ತದೆ.

ಕೋಷ್ಟಕ ೪.೩.

**ಧರ್ಮದ ವಿವರ**

| **ಧರ್ಮ** | **ಒಟ್ಟು** | **ಶೇಕಡವಾರು** |
|---|---|---|
| ಹಿಂದು | ೩೧೨ | ೭೮.೦ |
| ಮುಸ್ಲಿಂ | ೫೫ | ೧೩.೭೫ |
| ಕ್ರಿಶ್ಚಿಯನ್ | ೩೩ | ೮.೨೫ |
| ಒಟ್ಟು | ೪೦೦ | ೧೦೦ |

ವಲಸೆ ಮನೆಗಳಲ್ಲಿ ಶೇಕಡ ೭೮.೦ರಷ್ಟು ವ್ಯಕ್ತಿಗಳು ಹಿಂದು ಧರ್ಮಕ್ಕೆ ಸೇರಿದವರಾಗಿದ್ದಾರೆ. ಶೇಕಡ ೧೩.೭೫ರಷ್ಟು ಮುಸ್ಲಿಂ ಧರ್ಮಕ್ಕೆ, ಶೇಕಡ ೮.೨೫ರಷ್ಟು

ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದ್ದಾರೆ, ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದವರು ಮೂಲತಃ ಕ್ರಿಶ್ಚಿಯನ್ ಧರ್ಮದವರಲ್ಲ ಕೆಳ ಸಮುದಾಯಗಳಿಂದ ಮತಾಂತರ ಹೊಂದಿದವರು.

**ಕೋಷ್ಟಕ ೪.೪.**

**ಜಾತಿ/ವರ್ಗವಾರು ವಿಂಗಡಣೆ**

| ಜಾತಿ/ವರ್ಗ | ಪುರುಷರು | ಮಹಿಳೆಯರು | ಒಟ್ಟು | ಶೇಕಡವಾರು |
|---|---|---|---|---|
| ಎಸ್. ಸಿ. | ೧೬೬ | ೧೪೧ | ೩೦೭ | ೭೬.೭೫ |
| ಎಸ್. ಟಿ. | ೨೯ | ೨೭ | ೫೬ | ೧೪.೦ |
| ಓ.ಬಿ.ಸಿ. | ೦೪ | ೩೦ | ೩೪ | ೮.೫ |
| ಸಾಮಾನ್ಯ | ೦೧ | ೦೧ | ೦೨ | ೦.೫ |

ವಲಸೆ ಹೋಗುವವರಲ್ಲಿ ಪರಿಶಿಷ್ಟ ಜಾತಿಯವರೇ ಹೆಚ್ಚಾಗಿದ್ದಾರೆ. ಸಮಾಜದ ಜಾತಿ ಏಣಿ ಶ್ರೇಣೀಕರಣದಲ್ಲಿ ಇವರಿಗೆ ಕೊನೆಯ ಸ್ಥಾನ. ಸಮಾಜ ಇವರನ್ನು ಕನಿಷ್ಠವಾಗಿ ಕಾಣಲು ಇಚ್ಚಿಸುತ್ತದೆ. ಹಾಗೆಯೇ ಅವರಿಗೆ ಗ್ರಾಮಗಳಲ್ಲಿ ಕೃಷಿ ಭೂಮಿ ಇಲ್ಲದೆ ಇರುವುದರಿಂದ ವಲಸೆ ಹೋಗುವುದು ಅನಿವಾರ್ಯವಾಗಿದೆ. ಆದಕಾರಣ ಇವರ ಪ್ರಮಾಣ ಅಧಿಕವಾಗಿದೆ. ಸಾಮಾನ್ಯ ವರ್ಗದ ಉನ್ನತ ಜಾತಿಯ ಪುರುಷರಲ್ಲಿ ಒಬ್ಬರು ಮತ್ತು ಮಹಿಳೆಯರಲ್ಲಿ ಇಬ್ಬರು ವಲಸೆ ಹೋಗಿದ್ದಾರೆ. ಸಾಮಾನ್ಯ ವರ್ಗದ ಒಬ್ಬ ಮಹಿಳೆ ವೈವಾಹಿಕ ಜೀವನದಲ್ಲಿನ ಸಮಸ್ಯೆಗಳಿಂದ ವಲಸೆ ಹೋಗಿದ್ದನ್ನು ಗುರುತಿಸಬಹುದು.

**ಭಾಷೆ**

ವಲಸೆ ಹೋದ ಮನೆಯ ಜನರು ದ್ವಿಭಾಷೆಯನ್ನು ಮಾತನಾಡುವುದು ಕಂಡು ಬರುತ್ತದೆ. ವಲಸಿಗರು ಔಪಚಾರಿಕ ಶಿಕ್ಷಣದ ಮಟ್ಟ ಕಡಿಮೆಯಿದ್ದರೂ ಅವರು ದ್ವಿಭಾಷಿಕರಾಗಿರುವುದು ವಲಸೆಗೆ ಪ್ರೇರಣೆ ಎಂದು ಹೇಳಿದ್ದಾರೆ. ವಲಸೆ ಹೋದಾಗ ಇವರು ಪಡೆದ ಶೈಕ್ಷಣಿಕ ಪ್ರಮಾಣ ಪತ್ರ, ಕೌಶಲ್ಯಗಳು ಮುಖ್ಯವಾಗುವುದಿಲ್ಲ. ಏಕೆಂದರೆ ಇವರಿಗೆ ಮಾಲೀಕರು ಹೇಳಿದ ಕೆಲಸ ಅರ್ಥವಾಗುತ್ತದೆಯೇ ಅಥವಾ ಇಲ್ಲವೋ? ಎಂಬುದು; ಹೇಳಿದ ಕೆಲಸ ಮಾಡಲು ಬರುತ್ತದೆಯೇ ಅಥವಾ ಇಲ್ಲವೋ ಎಂಬುದು ಮುಖ್ಯವಾಗುತ್ತದೆ. ಬಳ್ಳಾರಿ ಜಿಲ್ಲೆಯು ಆಂಧ್ರಪ್ರದೇಶದ ಗಡಿಯನ್ನು ಹಂಚಿಕೊಂಡಿರುವುದರಿಂದ ಇಲ್ಲಿ ಕನ್ನಡ ಬಿಟ್ಟರೆ ತೆಲುಗು ಭಾಷಿಕರ ಸಂಖ್ಯೆ ಅಧಿಕವಾಗಿದೆ. ಲಂಬಾಣಿಗಳಿಗೆ, ಬಂಜಾರ ಭಾಷೆಯನ್ನು ಮುಸ್ಲಿಮರು ಉರ್ದು ಮಾತಾನಾಡುವುದು ಮತ್ತೆ ಕೆಲವರು ತಮಿಳು ಮಾತನಾಡುವುದು ಕಂಡುಬರುತ್ತದೆ.

ಕೋಷ್ಟಕ ೪.೫.
ಮಾತನಾಡುವ ಭಾಷೆಗಳು

| ಭಾಷೆ | ಪುರುಷ | ಮಹಿಳೆ | ಶೇಕಡವಾರು |
|---|---|---|---|
| ಕನ್ನಡ | ೪೨ | ೩೦ | ೧೮.೦ |
| ಕನ್ನಡ + ತೆಲುಗು | ೧೦೯ | ೯೮ | ೫೧.೭೫ |
| ಕನ್ನಡ + ತಮಿಳು + ತೆಲುಗು | ೩೯ | ೫೧ | ೨೨.೫ |
| ಕನ್ನಡ + ಉರ್ದು | ೧೦ | ೧೯ | ೭.೨೫ |
| ಒಟ್ಟು | ೨೦೦ | ೨೦೦ | ೧೦೦ |

ವಲಸೆ ಮನೆಯ ಸದಸ್ಯರು ತಾವು ದ್ವಿಭಾಷಿಕರು, ತ್ರಿಭಾಷಿಕರು ಆಗಿರುವುದರಿಂದ ಅವರಲ್ಲಿ ಒಂದು ರೀತಿಯ ಹೆಮ್ಮೆ ಇದೆ. ತಮಗೆ ಎರಡು ಮೂರು ಭಾಷೆ ಗೊತ್ತಿರುವುದರಿಂದ ಅವರಿಗೆ ವಲಸೆ ಹೋದಲ್ಲಿ ಕಷ್ಟವಾಗಲಿಲ್ಲ ಎಂದು ಹೇಳುತ್ತಾರೆ. ಮಹಿಳೆಯರಲ್ಲಿ ಏಕಭಾಷಿಕರ ಸಂಖ್ಯೆ ಪುರುಷರಿಗಿಂತ ಕಡಿಮೆ ಇದ್ದು, ದ್ವಿಭಾಷೆ ಮತ್ತು ತ್ರಿಭಾಷಿಕರ ಸಂಖ್ಯೆ ಅಧಿಕವಾಗಿದೆ. ಉರ್ದು ಭಾಷಿಕರ ಸಂಖ್ಯೆ ಮಹಿಳೆ ಮತ್ತು ಪುರುಷರಲ್ಲಿ ಕಡಿಮೆ ಇದೆ. ವಲಸೆಯಿಂದಾಗಿಯೇ ಮಾತನಾಡಲು ಕಲಿತುಕೊಂಡಿರುವುದಾಗಿ ಹೇಳಿದ್ದಾರೆ.

**ಶಿಕ್ಷಣ**

ಕಬೀರ್ ಹೇಳಿರುವಂತೆ "ಶಿಕ್ಷಣವು ಅಭಿವೃದ್ಧಿಯ ಪ್ರಮುಖ ಸೂಚಿಯಾಗಿದೆ. ಅದು ವ್ಯಕ್ತಿಗಳ ಆರೋಗ್ಯ, ಜೀವನಮಟ್ಟ ಮತ್ತು ನಿರ್ಧಾರ ಪ್ರಕ್ರಿಯೆಗಳಲ್ಲಿ ಪ್ರಭಾವವನ್ನು ಬೀರುತ್ತದೆ"(ಕಬೀರ್, ಎನ್, ೧೯೯೧, ಪು.೨೪೧-೨೬೨). ವಲಸಿಗರಲ್ಲಿ ೭೪ ಜನರು ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದ್ದಾರೆ. ೨೪ ಜನರು ಮಾಧ್ಯಮಿಕ ಶಿಕ್ಷಣವನ್ನು, ೧೭೦ ಜನರು ಔಪಚಾರಿಕ ಶಿಕ್ಷಣವನ್ನೇ ಪಡೆದಿಲ್ಲ. ಗ್ರಾಮಗಳಲ್ಲಿ ವೃತ್ತಿತರಬೇತಿ ಪಡೆದವರು ಇದ್ದಾರೆ. ಏಕೆಂದರೆ ಗ್ರಾಮಗಳಲ್ಲಿ ಜೀವನೋಪಾಯಕ್ಕಾಗಿ ಜನರು ದುಡಿಮೆಯನ್ನು ಮಾಡಲೇಬೇಕಾಗಿರುವುದರಿಂದ ಅವರ ನಿರೀಕ್ಷೆಗಳು ಶಿಕ್ಷಣ ಪಡೆದ ನಂತರ ಉದ್ಯೋಗ ದೊರಕಬೇಕು. ಆ ಉದ್ಯೋಗದಿಂದ ಸಂಬಳವನ್ನು ಪಡೆಯಬೇಕು ಎಂಬುದಾಗಿರುತ್ತದೆ. ಜ್ಞಾನದ ದೃಷ್ಟಿಕೋನದಿಂದ ಶಿಕ್ಷಣವನ್ನು ನೋಡಲಾಗುವುದಿಲ್ಲ. ಕೌಶಲ್ಯಯುತವಾದ ಶಿಕ್ಷಣವನ್ನು ಕಲಿಯಲು ಬಯಸುತ್ತಾರೆ. ತಂದೆ-ತಾಯಂದಿರು ತಮ್ಮ ಮಕ್ಕಳಿಗೆ ಅದೇ ತೆರನಾಗಿ ಸಾಮಾಜೀಕರಣವನ್ನು ಮಾಡುತ್ತಾರೆ. ಶಿಕ್ಷಣ ಎಂದರೆ ಉದ್ಯೋಗ, ಉದ್ಯೋಗ ಎಂದರೆ ಶಿಕ್ಷಣ ಎನ್ನುವಂತಾಗಿದೆ. ಹಿಂದುಳಿದ ವರ್ಗಗಳಲ್ಲಿ ಕೌಶಲ್ಯ ತರಬೇತಿ ಕೆಲಸಗಳಾದ ಚಾಪೆ ಹೆಣೆಯುವುದು, ಬಡಗಿತನ, ಕಮ್ಮಾರಿಕೆ, ಬಟ್ಟೆ ಹೊಲಿಯುವುದು, ಕುರಿ, ಕೋಳಿ,

ದನಕರುಗಳನ್ನು ಸಾಕಿಕೊಂಡು ಡೇರಿಯನ್ನು ನಡೆಸುವ ಕಲೆಯನ್ನು ಕಲಿಯಲು ಬಯಸುತ್ತಾರೆ.

**ಕೋಷ್ಟಕ ೪.೬.**

**ಶಿಕ್ಷಣದ ವಿವರ**

| ಶಿಕ್ಷಣ | ಪುರುಷರ | ಶೇಕಡವಾರು | ಸ್ತ್ರೀ | ಶೇಕಡವಾರು | ಸರಾಸರಿ |
|---|---|---|---|---|---|
| ಪ್ರಾಥಮಿಕ(೧–೪) | ೩೦ | ೧೫ | ೪೪ | ೨೨ | ೧೮.೫ |
| ಮಾಧ್ಯಮಿಕ(೫–೭) | ೧೨ | ೬ | ೧೨ | ೬ | ೬ |
| ಪ್ರೌಢ(೮–೧೦) | ೮ | ೪ | ೧೧ | ೫.೫ | ೪.೭೫ |
| ಪಿಯುಸಿ | ೧೦ | ೫ | ೦೯ | ೪.೫ | ೪.೭೫ |
| ತಾಂತ್ರಿಕ | ೪ | ೨ | ೦೩ | ೧.೫ | ೧.೭೫ |
| ವೃತ್ತಿತರಬೇತಿ | ೬ | ೩ | ೦೪ | ೨ | ೨.೫ |
| ವಯಸ್ಕ ಶಿಕ್ಷಣ / ನವಸಾಕ್ಷರರು | ೪೨ | ೨೧ | ೩೫ | ೧೭.೫ | ೧೯.೨೫ |
| ಅಶಿಕ್ಷಿತರು | ೮೮ | ೪೪ | ೮೨ | ೪೧ | ೪೨.೫ |
| ಒಟ್ಟು | ೨೦೦ | ೧೦೦ | ೨೦೦ | ೧೦೦ | ೧೦೦ |

**ನಕ್ಷೆ ೪.೧.**

**ಶಿಕ್ಷಣದ ವಿವರ**



ಈ ಪ್ರದೇಶದಲ್ಲಿ ಔಪಚಾರಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವವನ್ನು ನೀಡುವುದಕ್ಕಿಂತ ದುಡಿಮೆಯ ಕೂಲಿಗೆ ಹೆಚ್ಚು ಮಾನ್ಯತೆ ನೀಡುವುದು ಕಂಡುಬರುತ್ತದೆ. ಹಾಗಾಗಿ ಶಿಕ್ಷಣದ ಕುರಿತು ಸಂಗ್ರಹಿಸಿದ ಮಾಹಿತಿಯನ್ನು ಲಿಂಗವ್ಯವಸ್ಥೆಗೆ ಅನುಗುಣವಾಗಿ ವಿಂಗಡಿಸಿ ನೋಡಿದಾಗ ೪೪%(೮೮)ರಷ್ಟು ಪುರುಷರು ಮತ್ತು ೪೨.೫%(೮೨)ರಷ್ಟು ಮಹಿಳೆಯರು ಶಿಕ್ಷಣವನ್ನೇ ಪಡೆದಿಲ್ಲ. ಮಹಿಳಾ ವಕ್ತೃಗಳಲ್ಲಿ ತಮ್ಮ ತಂದೆ-ತಾಯಂದಿರು ಶಿಕ್ಷಣಕ್ಕೆ ಒತ್ತು ನೀಡುತ್ತಿರಲಿಲ್ಲ. ಇದುವೇ ಶಿಕ್ಷಣ ಪಡೆಯುದೇ ಇರಲು ಕಾರಣವಾಗಿದೆ ಎಂದು ಹೇಳಿದ್ದಾರೆ. ಶೇಕಡ ೧೯.೨೫ರಷ್ಟು ವಯಸ್ಕರ ಶಿಕ್ಷಣ ಕಾರ್ಯಕ್ರಮದಲ್ಲಿ ಸಹಿಯನ್ನು ಮಾಡುವುದನ್ನು ಕಲಿತಿದ್ದಾರೆ. ಒಟ್ಟು ಅನಕ್ಷರಸ್ಥರ ಪ್ರಮಾಣ ಶೇಕಡ ೪೨.೫ರಷ್ಟಿದೆ.

ಮಹಿಳೆಯರ ಪ್ರತಿಕ್ರಿಯೆಗಳಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಹೆಣ್ಣುಮಕ್ಕಳು ವಯಸ್ಸಿಗೆ ಬರುವುದಕ್ಕಿಂತ ಮೊದಲೇ ಅವರಿಗೆ ವಿವಾಹವಾಗಬೇಕೆಂಬ ಒತ್ತಡಗಳು ಅವರ ತಂದೆ-ತಾಯಂದಿರಿಂದ ಬರುತ್ತಿದ್ದವು. ಮನೆಯ ಹಿರಿಯರೇ ಅಂತಹ ಒತ್ತಡಗಳನ್ನು ಹೇರುತ್ತಿದ್ದರು. ಮದುವೆ ಮಾಡಿದರೆ ಔಪಚಾರಿಕ ಶಿಕ್ಷಣವನ್ನು ನೀಡಬೇಕಾದ ಅಗತ್ಯವಿಲ್ಲ. ಮದುವೆಗೆ ಶಿಕ್ಷಣ ಯಾವುದೇ ರೀತಿಯಲ್ಲೂ ಸಹಾಯ ಮಾಡುವುದಿಲ್ಲ, ಆದ್ದರಿಂದ ಹೆಣ್ಣು ಮಕ್ಕಳಿಗೆ ಯಾಕೆ ಶಿಕ್ಷಣ ಎನ್ನುವ ಅಭಿಪ್ರಾಯಗಳು ಕಂಡುಬಂದಿವೆ. ಈ ಅಧ್ಯಯನಕ್ಕೆ ಒಳಪಟ್ಟ ಹೆಚ್ಚಿನ ವಕ್ತೃಗಳಿಗೆ ಔಪಚಾರಿಕ ಶಿಕ್ಷಣವನ್ನು ಪಡೆಯುವ ವಯಸ್ಸಿನ ಮಿತಿಯನ್ನು ಮೀರಿದ್ದಾರೆ. ಅವರ ಬಾಲ್ಯದ ಸಂದರ್ಭಗಳು, ಬಡತನ, ಈ ಬಗ್ಗೆ ಅರಿವು ಇಲ್ಲದೆ ಇರುವುದು, ಶಾಲೆಗಳ ಕೊರತೆ ಇತ್ಯಾದಿ ಕಾರಣಗಳಿಂದ ಔಪಚಾರಿಕ ಶಿಕ್ಷಣವನ್ನು ಪಡೆಯಲು ಸಾಧ್ಯವಾಗಿಲ್ಲ. ಇದರ ಪರಿಣಾಮಗಳೆಂದರೆ ಗಂಡುಮಕ್ಕಳು ಹೆಚ್ಚು ಮನೆಯಾಚೆಗಿನ ಕೌಶಲ್ಯಗಳನ್ನು ಹೊಂದಲು ಸಹಾಯಕವಾಗುತ್ತದೆ. ಇದರಿಂದಾಗಿ ಗಂಡುಮಕ್ಕಳೇ ಅಧಿಕ ಸಂಖ್ಯೆಯಲ್ಲಿ ವಲಸೆ ಹೋಗಿ ಕೌಶಲ್ಯವನ್ನು ಹೆಚ್ಚಿಸಿಕೊಳ್ಳುತ್ತಿರುವುದನ್ನು ಕಾಣಬಹುದು. ಹೆಣ್ಣು ಮಕ್ಕಳ ಸಂಚಲನೆಗೆ ಅವಕಾಶಗಳು ಇರುವುದು ಕಡಿಮೆ. ಮಹಿಳೆ ಮನೆಯ ಹೊರಗೆ ಹೋಗುವಾಗ ಪ್ರೋತ್ಸಾಹಕ್ಕಿಂತ ನಿಷೇಧಗಳೇ ಹೆಚ್ಚು.ಹೀಗಾಗಿ ಸ್ವತಂತ್ರ ಶಿಕ್ಷಿತ ಮಹಿಳೆಯರ ಸಂಖ್ಯೆ ಅತ್ಯಂತ ಕಡಿಮೆ ಇದೆ. ಇದನ್ನು ಪ್ರಶಾಂತ್ ಎಚ್.ಡಿ ಅವರ 'ಶೈಕ್ಷಣಿಕ ಪ್ರೇರಕಾಂಶಗಳ ಸಾಮಾಜಿಕ ಆಯಾಮಗಳು' ಎಂಬ ಅಧ್ಯಯನವು ದೃಢಪಡಿಸುತ್ತದೆ(ಪ್ರಶಾಂತ್ ಎಚ್.ಡಿ., ೨೦೧೦, ಪು. ೨೮-೩೧).

**ವೈವಾಹಿಕ ಸ್ಥಿತಿ**

ವಲಸೆ ಹೋಗಲು ಕೆಲಸದ ಕೊರತೆ, ಜೀವನ ನಡೆಸಲು ಕಷ್ಟವಾಗುವ ಪರಿಸ್ಥಿತಿಗಳ ಜೊತೆಗೆ ವೈವಾಹಿಕ ಜೀವನವು ಸಹ ಕಾರಣವಾಗಿದೆ. ಅಕ್ಷರಲೋಕಕ್ಕೆ ತೆರೆದುಕೊಂಡು ಮತ್ತು ತೆರೆದುಕೊಳ್ಳದ ಪುರುಷರು ವಲಸೆ ಹೋಗುವುದು ಸಹಜ. ಆದರೆ ಅಕ್ಷರಲೋಕಕ್ಕೆ

ತೆರೆದುಕೊಂಡ ಮಹಿಳೆ ಇಂಡಿಪೆಂಡೆಂಟ್ ಆಗಿ ವಲಸೆ ಹೋಗುವುದು ಕಡಿಮೆ. ಆಕೆಯ ವಲಸೆ ಒಂದು ವಿವಾಹಕ್ಕೆ, ಕುಟುಂಬಕ್ಕೆ ಜೊತೆಯಾಗಿರುತ್ತದೆ. ವೈವಾಹಿಕ ಸಮಸ್ಯೆಗಳು ಸಹ ಮಹಿಳೆ ವಲಸೆ ಹೋಗಲು ಕಾರಣವಾಗಿವೆ

**ಕೋಷ್ಟಕ ೪.೭.**

**ವೈವಾಹಿಕ ಸ್ಥಾನಮಾನ**

| ವೈವಾಹಿಕ ಸ್ಥಿತಿ | ಪುರುಷರು | ಮಹಿಳೆಯರು | ಶೇಕಡವಾರು |
|---|---|---|---|
| ವಿವಾಹಿತರು | ೧೮೬ | ೬೩ | ೬೨.೨೫ |
| ಅವಿವಾಹಿತರು | ೨ | -- | ೦.೫ |
| ವಿಚ್ಛೇದಿತರು/ಬೇರ್ಪಟ್ಟವರು | ೬ | ೫೬ | ೧೫.೫ |
| ವಿಧವೆ/ವಿಧುರ | ೦೬ | ೮೧ | ೨೧.೭೫ |

ವಿವಾಹವು ಒಬ್ಬ ವ್ಯಕ್ತಿಯ ವಲಸೆಯನ್ನು ನಿರ್ಧರಿಸುತ್ತದೆ. ವಿವಾಹವಾದ ಒಬ್ಬ ವ್ಯಕ್ತಿ ಸಲೀಸಾಗಿ ತನ್ನ ಬದುಕನ್ನು ಕಟ್ಟಿಕೊಳ್ಳಲು ವಲಸೆ ಹೋಗುವುದು, ತನ್ನ ಬದುಕಿನ ದಾರಿಯನ್ನು ತಾನು ಕಂಡುಕೊಳ್ಳುವುದು ಇದೆ. ಅವಿಭಕ್ತ ಕುಟುಂಬವಿರಲಿ, ವಿಭಕ್ತ ಕುಟುಂಬವಿರಲಿ ಆತನಿಗೆ ಮದುವೆಯಾಗಿದ್ದರೆ ಅವರ ಜೀವನ ಅವರು ಕಂಡುಕೊಳ್ಳುತ್ತಾರೆ ಎಂಬ ಅಭಿಪ್ರಾಯವಿದೆ. ಇಲ್ಲದಿದ್ದರೆ ಎಲ್ಲಿ ವಲಸೆ ಹೋಗಿ ಏನಾದರೂ ರೋಗಗಳನ್ನು ಹಚ್ಚಿಕೊಂಡು ಬರುತ್ತಾರೋ ಎಂಬ ಭಯವಿರುವುದು. ಅದರಲ್ಲೂ ಗ್ರಾಮೀಣ ಭಾಗದಲ್ಲಿ ಎಲ್ಲರಿಗೂ ಏಡ್ಸ್ ಮತ್ತು ಹೆಚ್‌ಐವಿ ರೋಗಗಳ ಬಗೆಗೆ ಒಂದು ಮಟ್ಟಿನ ಮಾಹಿತಿ ಇರುವುದರಿಂದ ಅವಿವಾಹಿತರಿಗೆ ವಲಸೆ ಹೋಗಲು ಇದು ಅಡ್ಡಿಪಡಿಸುವುದು ಕಂಡು ಬರುತ್ತದೆ.

**೪.೨. ಆರ್ಥಿಕ ನೆಲೆಗಳು**

**ಕೋಷ್ಟಕ ೪.೮.**

**ಕುಟುಂಬದ ಭೂಮಿಯ ವಿವರ**

| ಭೂಮಿ | ಪುರುಷರು | ಮಹಿಳೆಯರು |
|---|---|---|
| ಇದೆ | ೧೪% | ೦೮% |
| ಇಲ್ಲ | ೮೬% | ೯೨% |

ವಲಸೆ ಹೋದ ಕುಟುಂಬದವರಿಗೆ ಭೂಮಿ ಇರುವುದಕ್ಕಿಂತ ಇಲ್ಲದವರ ಸಂಖ್ಯೆಯೇ ಅಧಿಕವಾಗಿದೆ. ವಲಸಿಗರಲ್ಲಿ ಕಡಿಮೆ ಭೂಮಿ ಇರುವವರು ಮಳೆ ಸರಿಯಾದ ಸಮಯಕ್ಕೆ

ಆಗದೇ ಇರುವುದರಿಂದ ಜೀವನ ನಿರ್ವಹಿಸುವುದು ಕಷ್ಟ. ಆದಕಾರಣ ಭೂಮಿಯನ್ನು ಬೇರೆಯವರಿಗೆ ಉಳುಮೆ ಮಾಡಲು ಕೊಟ್ಟು ವಲಸೆ ಹೋಗಿರುವುದಾಗಿ ತಿಳಿಸಿದ್ದಾರೆ. ಇದರಲ್ಲಿ ಮಹಿಳೆಯರಿಗೆ ಆಸ್ತಿಯಲ್ಲಿ ಕಾನೂನಾತ್ಮಕವಾಗಿ ಸಮನಾದ ಹಕ್ಕುಗಳು ಇವೆ. ಆದರೆ ವಾಸ್ತವದಲ್ಲಿ ಪಿತೃಪ್ರಧಾನತೆಯ ಕಾರಣಕ್ಕಾಗಿ ಅವರಿಗೆ ಯಾವುದೇ ಕಾನೂನಾತ್ಮಕ ಹಕ್ಕುಗಳು ಲಭ್ಯವಾಗುವುದಿಲ್ಲ. ಪರಿಣಾಮ ಮಹಿಳೆಯರ ಹೆಸರಿನಲ್ಲಿ ಭೂಮಿ ಇರುವವರ ಪ್ರಮಾಣ ಶೇಕಡ ೮೫ರಷ್ಟಿದೆ. ಅದು ಅವರ ತವರುಮನೆಯವರು ಕೇವಲ ಬೆಳೆ ಬೆಳೆದುಕೊಂಡು ಜೀವನ ಸಾಗಿಸಲು ನೀಡಿದ್ದು. ಇನ್ನು ಕೆಲವು ಭೂಮಿ ಇದ್ದ ಮಹಿಳೆಯರು ಗಂಡನ ಭೂಮಿ ಸಾಲಕ್ಕಾಗಿ ಮಾರಾಟ ಮಾಡುವ ಸಮಯದಲ್ಲಿ ತಾನು ದುಡಿದ ಹಣ ಮತ್ತು ತವರು ಮನೆಯವರು ಸಹಾಯ ಮಾಡಿದ ಹಣದಿಂದ ತೆಗೆದುಕೊಂಡಿದ್ದು ಎಂದು ಹೇಳಿರುವರು. ಉಳಿದ ಮಹಿಳೆಯರು ಭೂಮಿ ಎಂದರೆ ಅದು ಕೇವಲ ಪುರುಷನ ಹೆಸರಿನಲ್ಲಿ ಇರುವುದು ಮಾತ್ರ ಎಂದು. ಮಹಿಳಾ ಮುಖ್ಯಸ್ಥರ ಕುಟುಂಬಗಳಲ್ಲಿಯೂ ಸಹ ಮಹಿಳೆಯ ಹೆಸರಿನಲ್ಲಿ ಭೂಮಿ ಇಲ್ಲದಿರುವುದನ್ನು ಗುರುತಿಸಬಹುದು.

## ವೃತ್ತಿ

ಕೋಷ್ಟಕ ೪.೯.

**ಪ್ರಾಥಮಿಕ ವೃತ್ತಿ**

| ವೃತ್ತಿ/ಕೆಲಸ | ಪುರುಷರು | ಮಹಿಳೆಯರು |
|---|---|---|
| ಕೃಷಿ | ೨೦ | ೩೦ |
| ಕೂಲಿ | ೧೬೦ | ೧೨೦ |
| ದಲ್ಲಾಳಿ | ೫೦ | ೪೦ |
| ಮನೆಕೆಲಸ | ೦೧ | ೧೯೫ |
| ಕೃಷಿಯೇತರ ಕೆಲಸ | ೭೫ | ೪೦ |
| ಒಟ್ಟು | ೩೦೬* | ೪೨೫* |

ಗ್ರಾಮೀಣ ಭಾಗದ ಜನರು ಜೀವನ ನಿರ್ವಹಣೆಗೆ ಹಲವು ಕೆಲಸಗಳನ್ನು ಮಾಡುತ್ತಾರೆ. ನಿರ್ದಿಷ್ಟವಾಗಿ ಒಂದೇ ಕೆಲಸವನ್ನು ಮಾಡಿ ಜೀವನ ನಿರ್ವಹಣೆ ಮಾಡುವುದು ಅವರಿಗೆ ಕಷ್ಟ. ಏಕೆಂದರೆ ಕೂಲಿಯಾಗಲಿ, ಕೃಷಿಯಾಗಲಿ, ದಲ್ಲಾಳಿ ಕೆಲಸದಿಂದ ವರ್ಷಪೂರ್ತಿ ಹಣ ದೊರಕುವುದಿಲ್ಲ. ಅವರ ಕೆಲಸವು ವೃತ್ತಾಕಾರದಲ್ಲಿ ಸುತ್ತುತ್ತಾ ಇರುತ್ತದೆ. ಈಗಾಗಲೇ ವಲಸಿಗರ ಕುರಿತ ವರ್ಗವಾರು ಮಾಹಿತಿಯಲ್ಲಿ ಪರಿಶಿಷ್ಟ ಜಾತಿಯ ಜನರು ಹೆಚ್ಚಾಗಿರುವುದು ಕಂಡುಬಂದಿದೆ. ಇವರು ಭೂಮಿಯ ಒಡೆತನವನ್ನು ಹೊಂದದೇ ಇರುವುದರಿಂದ ಅವರು

ಗ್ರಾಮದ ಯಜಮಾನರ ಹತ್ತಿರ, ಉನ್ನತ ಜಾತಿಯ ಜನರ ಹತ್ತಿರ ಕೃಷಿ ಭೂಮಿಯಲ್ಲಿ ಕೆಲಸ ಮಾಡುತ್ತಿರುವವರು. ಅಧ್ಯಯನಕ್ಕೆ ಒಳಪಡಿಸಿದ್ದು ೪೦೦ ಮಂದಿಯನ್ನೇ ಆದರೂ ಈ ಕೋಷ್ಟಕದಲ್ಲಿ ಅದು ಪುರುಷರು ೩೦೬ ಮತ್ತು ಮಹಿಳೆಯರು ೪೨೫ ಎಂದು ಕಾಣಿಸುತ್ತದೆ. ಏಕೆಂದರೆ ಅವರು ನಿರ್ದಿಷ್ಟವಾಗಿ ಒಂದೇ ಕೆಲಸವನ್ನು ಮಾಡುವುದಿಲ್ಲ. ಮನೆ ಕೆಲಸವನ್ನು ಮಹಿಳೆ ಮಾಡಲೇ ಬೇಕು. ಅದು ಅವಳ ಕೆಲಸ ಎಂದು ನಿಗದಿಪಡಿಸಿರುವುದರಿಂದ ಮನೆಕೆಲಸವೆಂದಾಗ ಮಹಿಳೆ ನಿರ್ವಹಿಸಲೇಬೇಕು ಎಂಬ ಒತ್ತಾಯವು ಇದೆ.

ಗ್ರಾಮೀಣ ಕೃಷಿ ಸಮುದಾಯಗಳಲ್ಲಿ ಕೌಟುಂಬಿಕ ಮತ್ತು ಗ್ರಾಮದ ಸಂಬಂಧಗಳು ಸಾಮಾಜಿಕ ಜೀವನದ ಮೇಲೆ ಹಿಡಿತವನ್ನು ಸಾಧಿಸಿವೆ. ಆದ್ದರಿಂದ ಭೂಮಿ ಮತ್ತು ಬಂಡವಾಳವು ಸಮುದಾಯದ ಘಟಕಗಳಲ್ಲಿಯೇ ಹಂಚಿಕೆಯಾಗುತ್ತವೆ. ಗ್ರಾಮೀಣ ಪ್ರದೇಶದ ಕುಟುಂಬಗಳಲ್ಲಿ ಯಾವುದು ಸುಸ್ಥಿರವಾಗಿರುತ್ತದೆ. ಅಂದರೆ ಕೃಷಿಯಲ್ಲಿ ಬಹಳ ಸಂಪನ್ಮೂಲ ಮತ್ತು ಆಸ್ತಿಯನ್ನು ಹೊಂದಿರುತ್ತದೋ ಆ ಸಮುದಾಯದ ಸಾಮಾಜಿಕ ಸ್ಥಾನಮಾನವು ಉತ್ತಮವಾಗಿರುತ್ತದೆ.

ಅಧ್ಯಯನಕ್ಕೆ ಒಳಪಟ್ಟವರಲ್ಲಿ ಹೆಚ್ಚಿನವರು ಕೃಷಿ ಮತ್ತು ಕೃಷಿಸಂಬಂಧಿ ಕೆಲಸಗಳೇ ತಮ್ಮ ಜೀವನೋಪಾಯದ ಮೂಲವೆಂದು ಹೇಳಿದ್ದಾರೆ. ಹೆಚ್ಚಿನ ಕುಟುಂಬಗಳು ೧-೨ ಎಕರೆ ಭೂಮಿಯನ್ನು ಹೊಂದಿದ್ದಾರೆ. ತಮ್ಮ ಭೂಮಿಗಳಲ್ಲಿ ತಾವು ಸೇವಿಸುವ ಪ್ರಧಾನ ಆಹಾರವನ್ನು ಮೊದಲ ಆದ್ಯತೆಯಾಗಿ ಬೆಳೆಯುತ್ತಾರೆ. ಉದಾಹರಣೆಗೆ ಭತ್ತ, ಜೋಳ, ಮೆಕ್ಕೆಜೋಳ, ಕಬ್ಬನ್ನು ಬೆಳೆಯುತ್ತಾರೆ. ಇದಕ್ಕೆ ಪೂರಕವಾಗಿ ಪಶುಸಂಗೋಪನೆ, ಕುರಿ, ಮೇಕೆ, ಹಸು, ಎಮ್ಮೆಗಳನ್ನು ಸಾಕುವರು. ಮತ್ತೆ ಕೆಲವರು ಹೂ ಕಟ್ಟುವುದು, ಬಟ್ಟೆ ಹೊಲಿಯುವುದು, ಇತರ ಆರ್ಥಿಕ ಚಟುವಟಿಕೆಗಳನ್ನು ಸಹ ಮಾಡುತ್ತಾರೆ. ದೇಶಿ ಔಷಧಿಯನ್ನು ನೀಡುವುದು, ಸೌದೆ ಮಾರುವ ಕೆಲಸವನ್ನು ಕೆಲವು ಕುಟುಂಬಗಳು ನಿರ್ವಹಿಸುತ್ತವೆ. ಆದರೆ ಇವೆಲ್ಲಾ ಚಟುವಟಿಕೆಗಳು ವರ್ಷಪೂರ್ತಿ ನಿರಂತರವಾದ ಚಟುವಟಿಕೆಗಳಾಗಿರುವುದಿಲ್ಲ. ಕೃಷಿ, ಕೃಷಿಯೇತರ, ಪಶುಸಂಗೋಪನೆ ಚಟುವಟಿಕೆಗಳು ನಿರಂತರವಾಗಿಲ್ಲದಿದ್ದರೂ ವೃತ್ತಾಕಾರದಲ್ಲಿ ಸುತ್ತುತ್ತಲೇ ಇರುವುದು ಕಂಡುಬರುತ್ತದೆ.

**ಮಾಧ್ಯಮಿಕ ವೃತ್ತಿ**

ಬಳ್ಳಾರಿ ಜಿಲ್ಲೆಯಲ್ಲಿ ಬರಗಾಲ ಪದೇ ಪದೇ ಸಂಭವಿಸುತ್ತಲೇ ಇರುತ್ತದೆ. ಆದ್ದರಿಂದ ಗ್ರಾಮೀಣ ಭಾಗದ ಹಲವಾರು ಕುಟುಂಬಗಳು ಜೀವನ ನಿರ್ವಹಣೆಗೆ ಮಾಧ್ಯಮಿಕ ವೃತ್ತಿಯನ್ನು ಕಂಡುಕೊಳ್ಳುವುದು ಇದೆ. ಹಾಗಾಗಿ ಗ್ರಾಮೀಣ ಭಾಗದ ಮಹಿಳೆಯರು ತಮ್ಮ ಕೌಶಲ್ಯಗಳಿಗೆ ಅನುಗುಣವಾಗಿ ಮತ್ತು ಮನೆಯಲ್ಲಿಯೇ ಅಥವಾ ಅದೇ ಸ್ಥಳದಲ್ಲಿಯೇ ಸಣ್ಣ ಪ್ರಮಾಣದ ಹಣ ಸಂಪಾದನೆಯ ಮಾರ್ಗಗಳನ್ನು ಹುಡುಕಿಕೊಳ್ಳುತ್ತಾರೆ ಎಂದು ತಿಳಿಸಿದ್ದಾರೆ.

ಇದನ್ನು ಕಬೀರ್ ಅವರು ಪ್ರತಿಪಾದಿಸುತ್ತಾರೆ. ಅವರ ಪ್ರಕಾರ "ಮಹಿಳೆಯರು ವರ್ಷಪೂರ್ತಿ ಕೃಷಿ ಕೆಲಸವನ್ನೇ ನೆಚ್ಚಿಕೊಂಡು ಕೂರುವುದಿಲ್ಲ. ತಮ್ಮ ಕುಟುಂಬಕ್ಕಾಗಿ ಸಣ್ಣ-ಪುಟ್ಟ ಉತ್ಪಾದನೆಯನ್ನು ಮಾಡುತ್ತಲೇ ಇರುತ್ತಾರೆ. ಸಣ್ಣ-ಪುಟ್ಟ ವ್ಯಾಪಾರ ಉದ್ಯಮವನ್ನು ಮಾಡುತ್ತಾರೆ. ಅಂದರೆ ಪುಟ್ಟ ಹೋಟೆಲ್‌ಗಳನ್ನು ನಡೆಸುವುದು, ಹೂ ಕಟ್ಟುವುದು, ಕುರಿ-ಕೋಳಿ ಸಾಕುವುದು, ವ್ಯಾಪಾರದಲ್ಲಿ ತೊಡಗಿಕೊಂಡಿರುತ್ತಾರೆ. ಮಹಿಳೆಯರು ತಮ್ಮ ಕೈಯಲ್ಲಿ ಸಾಧ್ಯವಾದಷ್ಟು ತಮಗಿರುವ ಅವಕಾಶಗಳನ್ನು ಬಳಸಿಕೊಂಡು ಪೂರಕ ಆದಾಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾರೆ ಎಂದಿರುವರು"(ಕಬೀರ್, ಎನ್., ೧೯೯೧, ಪು. ೨೬೨).

ಇನ್ನೊಂದು ನೆಲೆಯಿಂದ ಹೇಳುವುದಾದರೆ ವ್ಯಾಪಾರ ಉದ್ಯಮದಲ್ಲಿ ತೊಡಗಿಕೊಂಡವರು ಕೃಷಿಯನ್ನು ಮಾಡುತ್ತಿರುತ್ತಾರೆ. ಗ್ರಾಮೀಣ ಭಾಗದ ಈ ಜನ ಆಯಾ ತಾಲೂಕುಗಳಲ್ಲಿ ಇರುವ ಹೋಲ್‌ಸೆಲ್ ಅಂಗಡಿಗಳಿಂದ ವಸ್ತುಗಳನ್ನು ಖರೀದಿಸಿ ತಮ್ಮ ಗ್ರಾಮಗಳಲ್ಲಿ ಮರುಮಾರಾಟ ಮಾಡುವುದನ್ನು ಕಾಣಬಹುದು. ಉದಾಹರಣೆಗೆ ಬಳೆ ತೊಡಿಸುವ ಕೆಲಸ, ಬಟ್ಟೆ ವ್ಯಾಪಾರ, ಹೇರ್‌ಪಿನ್, ಕ್ಲಿಪ್, ಸ್ಟಿಕರ್, ನೈಲ್ ಪಾಲಿಶ್, ಮೆಹಂದಿ ಇತ್ಯಾದಿ ವಸ್ತುಗಳನ್ನು ಮಾರಾಟ ಮಾಡುವುದನ್ನು; ಬೆಳಗ್ಗೆ ಮತ್ತು ಸಾಯಂಕಾಲದ ಅವಧಿಯಲ್ಲಿ ತಿಂಡಿಯನ್ನು ತಯಾರಿಸಿ ಮಾರುವುದನ್ನು ಸಹ ಕಾಣಬಹುದಾಗಿದೆ. ಇಂತಹ ವ್ಯಾಪಾರಗಳಲ್ಲಿ ದೊಡ್ಡ ಮಟ್ಟದ ಲಾಭವನ್ನು ನಿರೀಕ್ಷಿಸುವುದಿಲ್ಲ, ಮನೆಗೆ ಸಣ್ಣ-ಪುಟ್ಟ ಸಹಾಯವಾಗಲೀ ಎಂದೇ ಹೆಣ್ಣುಮಕ್ಕಳು ಬಯಸುತ್ತಾರೆ. ಇದನ್ನು ಸಮಾಜಶಾಸ್ತ್ರಜ್ಞೆ ಮರಿಯಾ ಮಿಸ್ ಜೀವನೋಪಾಯದ ಆರ್ಥಿಕತೆಯನ್ನು ಮಹಿಳೆಯರು ಮಾಡುತ್ತಾರೆ ಎಂದಿರುವರು. ಜೀವನೋಪಾಯದ ಆರ್ಥಿಕತೆ ಅಂದರೆ ಹಣಕ್ಕಾಗಿ ಬದುಕನ್ನು ಮಾಡುವುದಲ್ಲ. ಬದುಕಿಗಾಗಿ ಹಣವನ್ನು ಹೊಂದಿಸುವುದು, ಅಭಿವೃದ್ಧಿ ಸಿದ್ಧಾಂತಗಳು ಮಾರುಕಟ್ಟೆಯನ್ನು ಕೇಂದ್ರೀಕರಿಸುತ್ತವೆ ವಿನಾ ಬದುಕನ್ನು ಅಲ್ಲ. ಆದಕಾರಣ ಬದುಕಿನ ಆರ್ಥಿಕತೆ ಕುರಿತ ಸಿದ್ಧಾಂತ ಮತ್ತು ಚಿಂತನೆಗಳು ಬರಬೇಕು ಎಂದು ಪ್ರತಿಪಾದಿಸುತ್ತಾಳೆ.

ಈ ಭಾಗದ ಇನ್ನೊಂದು ವಿಶೇಷ ಲಕ್ಷಣವೆಂದರೆ ನಾಲ್ಕು-ನಾಲ್ಕು ಮನೆಗಳಿಗೊಂದು ಸಣ್ಣ-ಸಣ್ಣ ತರಕಾರಿ, ತಿಂಡಿ, ಕಿರಾಣಿ ಸಾಮಾನು ಮಾರಾಟ ಮಾಡುವ ಅಂಗಡಿಗಳು, ಮಿರ್ಚಿ, ಮಂಡಾಳ ಅಂಗಡಿಗಳು ಸಿಗುತ್ತವೆ.ಈ ಪ್ರದೇಶದ ಮಹಿಳೆಯರು ತಮ್ಮ ಜಮೀನಿನಲ್ಲಿ ಬೆಳೆದ ಬೆಳೆಯನ್ನು ಸಂತೆಯ ದಿನದಂದು ಹೋಬಳಿ, ತಾಲೂಕುಗಳಲ್ಲಿ ನಡೆಯುವ ಸಂತೆಗಳಿಗೆ ಹೋಗಿ ಮಾರಾಟ ಮಾಡಿ ಬರುತ್ತಾರೆ. ಎರಡು ದಿನಗಳಿಗೊಮ್ಮೆ ಮಹಿಳೆಯರು ತಾವು ಬೆಳೆದ ತರಕಾರಿಯನ್ನು ಅಥವಾ ಬೇರೆಯವರ ಜಮೀನಿನಲ್ಲಿ ಬೆಳೆದ ತರಕಾರಿಯನ್ನು ತೆಗೆದುಕೊಂಡು ಹೋಗಿ ಊರಲ್ಲೆಲ್ಲ ಮಾರಾಟ ಮಾಡುವುದು ಇದೆ.

ಮಹಿಳೆಯರು ಮಾಡುವ ಮಾಧ್ಯಮಿಕ ವೃತ್ತಿಯು ದೊಡ್ಡ ಲಾಭವನ್ನು ಪಡೆಯುವ ಉದ್ದೇಶದ್ದಲ್ಲ. ಅವರ ದಿನದ ಖರ್ಚು ವೆಚ್ಚಗಳನ್ನು ಪೂರೈಸಲು ಇದನ್ನು ಮಾಡುತ್ತಾರೆ.

ಮನೆಯ ಒಳ–ಹೊರಗಿನ ಬದಲಾಗುತ್ತಿರುವ ಪಾತ್ರ ಮತ್ತು ಕಟ್ಟುಪಾಡುಗಳನ್ನು ನಿಭಾಯಿಸಲು ಮಹಿಳೆಯರು ಸಣ್ಣ ವ್ಯಾಪಾರವನ್ನು ಮಾಡುತ್ತಾರೆ. ಈ ತೆರನಾದ ಚಟುವಟಿಕೆ, ಕೆಲಸ ಕಾರ್ಯಗಳಿಗೆ ಕೌಶಲ್ಯ, ತರಬೇತಿ, ಅನುಭವ, ಶಿಕ್ಷಣವು ಬೇಕಾಗುವುದಿಲ್ಲ ಮತ್ತು ಹೆಚ್ಚಿನ ಬಂಡವಾಳದ ಅವಶ್ಯಕತೆ ಇಲ್ಲ. ಈ ಮೂಲಕ ಅದೇ ವಾಸಿಸುವ ಸ್ಥಳದಲ್ಲಿಯೇ ಕೆಲಸ ದೊರಕುತ್ತದೆ. ಇವರು ಆದಾಯವನ್ನು ಪ್ರತಿದಿನ ಅಥವಾ ಎರಡು ದಿನಕ್ಕೊಮ್ಮೆ ಪಡೆಯುತ್ತಾರೆ. ಮಾರುಕಟ್ಟೆಯ ಅವಶ್ಯಕತೆಗೆ ಅನುಗುಣವಾಗಿ ಅದು ಬದಲಾಗುತ್ತಲೇ ಇರುತ್ತದೆ. ಮಳೆಗಾಲ, ಬೇಸಿಗೆ ಕಾಲದ ಏರಿಳಿತವು ಮಹಿಳೆಯ ಕೆಲಸದ ಏರಿಳಿತವನ್ನು ಮಾಡುತ್ತದೆ. ಕೃಷಿಕಾಲದಲ್ಲಿ ಸುಗ್ಗಿಯ ಕಾಲದಲ್ಲಿ ಮಹಿಳೆಯರು ವ್ಯಾಪಾರ ವ್ಯವಹಾರಗಳಿಗೆ ಕಡಿಮೆ ಸಮಯವನ್ನು ನೀಡುತ್ತಾರೆ ಮತ್ತು ಕೆಲವು ಸಮಯ ಇಂತಹ ಸಣ್ಣಪುಟ್ಟ ವ್ಯಾಪಾರ ಚಟುವಟಿಕೆಗಳನ್ನು ನಿಲ್ಲಿಸುತ್ತಾರೆ. ಸಸಿಗಳನ್ನು ಹಾಕುವ, ಕಳೆ ತೆಗೆಯುವ ಮತ್ತು ರಾಶಿ ಮಾಡುವ ಸಮಯದಲ್ಲಿ ಮಹಿಳೆಯರು ಬೇರೆ ಕೆಲಸವನ್ನು ನಿರ್ವಹಿಸುವುದಿಲ್ಲ. ಆ ಸಮಯದಲ್ಲಿ ಅವರು ಅಡುಗೆ ಮಾಡುವ, ಆಹಾರ ತಯಾರಿಸಿ ಕೊಡುವ ಕೆಲಸಗಳನ್ನು ಮಾಡುತ್ತಾರೆ. ಕೆಲವು ಸಲ ಮನೆಕೆಲಸ ಮತ್ತು ಕೃಷಿಕೆಲಸದ ನಡುವೆ ಸಂಘರ್ಷಗಳು ಬರುತ್ತವೆ. ಅವುಗಳನ್ನೆಲ್ಲಾ ಮಹಿಳೆಯರು ನಿಭಾಯಿಸಿಕೊಂಡು ಹೋಗುತ್ತಿರುವುದನ್ನು ಕಾಣಬಹುದು.

**ಆದಾಯ**

ಗ್ರಾಮೀಣ ಭಾಗದ ಕುಟುಂಬದ ಆದಾಯ ಸಾಮಾನ್ಯವಾಗಿ ಕಡಿಮೆ ಇರುತ್ತದೆ. ಅಧ್ಯಯನದ ಉದ್ದೇಶಕ್ಕಾಗಿ ಕುಟುಂಬ ವಾರ್ಷಿಕ ಆದಾಯವನ್ನು ಕೇಳಿದರೆ ಸರಿಯಾಗಿ, ನಿಖರವಾಗಿ ಉತ್ತರವನ್ನು ನೀಡಲಿಲ್ಲ. ಏಕೆಂದರೆ ಕುಟುಂಬಕ್ಕೆ ಆದಾಯವು ನಿರಂತರವಾಗಿ ಇರುವುದಿಲ್ಲ. ಅಲ್ಲದೆ ಅವರು ಮಾಡುವ ಎಲ್ಲ ಕೆಲಸಗಳು ಆದಾಯ / ಹಣದ ಮೌಲ್ಯವನ್ನು ತರುವ ಕೆಲಸಗಳಾಗಿರುವುದಿಲ್ಲ ಎನ್ನುವುದು ಅವರ ಅಭಿಮತ. ಆದ್ದರಿಂದ ಕಳೆದ ವರ್ಷದ ಬೆಳೆ ಮತ್ತು ಮಾರಾಟದ ಬೆಲೆ ಹಾಗೂ ಮಾಧ್ಯಮಿಕ ಆರ್ಥಿಕ ಚಟುವಟಿಕೆಗಳನ್ನು ಒಟ್ಟು ಸೇರಿಸಿ ಮಾಡಲಾಯಿತು. ಸರಾಸರಿ ಆದಾಯ ಕಡಿಮೆ ಇರುವುದು ಎಂದಿರುವವರ ಸಂಖ್ಯೆ ಅಧಿಕವಾಗಿದೆ.

ಮನೆಯ ವಾರ್ಷಿಕ ಆದಾಯ ಎನ್ನುವುದು ಮಹಿಳೆಯ ದೃಷ್ಟಿಕೋನದಿಂದ ನೋಡಿದಾಗ ವಿಷಾದವೆನಿಸುತ್ತದೆ. ಏಕೆಂದರೆ ಮಹಿಳೆ ಮಾಡುವ ಕುಟುಂಬಸಂಬಂಧಿ ಕೆಲಸ ಆದಾಯವನ್ನು ತರುವುದಿಲ್ಲ. ಕುಟುಂಬ ಸಾಗಿಸಲು ಕೆಲಸಗಳನ್ನು ಮಾಡುವಳು.

ಕುಟುಂಬದ ಒಟ್ಟು ವಾರ್ಷಿಕ ಆದಾಯ ಎನ್ನುವುದಕ್ಕಿಂತ ಕುಟುಂಬಕ್ಕಾಗಿ ಸದಸ್ಯರು ಎಷ್ಟು ಅವಧಿಯ ಶ್ರಮವನ್ನು ವ್ಯಯಿಸುತ್ತಾರೆ ಎನ್ನುವುದು ಮುಖ್ಯ. ಆದಾಯ ತರುವ ಚಟುವಟಿಕೆಗಳನ್ನು ಒಟ್ಟುಗೂಡಿಸಿ ಕುಟುಂಬದ ಆದಾಯವನ್ನು ಅಂದಾಜಿಸಲಾಗಿದೆ. ಪುರುಷರು ಆದಾಯ ತರುವ ಚಟುವಟಿಕೆಗಳಲ್ಲಿ ಹೆಚ್ಚು ತೊಡಗಿಸಿಕೊಂಡರೆ ಮಹಿಳೆಯರು ಕಡಿಮೆ ತೊಡಗಿಸಿಕೊಂಡಿರುವುದು ಕಂಡುಬರುತ್ತದೆ.

ಬಡತನದಲ್ಲಿ ಬೇಯುವ ಕುಟುಂಬಗಳ ಸಂಖ್ಯೆ ಹೆಚ್ಚಾಗಿರುವುದು ಕಂಡುಬಂದಿದೆ. ಮಧ್ಯಾಹ್ನದ ಊಟಕ್ಕೆ ಅನ್ನ ಮತ್ತು ಸಾಂಬಾರ ಮಾತ್ರ ಮಾಡುತ್ತಾರೆ. ಸಾಂಬಾರನ್ನು ತರಕಾರಿ ಹಾಕಿ ಮಾಡುವುದಿಲ್ಲ. ಇದರಿಂದ ಅಪೌಷ್ಟಿಕತೆಗೆ ಒಳಗಾದ ಮಕ್ಕಳ ಸಂಖ್ಯೆಯು ಅಧಿಕ. ಈ ಆಹಾರಕ್ಕಾಗಿಯೇ ಅವರ ದುಡಿಮೆಯ ಹೆಚ್ಚಿನ ಭಾಗವನ್ನು ಬಳಸಲಾಗುತ್ತದೆ.

ಕುಟುಂಬದ ಖರ್ಚು-ವೆಚ್ಚಗಳನ್ನು ಮಹಿಳೆ ಮತ್ತು ಪುರುಷರು ಜೊತೆಯಾಗಿ ನಿರ್ಧರಿಸುವುದಿಲ್ಲ. ಈ ಪ್ರದೇಶದ ಮಹಿಳೆ ಮತ್ತು ಪುರುಷರು ಪ್ರತ್ಯೇಕವಾಗಿ ಇದರ ಖರ್ಚು-ವೆಚ್ಚಗಳನ್ನು ನಿಭಾಯಿಸುತ್ತಾರೆ. ವೈಯಕ್ತಿಕ ಆದಾಯ ಮತ್ತು ಸಂಪನ್ಮೂಲಗಳಿಂದ ದಂಪತಿಗಳು ತಮ್ಮ ಸಿದ್ಧ ಮಾದರಿಯ ಪಾತ್ರಗಳನ್ನು ನಿಭಾಯಿಸುತ್ತಾರೆ. ಕೆಲವು ಬಾರಿ ಅದು ಕುಟುಂಬೇತರ ಸದಸ್ಯರ ಅಗತ್ಯಗಳನ್ನು ಪೂರೈಸಲು ಸಹ ಸಹಾಯ ಮಾಡುತ್ತದೆ. ಇದರಿಂದ ಕುಟುಂಬದ ಖರ್ಚು-ವೆಚ್ಚದ ಮಾದರಿಗಳು ಲಿಂಗವ್ಯವಸ್ಥೆಯನ್ನು ಅವಲಂಬಿಸಿವೆ. ವಾಸ್ತವದಲ್ಲಿ ಕುಟುಂಬದ ಕೃಷಿ ಆದಾಯ ಕಡಿಮೆಯಾಗಿದ್ದು, ಮಹಿಳೆಯರು ಸಣ್ಣಪುಟ್ಟ ವ್ಯಾಪಾರ ವ್ಯವಹಾರಗಳಿಂದ ಮನೆಯನ್ನು ನಿಭಾಯಿಸುತ್ತಾರೆ. ಮಹಿಳೆ ಮತ್ತು ಪುರುಷರು ತಾವು ದುಡಿದ ಹಣವನ್ನು ತಮ್ಮ ಅಗತ್ಯಕ್ಕೆ ಅನುಸಾರವಾಗಿ ವೆಚ್ಚ ಮಾಡುವರು. ಕೆಲವು ಕುಟುಂಬಗಳಲ್ಲಿ ಇಬ್ಬರ ಆದಾಯವನ್ನು ಸೇರಿಸಿ ಖರ್ಚು-ವೆಚ್ಚ ಮಾಡಿದರು. ಅವು ಪರಿಣಾಮಕಾರಿಯಾಗಿಲ್ಲ. ಬ್ರೈಡನ್ ಮತ್ತು ಚಾಂಟ್ ಪ್ರಕಾರ "ದಂಪತಿಗಳು ಆರ್ಥಿಕ ಜವಾಬ್ದಾರಿಗಳನ್ನು ಕುಟುಂಬದ ಆರ್ಥಿಕ ಅಗತ್ಯಗಳಿಗೆ ಅನುಸಾರವಾಗಿ ಸಾಮಾಜಿಕ ನಿರೀಕ್ಷೆಗಳೊಂದಿಗೆ ಜನರು ಒಪ್ಪಿಕೊಳ್ಳುವಂತಹ ಹಂಚಿಕೆಯನ್ನು ಮಾಡಿಕೊಂಡಿರುತ್ತಾರೆ. ಈ ಪ್ರದೇಶದ ಮಹಿಳೆ ಮತ್ತು ಪುರುಷರು ಪ್ರಾಧಾನ್ಯತೆ ನೀಡುವ ಅತ್ಯಗತ್ಯಗಳು ಬೇರೆಬೇರೆಯಾಗಿವೆ. ಉದಾಹರಣೆಗೆ ಕೆಲಸ ಮಾಡುವ ಅಥವಾ ದುಡಿಯುವ ಕುಟುಂಬದ ಪುರುಷರು ಕುಟುಂಬದ ಪ್ರಧಾನ/ಪ್ರಮುಖ ವೆಚ್ಚಗಳನ್ನು ನಿಭಾಯಿಸಿದರೆ ಮಹಿಳೆಯರು ಪೂರಕ ವೆಚ್ಚಗಳನ್ನು ನಿಭಾಯಿಸುತ್ತಾರೆ"(ಬ್ರೈಡಾನ್, ಎಲ್. & ಚಾಂಟ್ ಎಸ್., ೧೯೮೯, ಪು.೪೫೪).

ಮಹಿಳೆ ಮತ್ತು ಪುರುಷರು ಸಾಮಾಜಿಕ ಸಂಪರ್ಕ ಮತ್ತು ಸಂಬಂಧಿಕರ ಹಲವಾರು ಕಾರ್ಯಕ್ರಮಗಳಿಗೆ ಅಗತ್ಯವಿದ್ದಾಗ ತಮ್ಮ ಕೈಯಲ್ಲಾದಷ್ಟು ಹಣವನ್ನು ನೀಡುತ್ತಾರೆ. ಇದರಿಂದ

ಅವರ ಸಾಮಾಜಿಕ ಸ್ಥಾನಮಾನ ಹೆಚ್ಚಾಗುತ್ತದೆ ಅಲ್ಲದೆ ಅವರ ಬಾರ್‌ಗೈನಿಂಗ್ ಮಾಡುವ ಶಕ್ತಿಯು ಹೆಚ್ಚಾಗುತ್ತದೆ. ಆಪ್ಪಾಂಗ್ ಅವರು "ಮಹಿಳೆಯರ ಕುಟುಂಬದಾಚೆಯ ಹೂಡಿಕೆಯು ಅವರ ವೈವಾಹಿಕ ಸಂಬಂಧಗಳಲ್ಲಿ ಚೌಕಾಸಿಯ ಅಧಿಕಾರವನ್ನು ಉತ್ತಮಪಡಿಸುತ್ತದೆ ಮತ್ತು ವಿವಾಹ ಮತ್ತು ವೈವಾಹಿಕ ಸಂಬಂಧಗಳ ಬೇರ್ಪಡುವಿಕೆಯನ್ನು ರಕ್ಷಿಸುತ್ತದೆ ಎಂದು ಹೇಳಿದ್ದಾರೆ"(ಉಧೃತ: ಮೂರ್ ಹೆಚ್., ೧೯೯೨, ಪು. ೨೧೭).

ಕೋಷ್ಟಕ ೪.೧೦.

**ವಲಸೆಯ ಚಲನೆಯ ಸ್ವರೂಪ**

| ವಿವರ | ಪುರುಷರು | ಮಹಿಳೆಯರು |
|---|---|---|
| ಬೇರೆ ಗ್ರಾಮಕ್ಕೆ | ೦೫% | ೩೮% |
| ನಗರಕ್ಕೆ | ೩೦% | ೮% |
| ಬೇರೆ ಜಿಲ್ಲೆಗೆ | ೫೭% | ೫೨% |
| ಬೇರೆ ರಾಜ್ಯಕ್ಕೆ | ೦೮% | ೦೨% |
| ಬೇರೆ ರಾಷ್ಟ್ರಕ್ಕೆ | ೦೦ | ೦೦ |

ವಲಸೆಯಲ್ಲಿ ಹಲವು ವಿಧಗಳಿವೆ. ಆದರೆ ಈ ಅಧ್ಯಯನದಲ್ಲಿ ದುಡಿಮೆಗಾಗಿ ಬೇರೆ ಜಿಲ್ಲೆ ಹಾಗೂ ನಗರಗಳಿಗೆ ವಲಸೆ ಹೋಗಿರುವುದು ಹೆಚ್ಚು ಕಂಡುಬಂದಿದೆ. ಈ ಪ್ರದೇಶದಲ್ಲಿ ಅಂತಾರಾಷ್ಟ್ರೀಯ ವಲಸೆಯ ಸಂಖ್ಯೆ ಶೂನ್ಯವಾಗಿದೆ. ಬೇರೆ ಜಿಲ್ಲೆಗಳಿಗೆ ವಲಸೆ ಹೋದವರ ಪ್ರಮಾಣವೇ ಅಧಿಕವಾಗಿದೆ. ನಂತರ ಬೇರೆ ಗ್ರಾಮಗಳಿಗೆ ವಲಸೆ ಹೋಗುವವರಲ್ಲಿ ಮಹಿಳೆಯರ ಸಂಖ್ಯೆ ಅಧಿಕವಾಗಿದೆ. ಏಕೆಂದರೆ ವಿಧವೆಯರು, ವಿಚ್ಛೇದಿತರು ಮತ್ತು ವೈವಾಹಿಕ ಸಮಸ್ಯೆಗಳನ್ನು ಮಹಿಳೆಯರು ಎದುರಿಸುತ್ತಿರುವವರು. ಅಂದರೆ ವಿವಾಹವಾದ ಗ್ರಾಮದಲ್ಲಿ ವೈವಾಹಿಕ ಸಮಸ್ಯೆಗಳಿಂದ ಮಹಿಳೆಯರು ಸ್ವತಂತ್ರವಾಗಿ ಜೀವನ ನಡೆಸಲು ಕಷ್ಟವಾಗುತ್ತದೆ. ಏಕೆಂದರೆ ಒಬ್ಬ ಮಹಿಳೆಗೆ ವೈವಾಹಿಕ ಸಮಸ್ಯೆಗಳಾದಾಗ ಗಂಡನ ಸಂಬಂಧಿಗಳು ಸಹ ಮಹಿಳೆಗೆ ಸಹಾಯ, ಸಹಕಾರದ ಬದಲು ಅವಮಾನ, ನೋವು, ಹಿಂಸೆ ಮಾಡುವುದರಿಂದ ಅವರಿಗೆ ಸಾಮಾಜಿಕ ಮರ್ಯಾದೆಯ ಭಯ, ಸಮಾಜದ ರೀತಿ-ನೀತಿಗಳು ಸ್ವತಂತ್ರವಾಗಿ ಬದುಕನ್ನು ಕಟ್ಟಿಕೊಳ್ಳಲು ಅಡ್ಡಿಪಡಿಸುತ್ತಲೇ ಇರುತ್ತವೆ. ಅವರು ತವರು ಮನೆಯವರು ಬಂದು ಹೋಗಲು ಅನುಕೂಲವಾಗುವ ಗ್ರಾಮಗಳಿಗೆ ವಲಸೆ ಹೋಗಿರುವುದು ಕಂಡುಬಂದಿದೆ. ಪುರುಷರು ಬೇರೆ ಗ್ರಾಮಕ್ಕೆ ವಲಸೆ ಹೋಗಿರುವುದು ಬಹಳ ಕಡಿಮೆ. ಏಕೆಂದರೆ ಅವರು ದುಡಿಮೆಗೆ ಹೆಚ್ಚು ಕೂಲಿಯನ್ನು ನಿರೀಕ್ಷೆ ಮಾಡುತ್ತಾರೆ. ಅದು ನಗರದಲ್ಲಿ ಲಭ್ಯವಾಗುತ್ತದೆ. ಆದರೆ ಮಹಿಳೆಯರು ಬದುಕಿ ಉಳಿಯುವುದೇ ಹರ ಸಾಹಸವಾಗಿರುವುದನ್ನು ಇದು ತೋರಿಸುತ್ತದೆ.

ಕೋಷ್ಟಕ ೪.೧೧.

**ವಲಸೆಗೆ ಕಾರಣಗಳು**

| ಕಾರಣಗಳು | ಪುರುಷ ವಲಸೆ | ಶೇಕಡವಾರು | ಮಹಿಳಾ ವಲಸೆ | ಶೇಕಡವಾರು |
| --- | --- | --- | --- | --- |
| ಕೆಲಸದ ಅನ್ವೇಷಣೆಯಲ್ಲಿ | ೧೦೧ | ೫೦.೫ | ೦೧ | ೦.೫ |
| ಕೂಲಿ ಹೆಚ್ಚಾಗಿರುವುದರಿಂದ | ೨೧ | ೧೦.೫ | ೦೮ | ೪ |
| ವಿವಾಹ | ೦೨ | ೧.೦ | ೩೬ | ೧೮ |
| ಸಹ-ವಲಸೆ | -- | -- | ೯೨ | ೪೬ |
| ಸಾಮಾಜಿಕ/ ರಾಜಕೀಯ | ೩೩ | ೧೬.೫ | ೧೩ | ೬.೫ |
| ವೈವಾಹಿಕ ಸಮಸ್ಯೆಗಳಿಂದಾಗಿ | ೦೩ | ೧.೫ | ೫೦ | ೨೫ |
| ವೃತ್ತಿಯ ಕಾರಣದಿಂದ | ೪೦ | ೨೦ | -- | -- |
| ಒಟ್ಟು | ೨೦೦ | ೧೦೦ | ೨೦೦ | ೧೦೦ |

ಪುರುಷರ ವಲಸೆಗೆ ಕೆಲಸದ ಕಾರಣಗಳೇ ಹೆಚ್ಚಾಗಿವೆ. ಅವರು ವಾಸಿಸುವ ಪ್ರದೇಶದಲ್ಲಿ ಕೆಲಸ ದೊರಕದೇ ಇದ್ದಾಗ ಬೇರೆ ಪ್ರದೇಶಕ್ಕೆ ವಲಸೆ ಹೋಗಬೇಕಾಗುವುದು ಅನಿವಾರ್ಯವಾಗುತ್ತದೆ. ಹಾಗೆಯೇ ಸಾಮಾಜಿಕ, ರಾಜಕೀಯ ಕಾರಣಗಳು ಸಹ ಇವೆ. ಅಂದರೆ ಜಾತಿಯ ಕಾರಣಕ್ಕಾಗಿ, ಬಡವರು ಎನ್ನುವ ಕಾರಣಕ್ಕಾಗಿ ತುಂಬಾ ಕನಿಷ್ಠವಾಗಿ ನಡೆಸಿಕೊಂಡು, ಸರಿಯಾಗಿ ಕೂಲಿ ನೀಡದೆ ಇದ್ದಾಗ, ಕೆಲಸದ ಆಳು ಎಂದು ಹೇಗೆ ಬೇಕೋ ಹಾಗೆ ಯಜಮಾನರು ವರ್ತಿಸಿದಾಗ ಆ ಪ್ರದೇಶದಿಂದ ಬೇರೆ ಪ್ರದೇಶಕ್ಕೆ ವಲಸೆ ಹೋಗುವುದು ಕಂಡುಬಂದಿದೆ. ಮಹಿಳೆಯರ ವಲಸೆಗೆ ಇರುವ ಕಾರಣಗಳನ್ನು ನೋಡಿದಾಗ ವಿವಾಹ ಮತ್ತು ಪುರುಷರ ಸಹ ವಲಸಿಗರಾಗಿ ವಲಸೆ ಹೋಗುವುದು ಒಟ್ಟು ವಲಸೆಯಲ್ಲಿ ಹೆಚ್ಚಾಗಿದೆ. ವೈವಾಹಿಕ ಸಮಸ್ಯೆಗಳಿಂದ ಸ್ವತಂತ್ರ ಜೀವನ ಕಟ್ಟಿಕೊಳ್ಳಲು ವಲಸೆ ಹೋಗಿರುವುದು ನಂತರದ ಸ್ಥಾನದಲ್ಲಿದೆ. ಭಾರತದಲ್ಲಿ ಮಹಿಳೆಯರ ವಲಸೆ ಕುರಿತ ಅಧ್ಯಯನಗಳು ಸಹ ಈ ಅಂಶವನ್ನೇ ದೃಢಪಡಿಸುತ್ತವೆ. ಮಹಿಳಾ ವಲಸೆಯು ಸ್ವತಂತ್ರವಾಗಿ ಹಣದ ರೂಪದ ದುಡಿಮೆಯ ಸಲುವಾಗಿ ಹೋಗುವ ಅಂಕಿ ಅಂಶ ಕಡಿಮೆ ಇದೆ. ಅವರ

ದುಡಿಮೆ ಏನಿದ್ದರೂ ಜೀವನೋಪಾಯಕ್ಕಾಗಿ ಮತ್ತು ಕುಟುಂಬಕ್ಕಾಗಿ ಮಾತ್ರ ಎನ್ನುವುದನ್ನು ಈ ಅಧ್ಯಯನವು ಗುರುತಿಸುವ ಅಂಶವಾಗಿದೆ.

**ಮನೆಯ ಬೆಂಬಲ**

ವ್ಯಕ್ತಿಗಳು ಗ್ರಾಮದಿಂದ ನಗರಕ್ಕೆ ವಲಸೆ ಹೋದಾಗ ತಮ್ಮ ಸಂಸ್ಕೃತಿ, ಆಚಾರ ವಿಚಾರಗಳನ್ನು ಹೊತ್ತೊಯ್ಯುವುದು ಸಹಜ. ಆದರೆ ವಲಸೆ ಹೋಗುವ ಜನರಿಗೆ ತಮ್ಮ ಮನೆ, ಗ್ರಾಮಗಳಿಂದ ಮತ್ತು ನೆರೆ-ಹೊರೆಯವರಿಂದ ಸಾಧ್ಯವಾದಷ್ಟು ಸಹಾಯ, ಸಹಕಾರ ಪ್ರಾರಂಭದಲ್ಲಿ ದೊರಕುತ್ತದೆ. ನಂತರದ ದಿನಗಳಲ್ಲಿ ಈ ಸಹಾಯ, ಸಹಕಾರ ಸಹಜವಾಗಿ ಇರುವುದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಗ್ರಾಮದಲ್ಲಿ ಪಡಿತರ ಚೀಟಿಯಿಂದ, ಕೂಲಿಯಿಂದ ಪಡೆದ ದವಸ ಧಾನ್ಯ, ಹೊಲಗಳಲ್ಲಿ ಬೆಳೆದ ಬೆಳೆಯ ಅಲ್ಪಪ್ರಮಾಣವನ್ನು ದುಡಿಯಲು ಹೋದವರ ಮೇಲಿನ ಕರುಣೆ, ಪ್ರೀತಿಯಿಂದ ಆರಂಭದಲ್ಲಿ ನೀಡುವುದು, ನಂತರ ಕಡಿಮೆ ಮಾಡುವರು ಎಂದು. ಇನ್ನು ವಲಸೆ ಹೋದ ಹೆಣ್ಣು ಮಕ್ಕಳಿಗೆ ತವರು ಮನೆಯವರನ್ನು ಬಿಟ್ಟರೆ ಬೇರೆಯವರಿಂದ ಸಿಗುವ ಸಹಾಯ ಅಷ್ಟಕಷ್ಟೇ ಎನ್ನಬಹುದು.

ಕೋಷ್ಟಕ ೪.೧೨.

**ವಲಸೆ ಬಂದ ಸ್ಥಳದಲ್ಲಿ ನಿರ್ವಹಿಸುವ ಕೆಲಸಗಳ ವಿವರ**

| ವಿವರ | ಪುರುಷರು | ಮಹಿಳೆಯರು |
|---|---|---|
| ಕೂಲಿ | ೫೭% | ೫೨% |
| ಕೃಷಿ | ೩೦% | ೩೨% |
| ವ್ಯಾಪಾರ | ೫% | ೨% |
| ವ್ಯವಹಾರ | ೮% | ೨% |
| ಸರ್ಕಾರಿ ಕೆಲಸ | ೦೦ | ೦೦ |

ವಲಸಿಗರು ವಲಸೆ ಪ್ರದೇಶದಲ್ಲಿ ತಾವು ವಲಸೆ ಬಂದ ಪ್ರದೇಶಕ್ಕಿಂತ ಭಿನ್ನವಾದ ಕೆಲಸಗಳನ್ನು ನಿರ್ವಹಿಸುವುದಿಲ್ಲ. ಆದರೆ ಏಕೆ ವಲಸೆ ಬರುತ್ತಾರೆ ಎಂದು ನೋಡಿದಾಗ ಅವರ ಪ್ರದೇಶದ ಹೊಲಗಳಲ್ಲಿ ಕೆಲಸ ಮಾಡುವವರು ವಲಸೆ ಪ್ರದೇಶದಲ್ಲಿ ಕಟ್ಟಡ ಕಾರ್ಮಿಕರಾಗಿ ಹಾಗೂ ಇಟ್ಟಿಗೆ ಭಟ್ಟಿ ಕಾರ್ಮಿಕರಾಗಿ ದುಡಿಯುವವರು ಅಧಿಕವಾಗಿ ಕಂಡು ಬರುತ್ತಾರೆ. ಏಕೆಂದರೆ ಅಲ್ಲಿ ಪ್ರತಿದಿನ ಕೆಲಸವಿರುತ್ತದೆ. ಕೃಷಿ ಕೆಲಸವೆಂದರೆ ಕಬ್ಬು ಕಡಿಯುವುದು ಮತ್ತು ಕಾಫಿ ತೋಟದ ಕೆಲಸ. ಇಲ್ಲಿ ಕಬ್ಬು ಕಡಿಯಲು ಗುತ್ತಿಗೆ ಪಡೆಯುವುದು, ಕೆಲಸ ಆರಂಭಿಸುವುದು, ಮುಗಿಸುವುದು. ಅವರಿಗೆ ಬೇಕಾದ ಸಮಯದಲ್ಲಿ ಕೆಲಸ ಮಾಡುವ ಸ್ವಾತಂತ್ರ್ಯವಿರುತ್ತದೆ. ಹಾಗೆಯೇ ವಲಸೆ ಬಂದ ಪ್ರದೇಶಕ್ಕೆ ಹೋಲಿಸಿದರೆ

ಕೂಲಿ ಅಧಿಕವಾಗುತ್ತದೆ. ಅಸ್ಪೃಶ್ಯತೆಯ ತಾಪವು ಕಡಿಮೆ. ಇನ್ನೂ ಹೆಣ್ಣುಮಕ್ಕಳಿಗೆ ಮನೆಯಲ್ಲಿರುವಷ್ಟು ನಿರ್ಬಂಧವಿಲ್ಲ. ಕೂಲಿ ಅಗತ್ಯವಾದರೆ ಮುಂಗಡ ಸಿಗುತ್ತದೆ. ನಗರ ಮತ್ತು ನಗರಕ್ಕೆ ಹತ್ತಿರವಿರುವ ಪ್ರದೇಶಕ್ಕೆ ತಮ್ಮ ಅಗತ್ಯಕ್ಕೆ ತಕ್ಕಂತೆ ಓಡಾಡಲೂ ಅವಕಾಶವಿರುತ್ತದೆ. ಇದರಿಂದ ತಮ್ಮ ತಿಂಗಳ ಹಾಗೂ ವಾರ್ಷಿಕ ಆದಾಯದ ಬಗ್ಗೆ ಖಚಿತವಿರುತ್ತದೆ. ಇದರಿಂದ ಅವರ ಜೀವನ ನಡೆಸಲು ಹಾಗೂ ತಮ್ಮ ಮೂಲ ಸ್ಥಾನದ ಸಮಸ್ಯೆಯನ್ನು ಬಗೆಹರಿಸಲು ಬಳಸುವುದು ಅನುಕೂಲ ಎಂಬುದು ಅವರ ಅಭಿಮತವಾಗಿದೆ.

ಕೋಷ್ಟಕ ೪.೧೩.

**ವಲಸಿಗರು ಕುಟುಂಬಕ್ಕೆ ನೀಡುವ ಹಣ ಸ್ವರೂಪ**

| ವಿವರ | ನೀಡುವುದಿಲ್ಲ | ನೀಡುತ್ತಾರೆ |
|---|---|---|
| ಪುರುಷ | ೨೨% | ೭೮% |
| ಮಹಿಳೆ | ೦೪% | ೯೬% |

ವಲಸೆ ಹೋದವರಲ್ಲಿ ಭೂರಹಿತರೇ ಅಧಿಕವಾಗಿರುವುದರಿಂದ ಅವರು ತಾವು ದುಡಿದ ಆದಾಯದಲ್ಲಿ ತಮ್ಮ ಮನೆಗಳಿಗೆ ನೀಡುತ್ತಿರುವುದು ಕಂಡುಬರುತ್ತದೆ. ಪುರುಷರಿಗಿಂತ ಮಹಿಳೆಯರು(೯೬%) ಹೆಚ್ಚಾಗಿ ನೀಡುತ್ತಿದ್ದಾರೆ. ಮಹಿಳೆ ಒಂದು ವೇಳೆ ಮನೆಗೆ ಆದಾಯ ಕೊಡದೇ ಇದ್ದರೆ, ಆಕೆಗೆ ತೊಂದರೆ ಕಟ್ಟಿಟ್ಟ ಬುತ್ತಿ. ಹಾಗಾಗಿ ಮಹಿಳೆಯರಲ್ಲಿ ಆದಾಯ ಹಂಚುವುದು ಪುರುಷರಿಗಿಂತ ಅಧಿಕವಾಗಿದೆ. ಸಂದರ್ಶನ ಸಮಯದಲ್ಲಿ ಆದಾಯವನ್ನು ಎಷ್ಟು ಕೊಡುತ್ತೀರಿ, ನಿಮಗೆ ಎಷ್ಟು ಆದಾಯ ಬರುತ್ತದೆ ಎಂದು ಕೇಳಿದಾಗ ನಿಖರವಾಗಿ ಯಾರೂ ಹೇಳಲು ಇಷ್ಟಪಡಲಿಲ್ಲ. ಆದರೆ ಕೊಡುತ್ತಿರುವುದು ಮಾತ್ರ ಮನದಟ್ಟಾಯಿತು. ಹೇಗೆಂದರೆ ವರ್ಷಕ್ಕೆ ಒಂದು ಎರಡು ಸಲ ಊರಿಗೆ ಹೋದಾಗ ಹಬ್ಬ ಹರಿದಿನಗಳಿಗೆ ಖರ್ಚು–ವೆಚ್ಚವನ್ನು ಭರಿಸುವುದು, ಮನೆಯಲ್ಲಿ ಹಿರಿಯರಿಗೆ–ಕಿರಿಯರಿಗೆ ಅನಾರೋಗ್ಯವುಂಟಾದಾಗ ಆಸ್ಪತ್ರೆ ವೆಚ್ಚವನ್ನು ಭರಿಸಿರುವುದಾಗಿ ಹೇಳಿದರು. ಪ್ರತಿ ತಿಂಗಳು ಮನೆಗೆ ಆದಾಯವನ್ನು ಕೊಡುವುದಿದ್ದರೂ ಯಾವುದೇ ಘಟನೆಗಳು ಘಟಿಸಿದಾಗ ಅದಕ್ಕೆ ಸಕಾರಾತ್ಮಕವಾಗಿ ಸ್ಪಂದಿಸಿರುವುದು ಕಂಡುಬರುತ್ತದೆ.

ವಲಸೆ ಹೋದವರು ಕುಟುಂಬದ ಮುಖ್ಯಸ್ಥರಿಗೆ ಹಣವನ್ನು ಅವರು ಊರಿಗೆ ಬಂದಾಗ ಕೊಡುತ್ತಾರೆ. ಅದು ಮಹಿಳೆ ಮುಖ್ಯಸ್ಥಳಾದರೂ ಆಗಿರಬಹುದು ಅಥವಾ ಪುರುಷ ಮುಖ್ಯಸ್ಥರಾದರೂ ಆಗಿರಬಹುದು. ಅವರ ಕೈಗೆ ಹಣವನ್ನು ಮನೆಯ ಎಲ್ಲರ ಸಮ್ಮುಖದಲ್ಲಿ ನೀಡುತ್ತಾರೆ. ಆ ಮೂಲಕ ವಲಸಿಗರು ದುಡಿಮೆಯ ಕೊಡುಗೆಯನ್ನು ಮೂಲ ಸ್ಥಾನದ ಮನೆಯ ಇತರ ಸದಸ್ಯರು ಅನುಭವಿಸುತ್ತಾರೆ.

ಕೋಷ್ಟಕ ೪.೧೪.

ವರ್ಷಕ್ಕೆ ನೀಡುವ ಸರಾಸರಿ ಹಣ

| ಸರಾಸರಿ ಹಣ | ಪುರುಷರು | ಮಹಿಳೆಯರು |
|---|---|---|
| ೫೦೦೦-೧೦೦೦೦ | ೭೧% | ೯೨ |
| ೧೧೦೦೦-೨೦೦೦೦ | ೦೬ | ೦೪% |
| ೨೦ ಸಾವಿರಕ್ಕೂ ಅಧಿಕ | ೦೧% | -- |

ವಲಸೆ ಸದಸ್ಯರಲ್ಲಿ ಕುಟುಂಬದವರಿಗೆ ವರ್ಷಕ್ಕೆ ೧೦೦೦೦/-ರೂಪಾಯಿಗಳನ್ನು ಕೊಡುವ ಪ್ರಮಾಣದಲ್ಲಿ ಮಹಿಳೆಯರೇ ಅಧಿಕವಾಗಿದ್ದಾರೆ. ೨೦೦೦೦/- ರೂಪಾಯಿಗಳನ್ನು ಕೊಡುವ ಪ್ರಮಾಣ ಕಡಿಮೆ ಇದೆ. ಇದು ಅವರ ಕೂಲಿಯನ್ನು ಪ್ರತಿಬಿಂಬಿಸುತ್ತದೆ. ಇನ್ನು ಪುರುಷರು ವಲಸೆ ಹೋದ ಪ್ರದೇಶದಲ್ಲಿ ತಮ್ಮ ಬದುಕನ್ನು ತಾವು ನಿರ್ವಹಣೆ ಮಾಡಿಕೊಳ್ಳಬೇಕಾಗುವುದರಿಂದ ದುಡಿದ ಎಲ್ಲ ಹಣವನ್ನು ಕಳುಹಿಸಿಕೊಡಲು ಸಾಧ್ಯವಾಗುವುದಿಲ್ಲ. ಅಲ್ಲದೆ ಅವರಿಗೂ ಗಂಡ, ಹೆಂಡತಿ, ಮಕ್ಕಳು ಇರುವುದರಿಂದ ಅವರನ್ನು ನೋಡಿಕೊಳ್ಳುವ ಜವಾಬ್ದಾರಿಯ ಇರುತ್ತದೆ. ದೊಡ್ಡ ಮಟ್ಟದ ಕೂಲಿ ಇಲ್ಲದೆ ಇರುವುದರಿಂದ ಕುಟುಂಬದ ನಿರೀಕ್ಷೆಗಳನ್ನು ಪೂರ್ಣವಾಗಿ ಭರಿಸುವುದು ಕಷ್ಟವಾಗುತ್ತದೆ ಎಂದಿದ್ದಾರೆ. ಆದರೆ ಮನೆಯ ಯಜಮಾನರು ವರ್ಷಕ್ಕೆ ಇಷ್ಟು ಹಣವನ್ನು ನೀಡಲೇಬೇಕು ಎಂದು ಕಟ್ಟುನಿಟ್ಟಾಗಿ ಹೇಳಿದಾಗ ಕೆಲವು ಬಾರಿ ಗಲಾಟೆಗಳು ಆಗಿರುವುದು ಇದೆ. ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಮನೆಯಿಂದ ಯಾವುದೇ ಸ್ವರೂಪದ ಸಹಾಯ, ಸಹಕಾರ ಪಡೆಯುತ್ತಿರುವ ವಲಸಿಗರು ವರ್ಷಕ್ಕೆ ಇಂತಿಷ್ಟು ಹಣವನ್ನು ಅವರ ಕುಟುಂಬಕ್ಕೆ ನೀಡುತ್ತಾರೆ. ಯಾವುದೇ ಸಹಾಯ, ಸಹಕಾರ ಪಡೆಯದ ಸದಸ್ಯರು ಹಣವನ್ನು ವರ್ಷಕ್ಕೆ ನೀಡುವುದಕ್ಕಿಂತ ಆಯಾ ಸಂದರ್ಭಗಳಿಗೆ ತಕ್ಕಂತೆ ನೀಡುತ್ತಿರುವುದು ಕಂಡು ಬರುತ್ತದೆ.

ಕೋಷ್ಟಕ ೪.೧೫

ಮನೆಗೆ ಆದಾಯದ ನೀಡುವಿಕೆ

| ಮನೆಯ ಆದಾಯಕ್ಕೆ ಸರಾಸರಿ ಕೊಡುಗೆ ನೀಡಿದವರು | ಶೇಕಡವಾರು |
|---|---|
| ಗಂಡ | ೪೨.೩ |
| ಹೆಂಡತಿ | ೩೪.೮ |
| ವಲಸೆಹೋದ ಮಕ್ಕಳು | ೧೬.೨ |
| ಕುಟುಂಬದ ಇತರ ಸದಸ್ಯರು | ೬.೭ |

ನಕ್ಷೆ ೨.

**ಮನೆ ಆದಾಯದ ನೀಡುವಿಕೆ**




ಮಹಿಳೆ ಮತ್ತು ಪುರುಷರು ಕುಟುಂಬದ ಆದಾಯಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡುತ್ತಾರೆ. ಚಿತ್ರದಲ್ಲಿ ತೋರಿಸಿರುವಂತೆ ಆರ್ಥಿಕ ಸಂಪನ್ಮೂಲಗಳಲ್ಲಿ ಶೇಕಡಾ ೪೨.೩ರಷ್ಟು ಪುರುಷರು ಕುಟುಂಬಕ್ಕೆ ವ್ಯಯಿಸಿದರೆ, ಮಹಿಳೆಯರು ಶೇಕಡ ೩೪.೩ರಷ್ಟು ವ್ಯಯಿಸುವರು. ವಲಸೆ ಹೋದ ಮಕ್ಕಳು ಶೇಕಡ ೧೬.೨ರಷ್ಟು, ಕುಟುಂಬದ ಇತರ ಸದಸ್ಯರು ಶೇಕಡ ೬.೭ರಷ್ಟು ಇದೆ. ವಲಸೆ ಹೋದ ಮಕ್ಕಳಲ್ಲಿ ೮೭ ಪುರುಷ ವಲಸಿಗರು ಕುಟುಂಬಕ್ಕೆ ಆದಾಯ ನೀಡಿದರೆ ಮಹಿಳಾ ವಲಸಿಗರಲ್ಲಿ ೬೯ ಜನ ಕೊಡುಗೆ ನೀಡಿದ್ದಾರೆ. ವಲಸೆ ಹೋದ ಸ್ತ್ರೀ ಪುರುಷರಲ್ಲಿ, ಪುರುಷರು ಉತ್ತಮ ಆದಾಯದ ಅವಕಾಶವನ್ನು ಪಡೆದಿರುತ್ತಾರೆ. ಅದೇ ಮಹಿಳೆಯರು ಉತ್ತಮ ಆದಾಯದ ಅವಕಾಶವನ್ನು ಪಡೆದಿರುವುದಿಲ್ಲ. ಕೂಲಿ, ಕೃಷಿ ಹಾಗೂ ಸಣ್ಣ–ಪುಟ್ಟ ಕೆಲಸಗಳಲ್ಲಿ ತೊಡಗಿರುವುದರಿಂದ ಅವರ ಆದಾಯ ಕಡಿಮೆ ಇರುತ್ತದೆ. ಆದರೆ ಮಹಿಳೆ ನೀಡುವ ಕೊಡುಗೆಗಳು ಹಣದ ರೂಪದಲ್ಲಿ ಇರುವುದಿಲ್ಲ. ಮಹಿಳೆಯರು ಮನೆಯ ಕಷ್ಟಗಳನ್ನು ನಿರ್ವಹಿಸುವುದು ಕಂಡು ಬರುತ್ತದೆ.

ಕ್ಷೇತ್ರಕಾರ್ಯದ ಅವಧಿಯಲ್ಲಿ ಮಹಿಳೆಯರು ಆಹಾರ ಮತ್ತು ಕುಟುಂಬದ ಮೂಲಭೂತ ಅಗತ್ಯಗಳನ್ನು ಪೂರೈಸಬೇಕಾಗಿರುವುದು ನಮ್ಮ ಜವಾಬ್ದಾರಿ ಎಂದು ಹೇಳಿದ್ದಾರೆ. ಜೊತೆಗೆ ಮಕ್ಕಳ ಶಾಲೆಯ ಶುಲ್ಕ, ಬಟ್ಟೆ ಮತ್ತು ಆರೋಗ್ಯದ ವೆಚ್ಚಗಳಿಗಾಗಿ ಪುರುಷರಿಗೂ ನಾವು ಸಹಾಯ ಮಾಡುತ್ತೇವೆ ಎಂದಿರುವರು. ಪುರುಷ ಮತ್ತು ಮಹಿಳೆಯರ ಮಧ್ಯೆ ಪ್ರತಿದಿನದ ಚಟುವಟಿಕೆಗಳಲ್ಲಿ ದ್ವಂದ್ವ ಮತ್ತು ಸಂಘರ್ಷವಿರುವುದು ಕಂಡುಬರುತ್ತದೆ.

ಪುರುಷರು ತಮ್ಮ ತಮ್ಮ ಪಾತ್ರಗಳಲ್ಲಿಯೇ ಅಂದರೆ ತಂದೆ, ಗಂಡ, ಅಣ್ಣನಾಗಿಯೇ ಇರಲು ಬಯಸುತ್ತಾರೆ. ಆದರೆ ಆ ಪಾತ್ರಗಳು ಆರ್ಥಿಕವಾಗಿ ಸುರಕ್ಷತೆಯನ್ನು ತಂದು ಕೊಡುವುದಿಲ್ಲ. ಆದ್ದರಿಂದ ಮಹಿಳೆಯರು ಪ್ರತಿದಿನ ಖರ್ಚುವೆಚ್ಚಗಳನ್ನು ನಿಭಾಯಿಸಲು ಸಣ್ಣ-ಪುಟ್ಟ ವ್ಯವಹಾರ ಮಾಡುವುದನ್ನು ಕಾಣಬಹುದು. ಒಂದು ಸಣ್ಣ ಹೋಟೆಲ್ ನಡೆಸುತ್ತಿರುವ ಮಹಿಳೆ ಹೀಗೆ ಹೇಳುತ್ತಾಳೆ. ನನ್ನ ಗಂಡ ಮತ್ತು ಮಕ್ಕಳ ಊಟಕ್ಕೆ ನಾನೇ ಜವಾಬ್ದಾರಿಯಾಗಿದ್ದೇನೆ. ನಮ್ಮ ಭೂಮಿಯಲ್ಲಿ ಬೆಳೆಯದ ಆಹಾರ ಪದಾರ್ಥವನ್ನು ನಾನೇ ಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಉಪ್ಪು, ಎಣ್ಣೆ, ಬೆಲ್ಲ, ಮಸಾಲೆ ಪದಾರ್ಥ, ಮೊಟ್ಟೆ, ಮೀನು, ಮಾಂಸ ಇತ್ಯಾದಿ. ಭೂಮಿಯಿಂದ ಮತ್ತು ಹೊಟೇಲ್‌ನಿಂದ ಬಂದ ಆದಾಯದಿಂದ ಮಕ್ಕಳ ಶಾಲೆ ಫೀಸು, ಬಟ್ಟೆ ಮತ್ತು ಸಂಬಂಧಿಕರ ಮದುವೆ, ನಾಮಕರಣ, ಗೃಹಪ್ರವೇಶದ ಉಡುಗೊರೆಗಳನ್ನು ನೀಡಲು ನಾನೇ ಜೋಡಿಸಬೇಕಾಗುತ್ತದೆ" ಎಂದಿರುವಳು.

ಇನ್ನೊಬ್ಬ ಮಹಿಳೆ "ನನ್ನ ಗಂಡ ಹಣದ ವಿಷಯದಲ್ಲಿ ಬಹಳ ಬೇಜವಾಬ್ದಾರಿಯಾಗಿ ವರ್ತಿಸುತ್ತಾನೆ. ಮಕ್ಕಳ ಶಾಲಾ ಫೀಸು ಆತನೇ ಭರಿಸಬೇಕು, ಮನೆಯ ಖರ್ಚು-ವೆಚ್ಚಗಳನ್ನು, ಆರೋಗ್ಯದ ವೆಚ್ಚವನ್ನು ಅವನೇ ನಿರ್ವಹಿಸಬೇಕು. ಆದರೆ ಆತನು ಹಣವನ್ನು ಸರಿಯಾಗಿ ಇಟ್ಟುಕೊಳ್ಳುವುದಿಲ್ಲ ಮತ್ತು ಸರಿದೂಗಿಸಿಕೊಂಡು ಹೋಗುವುದಿಲ್ಲ. ಇದರಿಂದ ಹಲವು ಬಾರಿ ನಾನೇ ಆತನಿಗೆ ಮನೆಯನ್ನು ನಡೆಸಲು ಸಹಾಯ ಮಾಡಬೇಕಾಗುತ್ತದೆ" ಎನ್ನುವ ಮಹಿಳೆಯರ ಪ್ರತಿಕ್ರಿಯೆಗಳು ಹೀಗಿವೆ.

ಪುರುಷರ ಪ್ರತಿಕ್ರಿಯೆಗಳನ್ನು ಗಮನಿಸುವುದಾದರೆ: "ನನಗೆ ಒಂದು ಎಕರೆ ಭೂಮಿ ಇದೆ, ಮನೆಯ ಖರ್ಚು-ವೆಚ್ಚಗಳನ್ನು ಸರಿದೂಗಿಸಲು ಭೂಮಿಯಲ್ಲಿ ಯಾವ ಬೆಳೆ ಹಾಕಬೇಕು, ಏನು ಬೆಳೆಯಬೇಕು ಎಂಬುದನ್ನು ನಾನು ನಿರ್ಧರಿಸುತ್ತೇನೆ. ಆದರೆ ನನ್ನ ಹೆಂಡತಿ ನಾನೊಬ್ಬ ಕೆಟ್ಟ ಗಂಡ ಎಂದು ಹೇಳುತ್ತಾಳೆ. ಏಕೆಂದರೆ ಅವಳು ಪಕ್ಕದ ಮನೆಯ ಹೆಂಗಸರಂತೆ ಪ್ರತಿದಿನವು ಹೊಸ ಬಟ್ಟೆ, ಬಂಗಾರ, ಬೆಳ್ಳಿ, ಹೊಸ ಹೊಸ ಆಭರಣಗಳನ್ನು ತಂದು ಕೊಡಬೇಕೆಂದು ನಿರೀಕ್ಷಿಸುತ್ತಾಳೆ. ಆದರೆ ನನಗೆ ಅದು ಸಾಧ್ಯವಿಲ್ಲ. ಆ ಕಾರಣ ನನ್ನನ್ನು ಆಕೆ ಕೆಟ್ಟ ಗಂಡ ಎನ್ನುತ್ತಾಳೆ."

ಈ ತೆರನಾದ ವಾಸ್ತವದ ಅನುಭವಗಳು ಜೀವನಮಟ್ಟದಲ್ಲಾಗುತ್ತಿರುವ ಬದಲಾವಣೆಯನ್ನು ತಿಳಿಸುತ್ತವೆ. ಪುರುಷರ ಆದಾಯವು ಮನೆಯ ಖರ್ಚು ವೆಚ್ಚಗಳನ್ನು, ಆರ್ಥಿಕ ಅಗತ್ಯಗಳನ್ನು ಪೂರೈಸಲು ಸಾಧ್ಯವಾಗುತ್ತಿಲ್ಲದಿರುವುದನ್ನು ತಿಳಿಸುತ್ತದೆ. ಹಾಗೆಯೇ ಪುರುಷರ ಕೆಲಸವು ನಿರಂತರವಾದ ಕೆಲಸವಾಗಿಲ್ಲ. ಅರೆಕೆಲಸ, ನಿರುದ್ಯೋಗ, ಕೃಷಿಯಲ್ಲಾಗುವ ಏರುಪೇರುಗಳು, ಬಡತನ, ಬರಗಾಲಗಳಿಂದಾಗಿ ಮನೆಯನ್ನು

ನಡೆಸುವುದು ಕಷ್ಟವಾಗುತ್ತದೆ. ಕೃಷಿಯ ಉತ್ಪಾದನೆಯಲ್ಲಾದ ಇಳಿಕೆ, ಪುರುಷರು ಸಿದ್ಧಮಾದರಿಯ ಪಾತ್ರಗಳನ್ನೇ ನಿರ್ವಹಿಸಬೇಕೆಂಬ ನಿರೀಕ್ಷೆಗಳು ಹುಸಿ ನಂಬಿಕೆಗಳನ್ನು ಘಾಸಿಗೊಳಿಸಿವೆ ಎಂದು ಹೇಳಬಹುದು.

**ಕುಟುಂಬಕ್ಕೆ ನೆರವು**

ವಲಸೆ ಹೋದವರು ಮನೆಯಲ್ಲಿ ವಾಸಿಸುವ ಜನರಿಗೆ ಮತ್ತು ಮನೆಗೆ ಅಗತ್ಯವಾಗಿ ಬೇಕೆನಿಸಿದ ವಸ್ತುವನ್ನು ತೆಗೆದುಕೊಳ್ಳಲು ನಿರ್ಧಾರ ಮಾಡುತ್ತಾರೆ. ಅದನ್ನು ವಲಸೆ ಹೋದವರ ಅಗತ್ಯವೆಂದು ಅನ್ವಯಿಸುತ್ತಾರೆ. ಫ್ಯಾನ್ ಮತ್ತು ಟಿ.ವಿ.ಯನ್ನು ವಲಸೆ ಹೋದ ಎಲ್ಲರ ಮನೆಯಲ್ಲೂ ಕಾಣಬಹುದು. ಈ ವಸ್ತುಗಳು ಸಹ ಅವರ ಸ್ಥಾನಮಾನದ ಮೇಲೆಯೂ ಪ್ರಭಾವ ಬೀರುತ್ತದೆ.

ವಲಸೆ ಹೋದವರು ನೀಡಿದ ಹಣವನ್ನು ಪ್ರಥಮ ಆದ್ಯತೆಯಾಗಿ ಆಹಾರಕ್ಕೆ ನೀಡುತ್ತಾರೆ. ನಂತರ ಇತರ ವಸ್ತು, ಶಿಕ್ಷಣ, ಮನೆಯ ಇತರ ಸೌಲಭ್ಯಕ್ಕಾಗಿ ನೀಡುತ್ತಾರೆ. ಅನಾರೋಗ್ಯದ ಸಂದರ್ಭದಲ್ಲಿ, ರೋಗ ಉಲ್ಬಣಿಸಿದಾಗ ಮಾತ್ರ ಆರೋಗ್ಯಕ್ಕಾಗಿ ಖರ್ಚು ಮಾಡುತ್ತಾರೆ.

**ಮೂಲ ಸ್ಥಳದ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ**

ವಲಸಿಗರು ತಮ್ಮ ಊರಿನ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ. ಅವರ ಸಂಬಂಧಿಕರ, ನೆಂಟರ, ಸ್ನೇಹಿತರ, ಮನೆಯ ನೆರೆ–ಹೊರೆಯವರು ತೀರಿಕೊಂಡಾಗ ಮನೆಯಿಂದ ಒಬ್ಬರಾದರೂ ಹೋಗಿ ಬರುತ್ತಾರೆ. ಶವಸಂಸ್ಕಾರಗಳಿಗೆ ಹೋಗುವುದು ಅವರ ಕರ್ತವ್ಯವೆಂದು ಭಾವಿಸಿಕೊಂಡಿದ್ದಾರೆ. ಯಾವುದೇ ವ್ಯಕ್ತಿ ತನ್ನ ಜೀವಿತಾವಧಿಯಲ್ಲಿ ಎಷ್ಟು ಗಳಿಸಿದ್ದಾನೆ ಎಂದು ನೋಡಬೇಕಾದರೆ ಅವನು/ಅವಳು ಸತ್ತಾಗ ಅಂತಿಮ ನಮನ ಸಲ್ಲಿಸಲು ಬರುವ ಜನರಿಂದ ಗೊತ್ತಾಗುತ್ತದೆ ಎಂಬುದು ಇವರ ನಂಬಿಕೆ. ಇವರು ಸಂತೋಷದ ಸಮಾರಂಭಗಳಿಗಿಂತ ದುಃಖದ ಸಮಾರಂಭಗಳಿಗೆ ಹೋಗುವುದು ಅಗತ್ಯವೆಂದು ಕೊಂಡಿದ್ದಾರೆ. ಸಂತೋಷದ ಸಮಾರಂಭಗಳಲ್ಲಿ ಹಲವಾರು ಜನರು ಇರುತ್ತಾರೆ. ಆದರೆ ದುಃಖದಲ್ಲಿ ಎಲ್ಲರೂ ಭಾಗಿಯಾಗಬೇಕು ಎನ್ನುವುದು ಇವರ ಅಭಿಪ್ರಾಯವಾಗಿದೆ. ಹಾಗೆಯೇ ಮದುವೆ, ಹೆಣ್ಣುಮಕ್ಕಳು ಋತುಮತಿಯಾದ ಸಮಾರಂಭ, ಮಕ್ಕಳ ನಾಮಕರಣ ಸಮಾರಂಭ, ಗೃಹಪ್ರವೇಶದ ಕಾರ್ಯಕ್ರಮದಲ್ಲಿ ಭಾಗವಹಿಸುವುದು ಕಂಡುಬರುತ್ತದೆ. ವರ್ಷಕ್ಕೊಂದು ಬಾರಿ ನಡೆಯುವ ಊರಹಬ್ಬಗಳಿಗೆ ಜನರು, ನೆಂಟರು ತಪ್ಪದೇ ಭಾಗವಹಿಸುವುದು ಕಂಡುಬರುತ್ತದೆ. ಹೆಣ್ಣು ಮಕ್ಕಳು ಋತುಮತಿಯಾದ ಸಮಾರಂಭಗಳಿಗೆ ಹೆಚ್ಚಾಗಿ ಹೆಂಗಸರೇ ಭಾಗಿಯಾಗುತ್ತಿರುವುದು ಕಂಡುಬರುತ್ತದೆ.

### ವಲಸಿಗರಿಗೆ ಅವರ ಊರಿನಲ್ಲಿ ಸ್ಥಾನಮಾನ

ಕೋಷ್ಟಕ ೪.೧೬.

ವಲಸಿಗರಿಗೆ ಅವರ ಊರಿನಲ್ಲಿ ಸ್ಥಾನಮಾನ

| ಸ್ಥಾನಮಾನದ ಬದಲಾವಣೆ | ಪುರುಷ | ಮಹಿಳೆ |
|---|---|---|
| ಗೌರವಿಸುತ್ತಾರೆ | ೯೭% | ೮೮% |
| ಅಗೌರವಿಸುತ್ತಾರೆ | ೦೩% | ೦೨% |
| ಸ್ಥಾನಮಾನ ಹೆಚ್ಚಾಗಿದೆ | ೪೯% | ೫೩% |
| ಸ್ಥಾನಮಾನ ಕಡಿಮೆ ಆಗಿದೆ | ೫೧% | ೪೭% |
| ಯಾವುದೇ ಬದಲಾವಣೆ ಆಗಿಲ್ಲ | ೦೩% | ೦೫% |

ಈ ಕೋಷ್ಟಕವನ್ನು ನೋಡಿದಾಗ ಗ್ರಾಮದಲ್ಲಿ ವಲಸಿಗರನ್ನು ಇತರ ಜನರು ಗೌರವಿಸುತ್ತಾರೆ. ಗ್ರಾಮದಲ್ಲಿಯೇ ಕೆಲಸ ಮಾಡದೇ ಜೀವನಕ್ಕಾಗಿ ಪರದಾಡಿದರೇ ಗ್ರಾಮಸ್ಥರು ಬೈಯುವವರೇ ಹೊರತು ನಮ್ಮ ಜೀವನಕ್ಕೆ ಸಹಾಯ ಮಾಡುವವರಲ್ಲ. ಅದೇ ಮುಂದುವರಿದು ವಲಸೆ ಹೋದರೆ ಅಲ್ಲಿಯ ಕಷ್ಟಗಳು ಇವರಿಗೆ ಗೊತ್ತಾಗುವುದಿಲ್ಲ. ಆದರೆ ದುಡಿಮೆ ಮಾಡಲು ಬೇರೆ ಸ್ಥಳಕ್ಕೆ ಹೋಗಿದ್ದಾರೆ. ತಮ್ಮ ಜೀವನವನ್ನು ತಾವು ನಡೆಸುತ್ತಿದ್ದಾರೆ ಎಂದು ಗ್ರಾಮದಲ್ಲಿ ಇವರ ಬಗೆಗೆ ಗೌರವ ಕೊಡುತ್ತಾರೆ. ಪುರುಷರಿಗೆ ಹೋಲಿಸಿದರೆ ಮಹಿಳೆಯರಿಗೆ ಉತ್ತಮ ಸ್ಥಾನಮಾನ ಒದಗಿಸುತ್ತದೆ. ಇನ್ನು ಮಹಿಳೆಯರ ಸಂದರ್ಭದಲ್ಲಿ ಶ್ರೀಲತಾ ಬಾಟ್ಲಿವಾಲಾ ಅವರ ಮಾತು ಗಮನಾರ್ಹವಾದುದು. "ಜಗತ್ತಿನಲ್ಲಿ ಎಲ್ಲಿ ಮಹಿಳೆಯರು ಕೆಲಸ ಮಾಡಿದರೂ ಹಣದ ರೂಪದ ಕೆಲಸ ಮಾತ್ರವೇ ಆಕೆಯ ಅಂತರಂಗ ಮತ್ತು ಬಹಿರಂಗದ ಶಕ್ತಿಯನ್ನು ತಂದುಕೊಟ್ಟಿದೆ ಎಂಬ ಮಾತು ಇಲ್ಲೂ ನಿಜವಾದಂತೆ ಇದೆ" (ಉಧೃತ: ಅಗರ್‌ವಾಲ್ ಬಿ. (ಇಡಿ), ೧೯೯೦, ಪು. ೧೨೭).

### ಲಿಂಗವ್ಯವಸ್ಥೆ ಸಾಮಾಜೀಕರಣ

ಗ್ರಾಂಶಿ ಪ್ರಕಾರ "ಐಡಿಯಾಲಜಿ ಎಂದರೆ ವೈಯಕ್ತಿಕ ಮತ್ತು ಸಾಮುದಾಯಿಕವಾದ ಚಟುವಟಿಕೆಗಳಾದ ಕಲೆ, ಕಾನೂನು, ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳು ಎಂದು ಕರೆದಿದ್ದಾನೆ"(ಉಧೃತ: ಫೌಕಾಲ್ಟ್ ಎಂ., ೧೯೮೦, ಪು. ೧೬೭). ಸಮಾಜ ರಚನೆಯಲ್ಲಿ ಸಾಮಾಜಿಕ ಐಡಿಯಾಲಜಿಗಳು ಪ್ರಮುಖ ಪಾತ್ರ ವಹಿಸುತ್ತವೆ. ಸ್ತ್ರೀ–ಪುರುಷರ ವರ್ತನೆ, ನಡವಳಿಕೆಗಳನ್ನು ನಿರ್ಧರಿಸುತ್ತವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶವನ್ನು ನೋಡುವುದಾದರೆ ಇಲ್ಲಿ ಪುರುಷಪ್ರಧಾನತೆ ಕಂಡುಬರುತ್ತದೆ. ಪುರುಷರು

ಮಹಿಳೆ ಎಂದರೆ ತಮಗಿಂತ ಕಡಿಮೆ, ಬಲಹೀನಳು ಎಂಬ ಭಾವನೆಯಿದೆ. ಖಾಸಗಿ ಬದುಕಿನಲ್ಲಿ ಮಹಿಳೆಯನ್ನು ತಂದೆ, ಗಂಡ, ಅಣ್ಣ, ವಯಸ್ಕ ಗಂಡುಮಕ್ಕಳ ಜೊತೆಗೆ ಬದುಕು ಸವೆಸುತ್ತಾರೆ. ಸಾರ್ವಜನಿಕವಾಗಿ ಪುರುಷರು ರಾಜಕೀಯ, ಕಾನೂನು ಮತ್ತು ಆರ್ಥಿಕ ಚಟುವಟಿಕೆಗಳ ನಿರ್ಣಯಗಳಲ್ಲಿ ಪ್ರಭುತ್ವ ಸಾಧಿಸುತ್ತಾರೆ. ಲಿಂಗವ್ಯವಸ್ಥೆ ಸಾಮಾಜೀಕರಣ ಪ್ರಕ್ರಿಯೆ ಬಾಲ್ಯದಿಂದಲೇ ಪ್ರಾರಂಭವಾಗುತ್ತದೆ. ಸಿದ್ಧಮಾದರಿಯ ಪಾತ್ರಗಳಲ್ಲೇ ಪುರುಷ ಮತ್ತು ಮಹಿಳೆಯನ್ನು ಕಾಣುವರು. ಪಾಲಕರು ತಮ್ಮ ಮಕ್ಕಳು ಜೀವನದುದ್ದಕ್ಕೂ ಸಿದ್ಧಮಾದರಿಯ ಪಾತ್ರಗಳಲ್ಲೇ ಇರಬೇಕೆಂಬ ನಿರೀಕ್ಷೆಯಿದೆ. ಈ ತರಹದ ಪಾತ್ರಗಳಲ್ಲಿ ಇರುವವರಿಗೆ ಸಾಮಾಜಿಕವಾಗಿ ಹೆಚ್ಚು ಗೌರವವನ್ನು ನೀಡುತ್ತಾರೆ. ಇದನ್ನು ಸಾಮಾಜೀಕರಣದ ಮೂಲಕ ಮಕ್ಕಳಲ್ಲಿ ಅಂತರ್ಗತ ಮಾಡುವರು ಮತ್ತು ಸ್ವಲ್ಪ ಹೆಚ್ಚು-ಕಡಿಮೆಯಾದರೂ ಶಿಕ್ಷೆಯನ್ನು ಕೊಡುವ ಮೂಲಕ ಪಳಗಿಸುವರು. ಗ್ರಾಂಶಿ ಹೇಳುವ ಪ್ರಕಾರ ಸಾಮಾಜೀಕರಣದ ಏಜೆಂಟರಾಗಿ ಕುಟುಂಬ, ಶಾಲೆ, ಧರ್ಮ ಮತ್ತು ಸಮೂಹ ಮಾಧ್ಯಮಗಳು ಬೋಧಿಸುತ್ತಲೇ ಇರುತ್ತವೆ. ಈ ತರಹದ ಸಂಗತಿಗಳು ಸದರಿ ಅಧ್ಯಯನದಲ್ಲಿ ಕಂಡುಬಂದಿವೆ. ಅಂದರೆ ಮನೆಯಲ್ಲಿರುವ ಹಿರಿಯ ಅಜ್ಜ-ಅಜ್ಜಿಯರು ಕಥೆಗಳ ಮೂಲಕ ಜಂಡರ್ ಪಾತ್ರಗಳನ್ನು ಮಕ್ಕಳಿಗೆ ಹೇಳುತ್ತಲೇ ಇರುತ್ತಾರೆ.

ಜನರು ತಮ್ಮ ಆಸಕ್ತಿ, ಘಟನೆ, ಪರಿಸರ, ಜ್ಞಾನ, ಸಾಂಸ್ಕೃತಿಕ ಅಂಶಗಳ ಹಿನ್ನೆಲೆಯಲ್ಲಿ ಲಿಂಗ ಪಾತ್ರಗಳ ಹೇರುವಿಕೆ ವ್ಯಕ್ತಿಯ ಮೇಲೆ ನಡೆದೇ ಇರುತ್ತದೆ. ನುಕುನ್ಯಾ, ಒಪೋಗ ಮತ್ತು ಅಬು ಪ್ರಕಾರ ನಮ್ಮ ಸಂಸ್ಕೃತಿ ನಾವು ಏನು ನೋಡಬೇಕೆಂದು ಹೇಳುತ್ತದೆ. ನಮ್ಮ ಬಾಲ್ಯ ನಾವು ಜಗತ್ತನ್ನು ಹೇಗೆ ನೋಡಬೇಕೆಂದು ಕಲಿಸುತ್ತದೆ. ನಮ್ಮ ಮೌಲ್ಯ ಜಗತ್ತನ್ನು ಹೇಗೆ ವಿಶ್ಲೇಷಿಸಬೇಕೆಂದು ಕಲಿಸುತ್ತದೆ. ಹಾಗೆಯೇ ಈ ಅಧ್ಯಯನಕ್ಕೆ ಒಳಪಟ್ಟ ಪ್ರತಿಕ್ರಿಯೆದಾರರು ಮಹಿಳೆ ಎಂದರೆ ಶ್ರಮಪಡುವವಳು, ಮದುವೆಗಿಂತ ಮುಂಚಿತವಾಗಿ ಅಥವಾ ಬಾಲ್ಯದಿಂದ ಯೌವನದವರೆಗೆ ತಂದೆ-ತಾಯಿಗಳ ಮಾತನ್ನು ಕೇಳುವವಳು ಆಗಿರಬೇಕು, ಗೌರವಿಸಬೇಕು, ಪಾಲಿಸಬೇಕು, ಮದುವೆಯ ನಂತರ ಗಂಡನ ಮಾತನ್ನು ಕೇಳುವವಳಾಗಿರಬೇಕು, ಗಂಡನ ಮನೆಯವರನ್ನು ಗೌರವಿಸಬೇಕು, ಪ್ರೀತಿಸಬೇಕು ಮತ್ತು ಅವರನ್ನು ಸರಿಯಾಗಿ ನೋಡಿಕೊಳ್ಳಬೇಕು. ಮೆಲ್ಲಗೆ ಮಧುರವಾಗಿ ಮಾತನಾಡಬೇಕು, ಸಂಪೂರ್ಣ ವಿಧೇಯಳಾಗಿರಬೇಕು. ಮನೆಯ ಕೆಲಸ ಕಾರ್ಯಗಳನ್ನು ಮಾಡಬೇಕು. ಕುಟುಂಬದ ಒಗ್ಗಟ್ಟನ್ನು ಕಾಪಾಡಬೇಕು. ಪುರುಷನೆಂದರೆ ಶ್ರಮಪಟ್ಟು ಕೆಲಸ ಮಾಡುವವನಾಗಿರಬೇಕು. ತಂದೆ ತಾಯಿಗಳನ್ನು ಗೌರವಿಸಬೇಕು ಮತ್ತು ತನ್ನ ಕುಟುಂಬವನ್ನು ಗೌರವಿಸುವವನಾಗಿರಬೇಕು ಎಂಬ ಸಂಗತಿಗಳು ಈ ಪ್ರದೇಶದಲ್ಲೂ ಕಂಡುಬರುತ್ತವೆ.

**ಅಧಿಕಾರ ಸಂಬಂಧಗಳು**

ಸಮಾಜದಲ್ಲಿ ಕುಟುಂಬವ್ಯವಸ್ಥೆಗೆ ವಿವಾಹ ಅಗತ್ಯ. ಈ ಪ್ರದೇಶದ ಬಹುಭಾಗದಲ್ಲಿ ಶೇ.೯೦ರಷ್ಟು ಜನರು ಏಕಪತ್ನಿ ಅಥವಾ ಪತಿಯರನ್ನು ಹೊಂದಿದ್ದಾರೆ. ಬಹುಪತ್ನಿತ್ವ/ಪತಿತ್ವ ಹೆಚ್ಚಾಗಿ ಆಚರಣೆಯಲಿಲ್ಲ. ವಕ್ತೃಗಳಲ್ಲಿ ಶೇಕಡ ೮೦ರಷ್ಟು ಮಹಿಳೆಯರು ಮನೆಕೆಲಸವನ್ನು ಅವರು ಮಾಡಲೇಬೇಕಾದ ಕೆಲಸವೆಂದು, ಶೇಕಡ ೪೯ರಷ್ಟು ಪುರುಷರು ಆರ್ಥಿಕ ಜವಾಬ್ದಾರಿಗಳನ್ನು ಸಹ ನಿರ್ವಹಿಸಬೇಕು ಎಂದರು. ಉಳಿದ ಶೇಕಡ ೧೪ರಷ್ಟು ಮಹಿಳೆಯರು ಯಾವುದೇ ನಿರ್ದಿಷ್ಟವಾದ ಪ್ರತಿಕ್ರಿಯೆಯನ್ನು ನೀಡಿಲ್ಲ. ಲಿಂಗಸಂಬಂಧಿ ಪಾತ್ರಗಳು, ನಿಯಮಗಳು, ಜವಾಬ್ದಾರಿಗಳು ಅಷ್ಟು ಕಟ್ಟುನಿಟ್ಟಾಗಿವೆ, ತಪ್ಪಾಗಿ ಬಿಂಬಿತವಾಗುತ್ತವೆ. ಸಂತಾನವನ್ನು ಹೊಂದಲು ಮದುವೆ ಕಡ್ಡಾಯವಾಗಿದೆ. ಮಕ್ಕಳು ತಂದೆಯ ಕುಟುಂಬಕ್ಕೆ ಸೇರಿದವರಾಗಿರುತ್ತಾರೆ.

ಕುಟುಂಬದ ಕೆಲಸಗಳಲ್ಲಿ ಮಕ್ಕಳು ಸಹ ಸಹಾಯ ಮಾಡುತ್ತಾರೆ. ಹೆಣ್ಣುಮಕ್ಕಳು ಕಸಗುಡಿಸುವುದು, ಪಾತ್ರೆ ತೊಳೆಯುವುದು, ಬಟ್ಟೆ ತೊಳೆಯುವ ಕೆಲಸವನ್ನು ಮಾಡಿದರೆ, ಗಂಡುಮಕ್ಕಳು ಮಾರುಕಟ್ಟೆಗೆ ಹೋಗುವುದು, ತರಕಾರಿ–ಸೊಪ್ಪು, ಹಣ್ಣುಗಳನ್ನು ಮಾರುಕಟ್ಟೆಯಲ್ಲಿ ಮಾರುವುದು, ಸಾಕಿದ ಪ್ರಾಣಿಗಳನ್ನು ನೋಡಿಕೊಳ್ಳುವ ಕೆಲಸಗಳನ್ನು ಮಾಡುತ್ತಾರೆ. ಒಟ್ಟಿನಲ್ಲಿ ಹೇಳಬೇಕೆಂದರೆ ಲಿಂಗಸಂಬಂಧಿ ಪಾತ್ರಗಳಿಗೆ ಅನುಗುಣವಾಗಿ ಮಕ್ಕಳು ತಮ್ಮ ತಂದೆ–ತಾಯಂದಿರಿಗೆ ನೆರವಾಗುವುದು ಕಂಡುಬರುತ್ತದೆ.

ಕುಟುಂಬದ ಮುಖ್ಯಸ್ಥರಾಗಿ ಪುರುಷರೇ ಬಿಂಬಿತವಾಗುತ್ತಾರೆ. ಮನೆಯ ಯಜಮಾನನ ಮಾತನ್ನು ಇತರ ಸದಸ್ಯರು ಕೇಳಲೇ ಬೇಕು ಎಂಬುದು ನಿಯಮ. ಕುಟುಂಬದಲ್ಲಿ ಪುರುಷ ಮುಖ್ಯಸ್ಥರ ಹಿಡಿತ ಮಹಿಳಾ ಮುಖ್ಯಸ್ಥರ ಹಿಡಿತಕ್ಕಿಂತ ಹೆಚ್ಚಾಗಿದೆ. ಕೌಟುಂಬಿಕ ಸಂಬಂಧಗಳಲ್ಲಿ ಮೊದಲು ಪುರುಷ ನಂತರ ಮಹಿಳೆ ಬರುತ್ತಾರೆ. ಶಿಕ್ಷಿತರು, ಆದಾಯವನ್ನು ಹೆಚ್ಚು ಉತ್ಪಾದಿಸುತ್ತಿರುವವರ ಮಾತು ಮನೆಯಲ್ಲಿ ಹೆಚ್ಚಾಗಿ ನಡೆಯುತ್ತದೆ. ಸಾಮಾಜಿಕ ಸಂಬಂಧಕ್ಕಿಂತ ಆರ್ಥಿಕವಾಗಿ ಯಾರು ಹೆಚ್ಚು ಸಬಲರಾಗಿರುತ್ತಾರೋ ಅವರು ಹಿಡಿತವನ್ನು ಸಾಧಿಸಿರುವುದು ಕಂಡು ಬರುತ್ತದೆ.

**ಕುಟುಂಬದ ಪಾತ್ರಗಳು**

ಪಿಯರ್ಸನ್ ಹೇಳಿದಂತೆ "ಸಮಯ ಮತ್ತು ಸಂಸ್ಕೃತಿಗೆ ಅನುಗುಣವಾಗಿ ಲಿಂಗ ಸಂಬಂಧಗಳು ಇವೆ"(ಪಿಯರ್ಸನ್, ಆರ್., ೧೯೯೮, ಪು. ೩೧೨). ಈ ಹಿನ್ನೆಲೆಯಲ್ಲಿ ಕುಟುಂಬದ ಸಂಬಂಧಗಳನ್ನು ನೋಡುವುದಾದರೆ ಲಿಂಗಾಧಾರಿತವಾಗಿ ಮೇಲೆಯೇ

ಸಂಬಂಧಗಳು ಮತ್ತು ಪಾತ್ರಗಳು ಸಂಯೋಜಿತವಾಗಿರುತ್ತವೆ. ಸಂಶೋಧನೆಗೆ ಒಳಪಟ್ಟವರು ಸ್ತ್ರೀಯರ ಕೆಲಸ, ಮನೆಕೆಲಸ, ಪುರುಷರು ಮನೆಯ ಯಜಮಾನ, ಮನೆಯನ್ನು ಸಾಕುವುದು ಸಲಹುವುದು ಆತನ ಜವಾಬ್ದಾರಿ ಎಂದು ವ್ಯಾಖ್ಯಾನಿಸಲಾಗುತ್ತದೆ. ಪುರುಷ ಕೆಲಸ ಮಾಡದಿದ್ದರೂ ಆತನೇ ಯಜಮಾನ ಎಂದು ಕರೆಯಲಾಗುತ್ತದೆ. ಮಹಿಳೆ ಮನೆಯ ಯಜಮಾನನಿಗೆ ಪೂರಕವಾಗಿ ಸಹಾಯಕವಾಗಿ ಕೆಲಸ ಮಾಡಬೇಕು.

ಅಧ್ಯಯನಕ್ಕೆ ಒಳಪಟ್ಟ ಎಲ್ಲ ಕುಟುಂಬಗಳಲ್ಲಿಯೂ ಶ್ರಮವಿಭಜನೆಯ ಕುರಿತು ಕಟ್ಟುನಿಟ್ಟಾದ ಆಚರಣೆಗಳನ್ನು ಆಚರಿಸುತ್ತಾರೆ. ಅವುಗಳು ಸಾಂಪ್ರದಾಯಿಕವಾಗಿವೆ. ಉದಾಹರಣೆಗೆ ಗಂಡಸು ಕಸಬರಿಗೆ/ಪೊರಕೆ ಹಿಡಿದರೆ ಅವಮಾನ, ಕಸವನ್ನು ಗುಡಿಸಬಾರದು, ಗಂಡಸು ಹಾಸಿಗೆಯನ್ನು ಎತ್ತಿ ಇಡಬಾರದು, ಗಂಡುಮಕ್ಕಳು ಎಂದರೆ ಹೆಚ್ಚು ಗೌರವ ನೀಡಬೇಕು. ಎಂಟು ವರ್ಷದ ಒಬ್ಬ ಬಾಲಕ ತನ್ನ ಹದಿನೈದು ವರ್ಷದ ಅಕ್ಕನಿಗೆ ಅಧಿಕಾರಯುತವಾಗಿ ಆ ಕೆಲಸ ಮಾಡು, ಈ ಕೆಲಸ ಮಾಡು ಎಂದು ಗಂಡಸಿನ ಹಕ್ಕನ್ನು ಚಲಾಯಿಸುವುದು ಕಂಡು ಬರುತ್ತದೆ. ಮಹಿಳೆಯರು ಹೆಚ್ಚು ಕೆಲಸ ಮತ್ತು ಜವಾಬ್ದಾರಿಗಳನ್ನು ನಿಭಾಯಿಸಿದರೂ ಪುರುಷರ ಕೆಲಸಕ್ಕೆ ಪೂರಕವಾಗಿವೆ. ಅಂದರೆ ಹಸು, ಎಮ್ಮೆ, ಮೇಕೆ, ಕುರಿಗಳನ್ನು ಸಾಕುತ್ತಿದ್ದರೂ ಆ ಕೆಲಸ ಮಹಿಳೆಯ ಕೆಲಸವಾಗಿರುತ್ತದೆ. ಆದರೆ ಆ ಹಸು, ಎಮ್ಮೆ, ಕುರಿ, ಮೇಕೆಯ ಉತ್ಪನ್ನಗಳಿಂದ ಬರುವ ಹಣದ ಮೌಲ್ಯಕ್ಕೆ ಪುರುಷರು ಒಡೆಯರಾಗಿರುತ್ತಾರೆ.

**ಕೃಷಿಯಲ್ಲಿ ಶ್ರಮದ ವಿಭಜನೆ**

ಮನೆಗೆ ಬೇಕಾದ ಅಥವಾ ಅಗತ್ಯವಿರುವ ಆಹಾರ ಪದಾರ್ಥಗಳ ಉತ್ಪಾದನೆ ಮಾಡುವುದು. ಮನೆಯ ಸದಸ್ಯರ ಕೆಲಸ. ಕೃಷಿಯ ಮೊದಲ ಉದ್ದೇಶವೆಂದರೆ ಮನೆಗೆ ಬೇಕಾದ ಆಹಾರ ಸಾಮಗ್ರಿಯನ್ನು ಉತ್ಪಾದಿಸುವುದಾಗಿದೆ. ಪ್ರಧಾನ ಬೆಳೆಗಳನ್ನೇ ಅಥವಾ ಪ್ರಧಾನವಾಗಿ ಸೇವಿಸುವ ಆಹಾರದ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಭಾಗದ ಜನರ ಪ್ರಧಾನ ಆಹಾರವೆಂದರೆ ರೊಟ್ಟಿ ಮತ್ತು ಅನ್ನ. ಅದಕ್ಕಾಗಿ ಅವರು ಜೋಳ, ಭತ್ತವನ್ನು ಮೊದಲು ಬೆಳೆಯುತ್ತಾರೆ. ಮನೆಯ ಸದಸ್ಯರ ನಡುವೆ ಈ ವಿಷಯದಲ್ಲಿ ಸಹಮತವಿರುತ್ತದೆ. ಆದರೂ ಬೆಳೆ ಬೆಳೆಯುವುದು ಮನೆಯ ಮುಖ್ಯಸ್ಥರ ನಿಯಂತ್ರಣದಲ್ಲಿರುತ್ತದೆ. ಹೀಗಾಗಿ ಮನೆಗೆ ಅಗತ್ಯವಿದ್ದ ಆಹಾರವನ್ನು ಬೆಳೆಯಲು ಮೊದಲು ಮನೆಯ ಸದಸ್ಯರೇ ಕೆಲಸ ಮಾಡುತ್ತಾರೆ. ನಂತರ ಅಗತ್ಯವಿದ್ದರೆ ಕೂಲಿಕಾರ್ಮಿಕರನ್ನು ಬಳಸಿಕೊಳ್ಳುತ್ತಾರೆ. ಬಿತ್ತುವಾಗ ಅಕ್ಕಡಿ ಹಾಕುವುದರಿಂದ ಹಿಡಿದು ಸಸಿಯನ್ನು ಹಚ್ಚುವುದು ಕಳೆ ಸ್ವಚ್ಛ ಮಾಡುವ ಕೆಲಸವನ್ನು ಹೆಣ್ಣುಮಕ್ಕಳೇ ಮಾಡುವರು. ಬಿತ್ತನೆಯಿಂದ ಹಿಡಿದು

ಬೆಳೆಗಳಿಗೆ ಕೀಟಗಳು ತಗುಲಿದರೆ ಔಷಧಿ/ರಾಸಾಯನಿಕಗಳ ಸಿಂಪರಣೆಯನ್ನು ಗಂಡುಮಕ್ಕಳು ಮಾಡುತ್ತಾರೆ. ಮಾರುಕಟ್ಟೆಯಲ್ಲಿ ಬೆಳೆದ ದವಸ–ಧಾನ್ಯವನ್ನು ಮಾರಬೇಕಾದರೆ ಪುರುಷರೇ ಮುಂದಾಳತ್ವ ವಹಿಸುವುದು ಕಂಡುಬರುತ್ತದೆ.

ಭೂಮಿಯ ಮೇಲಿನ ಹಕ್ಕು ಅಥವಾ ಅದರ ಮೇಲೆ ಒಡೆತನ ಮಹಿಳೆಯ ಗಂಡಿನಿಗಿರುವ ಸಾಮರ್ಥ್ಯದ ಮೇಲೆ ಅವಲಂಬಿಸಿರುತ್ತದೆ. ಪುರುಷ ಸದಸ್ಯರು ವಲಸೆ ಹೋದ ಸಂದರ್ಭದಲ್ಲಿ ಮಹಿಳೆಯ ಮೇಲೆ ಹೆಚ್ಚಿನ ಕೆಲಸದ ಹೊರೆ ಬೀಳುತ್ತದೆ. ಮನೆಯ ಕೆಲಸ ಮತ್ತು ಕೃಷಿ ಕೆಲಸವನ್ನು ಮಹಿಳೆಯೇ ಮಾಡಬೇಕಾಗುತ್ತದೆ. ಮನೆಯ ಹಿರಿಯರು ಇದ್ದರೂ ಅವರಿಗೆ ವಯಸ್ಸಾಗಿರುವುದರಿಂದ ಕೆಲಸಗಳನ್ನು ಮಾಡಲು ಸಾಧ್ಯವಾಗದಿರುವುದು ಕಂಡುಬರುತ್ತದೆ. ಹಾಗಾಗಿ ವಲಸೆ ಹೋದ ಮನೆಯಲ್ಲಿ ಮಹಿಳೆಯ ಮೇಲೆ ಅತ್ಯಧಿಕ ಕೆಲಸದ ಹೊರೆ ಇರುತ್ತದೆ. ಅಲ್ಲದೆ ಸಾಮಾಜಿಕವಾಗಿಯೂ ಮಹಿಳೆ ತುಂಬ ಎಚ್ಚರಿಕೆಯಿಂದ ನಡೆದುಕೊಳ್ಳಬೇಕಾಗುತ್ತದೆ ಇಲ್ಲದಿದ್ದರೆ ಮಹಿಳೆಯನ್ನು ಸಾಮಾಜಿಕವಾಗಿ ಅವಮಾನ ಮಾಡುವುದು, ನೋವು ಹಿಂಸೆ ಕೊಡಲಾಗುವುದು ಎಂದು ತಿಳಿಸಿರುವರು.

**ಮನೆಯಲ್ಲಿ ಶ್ರಮದ ಹಂಚಿಕೆ**

ಆಹಾರ ತಯಾರಿಕೆ, ಮಕ್ಕಳನ್ನು ನೋಡಿಕೊಳ್ಳುವುದು, ಮನೆಯನ್ನು ಒಪ್ಪವಾಗಿರಿಸುವುದು, ಉರುವಲು ಸಂಗ್ರಹ, ಮನೆಯ ಬಜೆಟ್ಟನ್ನು ನಿರ್ವಹಿಸುವುದು, ಬಟ್ಟೆ ತೊಳೆಯುವ, ಬೇಳೆ ಕಾಳುಗಳನ್ನು ಆಹಾರ ಪದಾರ್ಥವನ್ನು ಸ್ವಚ್ಛಗೊಳಿಸುವ ಅಥವಾ ಆಹಾರವನ್ನು ಬೇಯಿಸುವ ಮುಂಚಿನ ಸಿದ್ಧತೆಯನ್ನು ಯಾರು ಮಾಡುತ್ತಾರೆ ಎಂಬ ಪ್ರಶ್ನೆಗಳನ್ನು ಕ್ಷೇತ್ರ ಅಧ್ಯಯನದಲ್ಲಿ ಕೇಳಲಾಯಿತು. ಅಧ್ಯಯನಕ್ಕೆ ಒಳಪಟ್ಟವರೆಲ್ಲರೂ ಅಡುಗೆ ಮಾಡುವುದು ಮಹಿಳೆಯ ಜವಾಬ್ದಾರಿಯೆಂದು, ಮಕ್ಕಳನ್ನು ನೋಡಿಕೊಳ್ಳುವುದು ಸಹ ಮಹಿಳೆಯ ಕೆಲಸವಾಗಿದೆ ಎಂದಿದ್ದಾರೆ. ಉರುವಲುಗಳನ್ನು ಸಂಗ್ರಹಿಸಬೇಕಾದಾಗ ದೊಡ್ಡ–ದೊಡ್ಡ ಮರಗಳನ್ನು ಕಡಿಯುವುದು ಪುರುಷರ ಕೆಲಸವೆಂದು ಹೇಳಿದ್ದಾರೆ. ಮನೆಯಲ್ಲಿ ನೀರು ಸಂಗ್ರಹಿಸಲು ಮಕ್ಕಳು ಮಹಿಳೆಯರಿಗೆ ಸಹಾಯ ಮಾಡುತ್ತಾರೆ ಎಂದಿರುವರು.

ಪುರುಷ ಮತ್ತು ಮಹಿಳೆಯ ನಡುವೆ ಮನೆ ಸಂಬಂಧಿತ ಕೆಲಸವು ಮದುವೆಯ ಜೊತೆ ತಳಕು ಹಾಕಿಕೊಂಡಿರುತ್ತದೆ. ಹುಡುಗಿಯನ್ನು ನೋಡಲು ಬಂದಾಗಲೇ ಮನೆಯ

ಕೆಲಸಗಳನ್ನು ಮಾಡಲು ಬರುತ್ತದೆಯೋ ಇಲ್ಲವೊ ಎಂದು ಪ್ರಶ್ನಿಸಲಾಗುತ್ತದೆ. ಮನೆಯ ಕೆಲಸಗಳನ್ನು ಅಚ್ಚು ಕಟ್ಟಾಗಿ ಮಾಡುವ ಹುಡುಗಿಯನ್ನೇ ಹೆಚ್ಚಾಗಿ ಎಲ್ಲರೂ ಇಷ್ಟ ಪಡುತ್ತಾರೆ. ಆ ಹುಡುಗಿಗೇ ಆದ್ಯತೆಯನ್ನು ಹೆಚ್ಚು ನೀಡುತ್ತಾರೆ. ಮಹಿಳೆ ಮಾಡುವ ಕುಟುಂಬ ಸಂಬಂಧಿ ಕೃಷಿ ಕೆಲಸಗಳಿಗೆ ಯಾವುದೇ ತೆರನಾದ ಹಣದ ಮೌಲ್ಯವನ್ನು ನೀಡುವುದಿಲ್ಲ. ಅದು ಆಕೆಯ ಜವಾಬ್ದಾರಿ ಎನ್ನಲಾಗುತ್ತದೆ. ಮಹಿಳೆಯ ಕೆಲಸಕ್ಕೆ ಸೇವೆ ಎನ್ನುವ ಪಟ್ಟಿಯಲ್ಲಿ ಬೇಡಿಕೆ ಇದೆ. ಮುಂದೆ ಅದನ್ನು ಆಕೆಯ ಜವಾಬ್ದಾರಿಯನ್ನಾಗಿ ಮಾಡಲಾಗುತ್ತದೆ. ಮಾರುಕಟ್ಟೆಯ ಸಿದ್ಧಾಂತ ಬೇಡಿಕೆ ಹೆಚ್ಚಿದಷ್ಟು ಬೆಲೆ ಹೆಚ್ಚುತ್ತದೆ. ಆದರೆ ಮಹಿಳೆಯ ವಿಷಯಕ್ಕೆ ಬಂದಾಗ ಬೇಡಿಕೆ ಹೆಚ್ಚಿದಷ್ಟು ಆಕೆಯ ಶ್ರಮಕ್ಕೆ ನೀಡುವ ಬೆಲೆ ಕಡಿಮೆಯಾಗುತ್ತದೆ. ಹೀಗಾಗಿ ಮನೆಯ ಕೆಲಸದ ಹಂಚಿಕೆ ಸರಿಯಾಗಿ ವಿಂಗಡಣೆ ಆಗಿಲ್ಲ. ಕುಟುಂಬಗಳು ಬೆಳೆದ ಹಾಗೆಯೇ ಮಹಿಳೆಯ ಕೆಲಸಕ್ಕೆ ಬೇಡಿಕೆ ಇದ್ದು ಆಕೆಗೆ ಭಾವನಾತ್ಮಕ ಮತ್ತು ನೈತಿಕ ಸಹಾಯವನ್ನು ಮಾಡಲಾಗುತ್ತದೆ. ರೋಚೆಲಿಯಾ ಮತ್ತು ಇತರರು ಮಹಿಳೆಗೆ ರಾಜಕೀಯ, ಆರ್ಥಿಕ ಅಧಿಕಾರ ಮತ್ತು ಅವಕಾಶಗಳನ್ನು ಏಕೆ ನೀಡಲಾಗಿಲ್ಲ ಎಂದರೆ ಅವರನ್ನು ಕುಟುಂಬಕ್ಕೆ ತಮ್ಮನ್ನು ತಾವೇ ಸೀಮಿತಗೊಳಿಸಿಕೊಳ್ಳುವಂತೆ ಸಾಮಾಜೀಕರಣಗೊಳಿಸಿರುತ್ತಾರೆ. ಪುರುಷರಿಗಿಂತ ಮಹಿಳೆ ಸಮಾಜದ ರಚನಾತ್ಮಕ ರಚನೆಗಳಲ್ಲಿ, ನಿರ್ಣಯ ಪ್ರಕ್ರಿಯೆಗಳಲ್ಲಿ ದುರ್ಬಲ ಸ್ಥಾನವನ್ನು ಹೊಂದಿದ್ದಾರೆ ಎಂದಿರುವರು.

ಈ ಲಿಂಗಸಂಬಂಧಿ ಚಿಂತನೆಗಳು ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಮುಂದುವರಿಯುತ್ತಲೇ ಇರುತ್ತವೆ. ಮೈಕಲ್ ಅವರು ಹೇಳುವಂತೆ "ಹೆಣ್ಣುಮಕ್ಕಳನ್ನು ಬಾಲ್ಯದಿಂದಲೇ ನೀನು ಮುಂದೊಂದು ದಿನ ಮಕ್ಕಳನ್ನು ಹೆರಬೇಕು, ಮಕ್ಕಳ ಪಾಲನೆ-ಪೋಷಣೆ ಮಾಡಬೇಕು, ಗೃಹ ಕಾರ್ಯವನ್ನು ಮಾಡಬೇಕು, ಮನೆಯ ಆಗು ಹೋಗುಗಳನ್ನು ಎಲ್ಲವನ್ನು ನಿಭಾಯಿಸಿಕೊಂಡು ಹೋಗಬೇಕು ಎಂದು ಸಾಮಾಜೀಕರಿಸಲಾಗುತ್ತದೆ. ಕೆಲವು ಕೆಲಸಗಳು ಮಾತ್ರ ಮಹಿಳೆಗೆ ಸೂಕ್ತವಾದ ಕೆಲಸಗಳು ಉಳಿದ ಕೆಲಸಗಳು ಮಹಿಳೆಗೆ ಸೂಕ್ತವಾಗುವುದಿಲ್ಲ ಎಂದು ಹೇಳುತ್ತಲೇ ಅಂತರ್ಗತ ಮಾಡಲಾಗುತ್ತದೆ"(ಅಗರ್‌ವಾಲ್ ಬಿ. (ಇಡಿ), ೧೯೯೦, ಪು. ೧೧೮). ಅಧ್ಯಯನಕ್ಕೆ ಒಳಪಟ್ಟ ತಾಯಂದಿರು ತಮ್ಮ ಹೆಣ್ಣುಮಕ್ಕಳಿಗೆ ರೊಟ್ಟಿ ಮಾಡಲು, ಅಡುಗೆ ಕೆಲಸವನ್ನು, ಮನೆಯ ಕೆಲಸವನ್ನು ಬಾಲ್ಯದಿಂದಲೇ ಕಲಿಸುತ್ತಾರೆ. ಅದೇ ತೆರನಾಗಿ ಗಂಡುಮಕ್ಕಳಿಗೆ ಹೊಲ-ಗದ್ದೆ ಕೆಲಸಗಳನ್ನು ಮಾಡಲು ಕಲಿಸುತ್ತಿರುವುದು ಕಂಡುಬರುತ್ತದೆ.

### ಲಿಂಗಾಧಾರಿತವಾಗಿ ಹೊಂದಾಣಿಕೆಯಾಗುವ ಕೆಲಸಗಳು

ಕೋಷ್ಟಕ ೪.೧೭.

**ಲಿಂಗಾಧಾರಿತವಾಗಿ ಹೊಂದಾಣಿಕೆಯಾಗುವ ಕೆಲಸಗಳ ವಿವರ**

| ಕೆಲಸದ ವಿವರ | ಹೆಣ್ಣು ಶೇಕಡವಾರು | ಗಂಡು ಶೇಕಡವಾರು |
|---|---|---|
| ಮನೆಯ ಪ್ರಮುಖ ನಿರ್ಧಾರಗಳ ಕೈಗೊಳ್ಳುವಿಕೆ | ೨೮.೫ | ೭೧.೫ |
| ಮಕ್ಕಳ ಜವಾಬ್ದಾರಿ | ೨೪.೫ | ೭೫.೫ |
| ಆರೋಗ್ಯದ ಕಾಳಜಿ ಮಾಡುವುದು | ೧೦.೦ | ೯೦.೦ |
| ಶಾಲೆಯ ಶುಲ್ಕವನ್ನು ಭರಿಸುವುದು | ೦೯.೧ | ೯೦.೮ |
| ಅನಾರೋಗ್ಯಕ್ಕೆ ಒಳಗಾದವರ ಕಾಳಜಿ ಮಾಡುವುದು | ೮೮.೮ | ೧೧.೧ |
| ಮಕ್ಕಳ ಸ್ನಾನ ಮಾಡಿಸುವುದು | ೯೩.೫ | ೫.೬ |
| ಅಡುಗೆ ಮಾಡುವುದು | ೯೬.೪ | ೩.೫ |
| ಉರುವಲುಗಾಗಿ ಪಾವತಿಸುವುದು | ೭೩.೯ | ೨೫.೦ |
| ಉರುವಲು ಸಂಗ್ರಹಿಸುವುದು # | ೯೮.೧ | ೧೧.೨ |
| ನೀರನ್ನು ತರುವುದು # | ೯೨.೫ | ೭.೫ |

# (ಒಟ್ಟು ಶೇಕಡವಾರು ನೂರಕ್ಕಿಂತ ಅಧಿಕವಾಗುತ್ತದೆ. ಏಕೆಂದರೆ ನೂರಕ್ಕಿಂತ ಹೆಚ್ಚಾದ ಅಂಕಿಸಂಖ್ಯೆಗಳು ಇಬ್ಬರೂ ಆ ಕೆಲಸವನ್ನು ಮಾಡಬೇಕು ಎಂದು ಹೇಳಿರುವುದು ಇದಕ್ಕೆ ಕಾರಣವಾಗಿದೆ).

ಅಧ್ಯಯನದಲ್ಲಿ ಕಂಡುಬರುವುದೇನೆಂದರೆ ಕೃಷಿಯ ಬೆಳೆಗಳಿಗೆ ಪುರುಷನು ಜವಾಬ್ದಾರನು. ಅದರಲ್ಲಿ ಮರಗಳನ್ನು ಕಡಿಯುವುದು, ನೆಲವನ್ನು ಸ್ವಚ್ಛಗೊಳಿಸುವುದು, ಆಹಾರವನ್ನು ಸಂಗ್ರಹಿಸುವುದು, ಪ್ರಾಣಿಗಳನ್ನು ಬಲೆಗೆ ಬೀಳಿಸುವುದು/ಬೇಟೆಯಾಡುವುದು, ಕಾಡಿನೊಳಗಿನ ಗಿಡಗಳನ್ನು ಸಂಗ್ರಹಿಸುವುದು, ಮನೆಯನ್ನು ಕಟ್ಟುವುದು ಮತ್ತು ಮನೆಯ ನಿರ್ವಹಣೆಯನ್ನು ಮಾಡುವುದು ಗಂಡಸರ ಕೆಲಸ ಮತ್ತು ಜವಾಬ್ದಾರಿ ಆಗಿದೆ. ಮಹಿಳೆ ಮನೆಯ ಕೆಲಸದ ಜೊತೆಗೆ ಕೃಷಿ ಕೆಲಸಗಳನ್ನು ಮಾಡುವುದು ಆಕೆಯ ಜವಾಬ್ದಾರಿ. ಮಹಿಳೆಗೆ ಅನಾರೋಗ್ಯ ಉಂಟಾದಾಗ ಮಾತ್ರ ಪುರುಷ ಮನೆಯ ಕೆಲಸಗಳಲ್ಲಿ

ಸಹಾಯವನ್ನು ಮಾಡುತ್ತಾನೆ. ಅದು ಯಾವಾಗಲೋ ಒಮ್ಮೆ. ಪುರುಷನಿಂದ ಕುಟುಂಬಕ್ಕೆ ಆರ್ಥಿಕ ಸಹಾಯವನ್ನು ನಿರೀಕ್ಷಿಸಲಾಗುತ್ತದೆ ಮತ್ತು ಅದು ಆತನ ಕರ್ತವ್ಯವಾಗಿರುತ್ತದೆ. ಪುರುಷರು ಶಾಲೆಯ ಶುಲ್ಕ, ಮನೆ ಮತ್ತು ಮನೆಯ ರಿಪೇರಿ, ಆರೋಗ್ಯ ರಕ್ಷಣೆ ಕೆಲಸಗಳಿಗಾಗಿ ಹಣವನ್ನು ನೀಡುವುದು ಅವರ ಜವಾಬ್ದಾರಿ. ಅದೇ ತೆರನಾಗಿ ಮಹಿಳೆ ಆಹಾರವನ್ನು ಅಥವಾ ಅಡುಗೆ ತಯಾರಿಸುವುದು, ಬಟ್ಟೆ ತೊಳೆಯುವುದು, ಪಾತ್ರೆ ತೊಳೆಯುವುದು, ಮನೆಯನ್ನು ಸ್ವಚ್ಛವಾಗಿಡುವುದು, ಮಕ್ಕಳ ಸಣ್ಣಪುಟ್ಟ ಖರ್ಚುಗಳನ್ನು ನಿಭಾಯಿಸುವುದು, ಮನೆಯ ಅಗತ್ಯತೆಗಳನ್ನು ಹೊಂದಿಸುವುದು ಆಕೆಯ ಜವಾಬ್ದಾರಿ ಆಗಿದೆ ಎಂದು ಹೇಳುತ್ತಾರೆ.

ಶಿಕ್ಷಣದ ವಿಷಯಕ್ಕೆ ಬಂದಾಗ ಮಕ್ಕಳ ಶಿಕ್ಷಣದ ಸಣ್ಣ-ಪುಟ್ಟ ಖರ್ಚುಗಳನ್ನು ಭರಿಸಲು ಸಾಧ್ಯ. ಮಕ್ಕಳ ಹೆಚ್ಚಿನ ಓದಿಗೆ ಅಥವಾ ಹೆಚ್ಚಾಗುವ ಖರ್ಚು ಕೋರ್ಸ್‌ಗಳಿಗೆ ಭರಿಸಲು ಸಾಧ್ಯವಾಗುವುದಿಲ್ಲ. ಈ ಜನರ ಒಂದು ನಿರೀಕ್ಷೆ ಎಂದರೆ ಓದಿದ ತಕ್ಷಣ ಕೆಲಸ ದೊರಕಬೇಕು. ಒಬ್ಬ ವ್ಯಕ್ತಿ ಹತ್ತನೆಯ ತರಗತಿ ಅಥವಾ ಪಿಯುಸಿ ಶಿಕ್ಷಣ ಪಡೆದ ನಂತರ ಕೆಲಸ ಸಿಗಬೇಕು. ಇಲ್ಲದಿದ್ದರೆ ಅವರನ್ನು ಮುಂದಕ್ಕೆ ಓದಿಸಲು ಹಣವನ್ನು ಖರ್ಚು ಮಾಡುವುದಿಲ್ಲ. ಅಲ್ಲದೆ ಓದನ್ನು ನಿಲ್ಲಿಸುವಂತೆ ಹೇಳಲಾಗುತ್ತದೆ. ಹಣವನ್ನು ನೀಡಬೇಕಾದ ಕೆಲಸಗಳಿಗೆ ಪುರುಷನನ್ನೇ ಜವಾಬ್ದಾರಿಯನ್ನಾಗಿ ಮಾಡಲಾಗುತ್ತದೆ. ಇದು ಪುರುಷರಿಗೆ ಆರ್ಥಿಕ ಅವಶ್ಯಕತೆಗಳನ್ನು ಪೂರೈಸಲು ಕಷ್ಟವಾಗುತ್ತಿದೆ.

ಸಂಶೋಧನೆಗೆ ಒಳಪಟ್ಟ ಹೆಚ್ಚಿನ ವಕ್ತೃಗಳು ಮಹಿಳೆ ಮಾಡಬಹುದಾದ ಅತ್ಯುತ್ತಮ ಕೆಲಸವೆಂದರೆ ಗಂಡನ ಕೆಲಸಕ್ಕೆ ಪೂರಕವಾಗಿ ಹೆಂಡತಿ ಕೆಲಸ ಮಾಡಬೇಕು ಎಂದು ಹೇಳಿದ್ದಾರೆ. ಒಟ್ಟು ೧೬೩ ವಕ್ತೃಗಳು ಮಹಿಳೆಯ ಕೆಲಸ ಪುರುಷನ ಕೆಲಸಕ್ಕಿಂತ ಶ್ರಮದಾಯಕವಾಗಿದೆ, ಏಕೆಂದರೆ ಮಹಿಳೆ ಮನೆಯ ಒಳ-ಹೊರಗೂ ದುಡಿಯುತ್ತಾಳೆ. ಮಹಿಳೆಯ ಕೆಲಸವು ಕಣ್ಣಿಗೆ ಕಾಣಿಸದ ಹಲವು ಕೆಲಸಗಳನ್ನು ಒಳಗೊಂಡಿದೆ ಎಂದರು. ಬೆನ್ನೇಹ್ ಅವರು "ಇತ್ತೀಚಿನವರೆಗೂ ಮಹಿಳೆ ಮತ್ತು ಮಕ್ಕಳ ದುಡಿಮೆಯು ಅಗೋಚರವಾಗಿದೆ"(ಬೆನ್ನೆಹ್, ಜಿ., ೧೯೯೫, ಪು. ೭೬) ಎಂಬ ಹೇಳಿಕೆಯನ್ನು ಇದು ಪುಷ್ಠೀಕರಿಸುತ್ತದೆ. ಮಹಿಳೆ ಮಾಡುವ ಪೂರಕ ಆರ್ಥಿಕ ಚಟುವಟಿಕೆಗಳು ದಾಖಲಾಗಿಲ್ಲ. ಏಕೆಂದರೆ ಕುಟುಂಬದ ಕೃಷಿ ಚಟುವಟಿಕೆಗಳಲ್ಲಿ, ಮನೆಯಾಧಾರಿತ ಕೆಲಸಗಳಲ್ಲಿ, ಅನೌಪಚಾರಿಕ ವಲಯದ ಚಟುವಟಿಕೆಗಳಲ್ಲಿ ಮಹಿಳೆಯರ ಕೊಡುಗೆಗಳು ಇದ್ದರೂ ಅವುಗಳನ್ನು ಲಿಂಗತಾರತಮ್ಯದಿಂದ ನೋಡಿ ನಿರ್ಲಕ್ಷಿಸಲಾಗುತ್ತದೆ. ಲಿಂಗ ಪೂರ್ವಗ್ರಹಗಳನ್ನು, ನಿಷೇಧಗಳನ್ನು ಭೇದಿಸಬೇಕಾದ ಅವಶ್ಯಕತೆಯಿದೆ.

ಫ್ರಾನ್ಸಿಸ್ ಇ. ಹೇಳುವಂತೆ "ಲಿಂಗಾಧಾರಿತ ಆಧಾರಿತ ಶ್ರಮವಿಭಜನೆ ಪರಿಗಣಿಸುವಿಕೆಯು ಕೃಷಿ, ಮನೆ, ಮಕ್ಕಳ ಮತ್ತು ಹಿರಿಯರ ಕೆಲಸವನ್ನು ಗುರುತಿಸದೆ, ಮನೆಯ ಆರ್ಥಿಕತೆಗೆ ಪೂರಕವೆಂಬತೆ ನೋಡಲಾಗುತ್ತದೆ. ಕೃಷಿ-ಕುಟುಂಬದ ಚಟುವಟಿಕೆಗಳ ವಿವರವನ್ನು ಅತ್ಯುತ್ತಮವಾಗಿ ಅರ್ಥ ಮಾಡಿಕೊಳ್ಳಬೇಕೆಂದರೆ ಮಹಿಳೆ ಮತ್ತು ಪುರುಷರ ಕುಟುಂಬದೊಳಗಿನ ಕೃಷಿಯ, ಕೃಷಿಯೇತರ ಕೆಲಸಗಳ ಆಯಾಮವನ್ನು ಅರ್ಥಮಾಡಿಕೊಳ್ಳಬೇಕು"(ಫ್ರಾನ್ಸಿಸ್ ಇ., ೧೯೯೫, ಪು. ೧೯೭-೨೧೬) ಎಂದು ಹೇಳಬಹುದು

**ಮನೆಯ ಕೆಲಸಗಳಿಗೆ ವ್ಯಯಿಸುವ ಸಮಯ:**

ಅರ್ಡೆಫಿಯೊ-ಶಾಂಡೋರ್ಫ್ ಅವರು ನಡೆಸಿದ ಸಂಶೋಧನೆಯಲ್ಲಿ "ಮಹಿಳೆಯರು ಪುರುಷರಿಗಿಂತ ಹೆಚ್ಚಿನ ಸಮಯವನ್ನು ಮನೆಯ ಕೆಲಸಕಾರ್ಯಗಳಿಗಾಗಿ ವ್ಯಯಿಸುತ್ತಾರೆ ಎಂದು ಉಲ್ಲೇಖಿಸಿರುವರು"(ಅರ್ಡೆಫಿಯೊ-ಶಾಂಡೋರ್ಫ್ ಇ. (ಇಡಿ), ೧೯೯೪, ಪು. ೧೭೮). ಸರಾಸರಿ ೧೪ ತಾಸುಗಳ ಕೆಲಸವನ್ನು ಅದರಲ್ಲಿ ೮-೯ ಗಂಟೆಗಳ ಕೆಲಸವನ್ನು ಕೃಷಿಗಾಗಿ, ಉಳಿದ  ಅವಧಿಯ ಕೆಲಸವನ್ನು ಕೃಷಿಯೇತರ ಕೆಲಸಗಳಿಗಾಗಿ ವ್ಯಯಿಸುತ್ತಾರೆ. ಪುರುಷರು ೮-೯ ಗಂಟೆಗಳ ಕಾಲ ಕೆಲಸವನ್ನು ಮಾಡುತ್ತಾರೆ. ಅದರಲ್ಲಿ ೭ ತಾಸು ಕೃಷಿಸಂಬಂಧಿ ಕೆಲಸವನ್ನು ಉಳಿದ ಸಮಯದಲ್ಲಿ ಕೃಷಿ ಕೆಲಸವಲ್ಲದ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ವಾರದ ಅವಧಿಯನ್ನು ಲೆಕ್ಕಕ್ಕೆ ಹಾಕಿದರೆ ಮಹಿಳೆಯರು ೬೪ ಗಂಟೆಗಳ ಶ್ರಮವನ್ನು ವ್ಯಯಿಸುತ್ತಾರೆ ಮತ್ತು ಪುರುಷರು ೩೨ ಗಂಟೆಗಳ ಕೆಲಸವನ್ನು ನಿರ್ವಹಿಸುತ್ತಾರೆ. ದಿನದಲ್ಲಿ ಅರ್ಧದಿನ ಮನೆಯ ಕೆಲಸಗಳಿಗಾಗಿ ಮಹಿಳೆಯರು ಶ್ರಮವನ್ನು ವ್ಯಯಿಸುತ್ತಾರೆ. ಪುರುಷರು ಕುಟುಂಬಕ್ಕಾಗಿ ದಿನದ ಕಾಲುಗಂಟೆಗಳ ಅವಧಿಯ ಶ್ರಮವನ್ನು ವ್ಯಯಿಸುತ್ತಾರೆ. ಪುರುಷರು ದಿನದ ಹೆಚ್ಚು ಅವಧಿಯ ಕೆಲಸವನ್ನು ಕುಟುಂಬದ ಕೃಷಿಯಲ್ಲಿ, ಸಣ್ಣಪುಟ್ಟ ವ್ಯವಹಾರಗಳಲ್ಲಿ ಅಥವಾ ಇನ್ನಿತರ ಆರ್ಥಿಕ ಚಟುವಟಿಕೆಗಳಲ್ಲಿ ಮತ್ತು ಕೌಟುಂಬಿಕ ಜವಾಬ್ದಾರಿಗಳಲ್ಲಿ ಸಮಯವನ್ನು ಕಳೆಯುತ್ತಾರೆ. ಮಹಿಳೆಯ ಕೆಲಸದ ಹೆಚ್ಚಿನ ಅವಧಿಯು ಬೇರೆಯವರ ಉಪಯೋಗಕ್ಕಾಗಿ ಅಂದರೆ ಕುಟುಂಬದ ಹಣದ ಮೌಲ್ಯ ನೀಡದ ಕೆಲಸಗಳಿಗೆ, ಗಂಡನ ಕೃಷಿ ಕೆಲಸಗಳಿಗೆ ಮತ್ತು ಕುಟುಂಬ ಸದಸ್ಯರ ವಿಸ್ತೃತ ಕೆಲಸಗಳಿಗೆ ಹೋಗುತ್ತದೆ. ಅಂದರೆ ಈ ಪ್ರದೇಶದ ಮಹಿಳೆಯರ ದಿನಚರಿ ಬೆಳಗ್ಗೆ/ನಸುಕಿನಲ್ಲಿ ೪.೩೦ರಿಂದ ಪ್ರಾರಂಭವಾಗಿ ರಾತ್ರಿ ೯-೧೦ ಗಂಟೆಗಳ ವರೆಗೆ ನಡೆಯುತ್ತದೆ. ವಲಸೆ ಹೋದ ಕುಟುಂಬದ ಮಹಿಳೆಯ ಕೆಲಸದ ಅವಧಿ ಇನ್ನೂ ಹೆಚ್ಚಾಗಿರುವುದು ಕಂಡುಬರುತ್ತದೆ.

ವಲಸೆ ಹೋದ ಕುಟುಂಬಗಳು ಶೇಕಡ ೮೫ರಷ್ಟು ಹೆಚ್ಚು ಕೆಲಸವನ್ನು ಮಾಡಬೇಕಾಗುತ್ತದೆ. ಮಹಿಳೆಯರು ದಿನದ ಹೆಚ್ಚಿನ ಅವಧಿಯನ್ನು ನೀರು ಸಂಗ್ರಹಿಸಲು, ಉರುವಲು ಸಂಗ್ರಹಿಸಲು ವ್ಯಯಿಸುತ್ತಾರೆ. ಅಂದರೆ ನೀರು ಸಂಗ್ರಹಿಸಲು ದಿನದಲ್ಲಿ ಒಂದರಿಂದ ಐದು ಗಂಟೆಗಳ ಅವಧಿ ವ್ಯತ್ಯಾಸ ಆಗುತ್ತದೆ ಹಾಗೂ ಮಳೆಗಾಲ, ಚಳಿಗಾಲ, ಬೇಸಿಗೆ ಕಾಲಕ್ಕೆ ಅನುಗುಣವಾಗಿ ಅವಲಂಬಿತವಾಗುತ್ತದೆ. ೧-೨ ಗಂಟೆಗಳ ಸಮಯವನ್ನು ಉರುವಲು ಸಂಗ್ರಹಿಸಲು, ೨-೩ ಗಂಟೆಗಳ ಅವಧಿ ಅಡುಗೆ ಮಾಡಲು, ೩೦ ನಿಮಿಷದಿಂದ ೧ ಗಂಟೆ ಸ್ನಾನ, ಮಕ್ಕಳನ್ನು ಶಾಲೆಗೆ ಕಳುಹಿಸಲು ತಯಾರು ಮಾಡುವುದು, ೪-೫ ಗಂಟೆಗಳ ಅವಧಿಯನ್ನು ಕೃಷಿಸಂಬಂಧಿ ಕೆಲಸ ಕಾರ್ಯಗಳಿಗೆ ವ್ಯಯ ಮಾಡುವುದು ಕಂಡುಬರುತ್ತದೆ.

ಕೆಲವು ಪುರುಷ ವಕ್ತೃಗಳು ಕೃಷಿ ಚಟುವಟಿಕೆಗಳಲ್ಲಿ ಮಹಿಳೆಯರಿಗಿಂತ ಹೆಚ್ಚಿನ ಅವಧಿಯನ್ನು ಕಳೆಯುತ್ತಾರೆ ಎಂದು ಹೇಳಿದ್ದಾರೆ. ಒಟ್ಟಾರೆ ಪುರುಷರು ೭-೮ ಗಂಟೆಗಳ ಅವಧಿಯನ್ನು ಕೃಷಿಯಲ್ಲಿ ಕಳೆದರೆ ಮಹಿಳೆಯರು ೬-೭ ಗಂಟೆಗಳನ್ನು ಕಳೆಯುತ್ತಾರೆ. ಮಹಿಳೆ ಮತ್ತು ಪುರುಷರ ಕೆಲಸದ ಅವಧಿಯಲ್ಲಿ ಯಾವುದೇ ತೆರನಾದ ವ್ಯತ್ಯಾಸಗಳಿದ್ದರೂ ಮಹಿಳೆಯರು ಹೆಚ್ಚಿನ ಕೆಲಸದ ಹೊರೆಯನ್ನು ಹೊರುತ್ತಾರೆ ಎಂಬುದಂತೂ ಮನದಟ್ಟಾಗುವ ಸಂಗತಿಯಾಗಿದೆ.

**ಮನೆಯ ಜವಾಬ್ದಾರಿಗಳಲ್ಲಿ ಸಹಾಯ**

ಹೆಚ್ಚಿನ ಕುಟುಂಬಗಳಲ್ಲಿ ಮನೆಯ ಕೆಲಸಕಾರ್ಯಗಳಲ್ಲಿ ಮಗಳು, ನಾದಿನಿ, ಅತ್ತಿಗೆ, ಅತ್ತೆ ಸಹಾಯ ಮಾಡುತ್ತಾಳೆ. ಸಹಾಯ ಪಡೆದುಕೊಳ್ಳುವುದು ಸಹಾಯ ಮಾಡುವವರ ವಯಸ್ಸು ಮತ್ತು ಕೌಶಲ್ಯದ ಮೇಲೆ ಆಧಾರಿತವಾಗಿದೆ. ಮನೆಯ ಹೆಣ್ಣುಮಕ್ಕಳು ಪಾತ್ರೆ, ಬಟ್ಟೆ ತೊಳೆಯುವುದು, ಕಸ ಗುಡಿಸುವುದು, ತರಕಾರಿ ಹೆಚ್ಚುವುದು, ಸ್ವಚ್ಛಗೊಳಿಸುವ ಕೆಲಸವನ್ನು ಮಾಡುತ್ತಾರೆ. ಆದರೆ ಹೆಣ್ಣುಮಕ್ಕಳಿಲ್ಲದ ಕುಟುಂಬಗಳಲ್ಲಿ ಯಾವುದೇ ತೆರನಾದ ಸಹಾಯವನ್ನು ಪಡೆಯಲು ಗೃಹಿಣಿಗೆ ಸಾಧ್ಯವಾಗುವುದಿಲ್ಲ. ಹೆಣ್ಣುಮಕ್ಕಳು ಇಲ್ಲದ ಕುಟುಂಬದ ೧/೩ರಷ್ಟು ಮಹಿಳೆಯರು ತಮ್ಮ ದೂರದ ಸಂಬಂಧಿ ಅಥವಾ ಅಕ್ಕ-ಪಕ್ಕದ ಮನೆಯ ಹೆಣ್ಣುಮಕ್ಕಳಿಂದ ಯಾವುದೇ ತೆರನಾದ ಸಹಾಯ ಪಡೆಯಲು ಸಾಧ್ಯವಾಗುವುದಿಲ್ಲ. ಏಕೆಂದರೆ ಸಹಾಯ ಮಾಡಿದ ಹೆಣ್ಣುಮಕ್ಕಳಿಗೆ ಅವರು ಸಹಾಯ ಮಾಡಲು ಆಗದ ಕಾರಣ ಕೆಲಸದ ಎಲ್ಲ ಹೊರೆಯನ್ನು ಅವರೇ ಹೊರುತ್ತಾರೆ.

೧೦-೧೫ ವರ್ಷ ವಯಸ್ಸಿನ ಹೆಣ್ಣುಮಕ್ಕಳು ಗಂಡುಮಕ್ಕಳಿಗಿಂತ ಹೆಚ್ಚು ಕುಟುಂಬದ ಕೃಷಿ ಮತ್ತು ಮನೆಯ ಜವಾಬ್ದಾರಿಗಳನ್ನು ತೆಗೆದುಕೊಳ್ಳುತ್ತಾರೆ. ಗಂಡುಮಕ್ಕಳು ಮನೆಯನ್ನು

ಸ್ವಚ್ಛಗೊಳಿಸುವ ಕೆಲಸದಲ್ಲಿ ಮಾತ್ರ ಸಹಾಯ ಮಾಡುತ್ತಾರೆ. ಉಳಿದ ಮನೆಯ ಕೆಲಸಗಳಲ್ಲಿ ಗೈರಾಗುತ್ತಾರೆ. ಹೆಣ್ಣುಮಕ್ಕಳು ಅಗತ್ಯವಾಗಿ ಮನೆಯ ಕೆಲಸಕಾರ್ಯಗಳನ್ನು ಮಾಡಲೇಬೇಕು. ಹೀಗಾಗಿ ಪ್ರೌಢಾವಸ್ಥೆಗೆ ಬಂದ ಹೆಣ್ಣುಮಕ್ಕಳು ಶಿಕ್ಷಣದಲ್ಲಿ ಮುಂದುವರಿಯುವುದು ಕಡಿಮೆ ಆಗುವುದಕ್ಕೂ ಇದು ಕಾರಣವಾಗಿದೆ.

**ಮನೆಯ ಆರ್ಥಿಕ ಪರಿಸ್ಥಿತಿ ಸುಧಾರಣೆ**

ಕೋಷ್ಟಕ ೪.೧೮.

**ವಲಸೆಯಿಂದ ಮನೆಯ ಆರ್ಥಿಕ ಪರಿಸ್ಥಿತಿ ಸುಧಾರಣೆ ವಿವರ**

| **ಆರ್ಥಿಕ ಪರಿಸ್ಥಿತಿ ಸುಧಾರಿಸಿದೆಯಾ?** | **ಪುರುಷರ ಶೇಕಡವಾರು** | **ಮಹಿಳೆಯರ ಶೇಕಡವಾರು** |
|---|---|---|
| ಹೌದು | ೮೮% | ೮೩% |
| ಇಲ್ಲ | ೦೨% | ೦೫% |
| ಹಾಗೇ ಇದೆ | ೧೦% | ೧೨% |

ವಲಸೆಯಿಂದ ಮನೆಯ ಆರ್ಥಿಕ ಪರಿಸ್ಥಿತಿಯ ಮೇಲೆ ಸಕಾರಾತ್ಮಕ ಪರಿಣಾಮ ಬೀರಿದೆ ಎಂದು ವಲಸಿಗರು ಮತ್ತು ವಲಸಿಗರ ಮನೆಯ ಸದಸ್ಯರು ತಿಳಿಸಿದ್ದಾರೆ. ಅದೇ ಗ್ರಾಮದಲ್ಲಿ ಕೆಲಸವಿಲ್ಲದೆ ಇರುವುದರಿಂದ ಬೇಡವಾದ ಕೆಟ್ಟ ಚಟಗಳನ್ನು ಕಲಿಯುವ ಸಾಧ್ಯತೆ ಹೆಚ್ಚು ಇತ್ತು. ಆದರೆ ಮನಸ್ಸು ಮಾಡಿ ಬೇರೆ ಪ್ರದೇಶಕ್ಕೆ ವಲಸೆ ಹೋಗಿರುವುದರಿಂದ ವಲಸಿಗರನ್ನು ಗೌರವದಿಂದ ಕಾಣುತ್ತಾರೆ. ಅಲ್ಲದೆ ಅವರ ಪರಿಸ್ಥಿತಿಯು ಸುಧಾರಿಸಿದೆ ಎಂದು ಹೇಳಿದ್ದಾರೆ.

ಒಟ್ಟಿನಲ್ಲಿ ಅಧ್ಯಯನಕ್ಕೆ ಒಳಪಟ್ಟ ಕುಟುಂಬ ಸದಸ್ಯರ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಂಗತಿಗಳನ್ನು ಗಮನಿಸಿದಾಗ ಮಹಿಳೆಯರು ಕೌಟುಂಬಿಕ ಜವಾಬ್ದಾರಿ, ಸಂಪನ್ಮೂಲಗಳ ಸಂಗ್ರಹಣೆ, ಕೃಷಿ ಕೆಲಸ ಮತ್ತು ಕುಟುಂಬದ ಕೃಷಿ ಕೆಲಸಗಳಲ್ಲಿ ಜವಾಬ್ದಾರಿಯುತವಾದ ಪಾಲನ್ನು ಹೊಂದಿದ್ದಾರೆ ಎಂದು ತೋರಿಸುತ್ತದೆ. ಮೋಟ್ಸ್ ಹೇಳಿರುವಂತೆ ಮಹಿಳೆಯರು ಸೀಮಿತವಾದ ಔಪಚಾರಿಕ ಹಕ್ಕುಗಳನ್ನು, ರಾಜಕೀಯ ಮತ್ತು ಆರ್ಥಿಕ ಅವಕಾಶಗಳನ್ನು ಹೊಂದುತ್ತಾರೆ.ಏಕೆಂದರೆ ಅವರಿಗೆ ಅವಕಾಶ ನೀಡುವ ಸಂಪನ್ಮೂಲಗಳು ಗೃಹಕ್ಕೆ ಮತ್ತು ಗೃಹಸಂಬಂಧಿ ಚಟುವಟಿಕೆಗಳಿಗೆ ಸೀಮಿತಗೊಳಿಸಿ ಕೊಳ್ಳುವಂತೆ ಮಾಡುತ್ತದೆ. ಲಿಂಗಾಧಾರಿತ ಹಕ್ಕುಗಳು ಮತ್ತು ಕರ್ತವ್ಯ, ಜವಾಬ್ದಾರಿಗಳು ನೈಸರ್ಗಿಕವಾಗಿ ಇರುವುದಿಲ್ಲ. ಪುರುಷಪ್ರಭುತ್ವದ ಸಿದ್ಧಾಂತಗಳು ಲಿಂಗವ್ಯವಸ್ಥೆಯನ್ನು

ಅನುಮೋದಿಸುತ್ತವೆ ಮತ್ತು ಆದರ್ಶೀಕರಿಸುತ್ತವೆ. ಅದನ್ನೇ ಬಲಪಡಿಸಿ ಮುಂದುವರಿಸುವಂತೆ ಮಾಡುತ್ತವೆ. ಮಹಿಳೆಯರು ಸಾಮಾಜಿಕ ಪಾತ್ರ ಮತ್ತು ರಚನೆಗಳಲ್ಲಿ, ಪ್ರತಿಕೂಲದ ಸ್ಥಾನಗಳಲ್ಲಿ ಇದ್ದರೂ ಮಹಿಳೆಯರು ಸಹ ಅದಕ್ಕೆ ಮಾತ್ರ ಸೀಮಿತರಾಗಿಯೇ ಉಳಿದಿಲ್ಲ ಎಂದು ಹೇಳಬಹುದು.

ಬಳ್ಳಾರಿ ಜಿಲ್ಲೆಯ ಅನೇಕ ತಾಲೂಕಿನ ವಿವಿಧ ಗ್ರಾಮಗಳು ವಾರ್ಡ್ ತರಹ ಇವೆ. ಗ್ರಾಮ ಎನ್ನುವುದಕ್ಕಿಂತ ವಾರ್ಡ್ ಎನ್ನುವುದು ಹೆಚ್ಚು ಸೂಕ್ತ. ಅಲ್ಲಿ ಎಸ್.ಸಿ. ಎಸ್.ಟಿ. ಹಾಗೂ ಸ್ವಲ್ಪ ಹಿಂದುಳಿದ ವರ್ಗಕ್ಕೆ ಸೇರಿದ ಮನೆಗಳಿವೆ. ಇವರಲ್ಲಿ ಅನೇಕರಿಗೆ ಮನೆ ಹೊರಗೆ ಕಾಲಿಟ್ಟರೆ ಒಂದಿಂಚು ಭೂಮಿಯ ತುಣುಕು ಕೂಡಾ ಇಲ್ಲ.

ಪ್ರತಿವರ್ಷ ನವೆಂಬರ್ ಮುಗಿಯುವ ಹೊತ್ತಿಗೆ ಅಂದರೆ ಸುಗ್ಗಿ ಮುಗಿಯುತ್ತಲೇ ಪ್ರತಿ ಮನೆಯಲ್ಲೂ ಫೋನು ರಿಂಗುಡುತ್ತದೆ. ಬೇಗ ಕೆಲಸಕ್ಕೆ ಬಂದು ಹಾಜರಾಗಿರೆಂದು ಕರೆಯುವ ಇಟ್ಟಿಗೆ ಭಟ್ಟಿ ಮಾಲೀಕನ ಫೋನು. ಸುಗ್ಗಿ ಕೆಲಸವನ್ನೂ ಅಲ್ಲಿಗಲ್ಲಿಗೇ ಬಿಟ್ಟು ಭಟ್ಟಿಗೆ ಹೋಗಲು ಒಂದೊಂದೇ ಕುಟುಂಬ ತಯಾರಾಗುತ್ತದೆ. ತಯಾರಾಗಲೇ ಬೇಕು. ಯಾಕೆಂದರೆ ಇಷ್ಟು ದಿನ ಭಟ್ಟಿಯ ಸಾಹುಕಾರ ಉಣ್ಣಲು, ಉಡಲು, ಮದುವೆಗೆ, ಜಾತ್ರೆಗೆ, ಮನೆ ಕಟ್ಟಿಕೊಳ್ಳಲಿಕ್ಕೆ ದುಡ್ಡು ಕೊಟ್ಟು ಸಲುಹಿದ್ದಾನೆ. ಸಾಲದೆತ್ತರಕ್ಕೆ ಬಡ್ಡಿ ಇರುವುದು ಬೇರೆ ವಿಷಯ. ಆಪತ್ಕಾಲಕ್ಕೆ ದುಡ್ಡು ಕೊಟ್ಟಿದ್ದನಲ್ಲ? ಹೋಗಲೇಬೇಕು. ಇದು ಕೆಲ ಕಾಲನಿ ಕತೆಯಾದರೆ, ಇನ್ನು ಎಲ್ಲ ಹಳ್ಳಿಗಳ ಕೇರಿಗಳಲ್ಲಿನ ಜನರ ಕತೆ ಇದಕ್ಕಿಂತ ವಿಪರೀತ. ಪ್ರತಿ ವರ್ಷ ವಲಸೆ ಹೋಗಲೇಬೇಕು. ಹೋಗಿಯೇ ಹೋಗುತ್ತಾರಿವರು.

ವಲಸೆ ಎಂಬುದು ಇವರ ಜೀವನಚಕ್ರವೇ ಆಗಿಬಿಟ್ಟಿದೆ ಈಗ. ವರ್ಷಕ್ಕೆ ಹೆಚ್ಚು ಕಮ್ಮಿ ಆರು ತಿಂಗಳು ಇಡೀ ಊರಿಗೆ ಊರೇ ಗುಳೆ ಎದ್ದು ಇಟ್ಟಿಗೆ ಭಟ್ಟಿ ಇರುವಲ್ಲಿ ಪುಟ್ಟ ಪುಟ್ಟ ಗುಡಿಸಲುಗಳನ್ನು ಕಟ್ಟಿಕೊಂಡು ಸಂಸಾರ ಹೂಡುತ್ತವೆ. ಆ ಗುಡಿಸಲಲ್ಲಿಯೇ ಊಟ ನಿದ್ದೆ, ಕುಡಿತ, ಬಡಿತ ಎಲ್ಲವೂ. ಬೆಳಗಿನ ಜಾವ ಮೂರಕ್ಕೆ ಏಳುತ್ತಾರೆ ಗಂಡ ಹೆಂಡತಿ, ಹೆಂಡತಿ. ನೀರು ತಂದು ಸುರಿದರೆ ಗಂಡ ಮಣ್ಣು ಕಲೆಸುತ್ತಾನೆ. ಹೆಂಡತಿ ಮಣ್ಣಿನ ಮುದ್ದೆ ಮಾಡಿಕೊಟ್ಟರೆ ಗಂಡ ನೆಲದಲ್ಲಿ ಸೊಂಟದವರೆಗೆ ಗುಂಡಿಯೊಂದನ್ನು ಮಾಡಿಕೊಂಡು ಅದರೊಳಗಿಳಿದು ಸಾತೆಯಲ್ಲಿ ಮಣ್ಣು ಹಾಕಿ ಇಟ್ಟಿಗೆ ಬಡಿಯುತ್ತಿರುತ್ತಾನೆ. ನಾಲ್ಕು ಕೈಗಳೂ ಚಕ ಚಕನೆ ಓಡುತ್ತಿರಲು ಮಣ್ಣಿನ ಮುದ್ದೆ ಆಯತಾಕಾರ ಪಡೆದು ಇಟ್ಟಿಗೆಯಾಗುತ್ತಿರುತ್ತದೆ. ಸಾಲು ಸಾಲು ಇಟ್ಟಿಗೆಗಳು ಬಿಸಿಲಿಗೆ ಮೈಯೊಡ್ಡಿ ಕೂಡಲು ಈ ಗಂಡ ಹೆಂಡತಿ ಹೊಟ್ಟೆಗೆ ಹಿಡಿ ಕೂಳಿರಲಿ, ಚಹಾ ಹಾಕುವುದನ್ನೂ ಮರೆತು, ಬಿಸಿಲಲ್ಲಿ ಒಣಗುತ್ತಿರುತ್ತಾರೆ. ಒಮ್ಮೆ ಕಲಸಿದ ಮಣ್ಣು ಮುಗಿಯುತ್ತಲೂ ಮತ್ತೆ ಮಣ್ಣು ಕಲೆಸಬೇಕು. ಕೆಲಸ ಚುರುಕಾಗಲು

ಮಕ್ಕಳ ಸಹಾಯವೂ ಬೇಕು. ನೀರು ತರಲು, ಮಣ್ಣು ಹದ ಮಾಡಲು, ಇಟ್ಟಿಗೆ ಬಡಿಯಲು ಎಲ್ಲಾ ಕೆಲಸಕ್ಕೂ.

ಮಕ್ಕಳು ಶಾಲೆಗೆ ಹೋಗುವುದಿಲ್ಲವೇ? ಅವರೆಲ್ಲ ಈಗ ಶಾಲೆಯಲ್ಲಿರಬೇಕಲ್ಲವೇ? ನಿತ್ಯ ಹೋಗುತ್ತಾರ್ರೀ, ಇವತ್ತೇ ಬಿಟ್ಟಿದ್ದಾರೆ ನಮ್ಮ ಮಕ್ಕಳು. ಸಿದ್ಧ ಉತ್ತರ ಪ್ರಶ್ನಿಸಿದವರಿಗೆ ತಯಾರಿರುತ್ತದೆ. ಯಾವೊತ್ತು, ಯಾವ ಗುಡಿಸಲಲ್ಲಿ ಕೇಳಿದರೂ ಈ ಉತ್ತರ ನಿಮಗೆ ಸಿಗುವುದರಲ್ಲಿ ಸಂಶಯವಿಲ್ಲ. ಅಂಗನವಾಡಿ, ಶಾಲೆಗಳು, ಬಸಿರು ಬಾಣಂತನ ಎಲ್ಲವೂ ಈ ಆರು ತಿಂಗಳು ಇಲ್ಲಿಯೇ. ಸಾಮಾನ್ಯವಾಗಿ ಭೂಹೀನ ಕೂಲಿಕಾರರ ಪ್ರತಿ ವರ್ಷದ ಚಕ್ರ ಇದು.

ನಮ್ಮ ಸರಕಾರ ತನ್ನ ಜನರು ಹಸಿವಿನಿಂದ ಬಳಲುತ್ತಿರಬಾರದೆಂದು ಪಡಿತರ ಆಹಾರವನ್ನು ಕೊಡುತ್ತದೆ. ಶಾಲೆಯ ಮಕ್ಕಳು ಹಸಿದಿರಬಾರದೆಂದು ಮಧ್ಯಾಹ್ನದ ಬಿಸಿಯೂಟವನ್ನು ಕೊಡುತ್ತಿದೆ. ಪುಟ್ಟ ಮಕ್ಕಳಲ್ಲಿ ಅಪೌಷ್ಟಿಕತೆ ಆಗಬಾರದೆಂದು ಅಂಗನವಾಡಿಯಲ್ಲಿ ಮಧ್ಯಾಹ್ನ ಬಿಸಿಯೂಟ, ಬೆಳಿಗ್ಗೆ ಶೇಂಗಾ(ಕಳ್ಳೆಕಾಯಿ), ಬೆಲ್ಲ, ಗರ್ಭಿಣಿಯರಿಗೆ ಮನೆಗೊಯ್ಯುವ ಕಾಳು ಕಡಿಗಳನ್ನು ಕೊಡುತ್ತಿದೆ. ಇವೆಲ್ಲ ಯಾಕಾಗಿ? ನಮ್ಮ ಜನತೆಯಲ್ಲಿ ಆಹಾರದ, ಪೌಷ್ಟಿಕಾಂಶದ ಕೊರತೆ ಆಗಬಾರದೆಂದು. ಕಡ್ಡಾಯ ಶಿಕ್ಷಣದ ಜೊತೆಗೆ ಮಕ್ಕಳ ಊಟದ ಜವಾಬ್ದಾರಿಯನ್ನೂ ಸರಕಾರ ಹೊತ್ತಿದೆ. ಆದರೇನು? ವರ್ಷದಲ್ಲಿ ಆರು ತಿಂಗಳು ಆ ಮಕ್ಕಳು ತಂದೆ ತಾಯಿ ಯಾರೂ ಊರಲ್ಲಿಯೇ ಇಲ್ಲವೆಂದರೆ ಯಾರಲ್ಲಿಗೆ ಹೋಗಬೇಕು ಆ ಊಟ? ಪಡಿತರವೇನೋ ಎಲ್ಲಿದ್ದರೂ ಬಂದೊಯ್ಯುತ್ತಾರೆ, ಆದರೆ ಅಂಗನವಾಡಿ, ಶಾಲೆಗಳ ಬಿಸಿಯೂಟದಿಂದ ಮಕ್ಕಳು ಪೂರ್ತಿ ವಂಚಿತರಾಗುತ್ತಾರೆ.

ಗರ್ಭಿಣಿ ಮಹಿಳೆಗೆ ಅಪೌಷ್ಟಿಕತೆ, ರಕ್ತಹೀನತೆ ಆಗಿ ಅವಳಿಗೆ ಜನಿಸುವ ಮಗು ವಿಕಲಾಂಗ ಆಗಿ ಹುಟ್ಟಬಾರದೆಂದು ಕೊಡುವ ಪೂರಕ ಆಹಾರ ಊರಲ್ಲಿಯೇ ಉಳಿಯುತ್ತದೆ. ಗರ್ಭಿಣಿಗೆ ತಿಂಗಳು ತಿಂಗಳಿನ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ವೈದ್ಯರಿಂದ ಪರೀಕ್ಷೆ, ಸ್ಕ್ಯಾನಿಂಗ್, ಉಚಿತ ಹೆರಿಗೆ, ಸುರಕ್ಷಿತ ತಾಯ್ತನಕ್ಕಾಗಿ ಸಿಗಬೇಕಾದ ಜನನಿ ಸುರಕ್ಷಾದಂಥ ಯೋಜನೆಗಳು, ಮಗುವಿನ ದಾಖಲಾತಿ ಎಲ್ಲವುಗಳಿಂದ ಇಡೀ ಕುಟುಂಬವೇ ವಂಚಿತವಾಗುತ್ತದೆ. ಸರಕಾರ ಹಾಕುತ್ತಿರುವ ಹಣವೆಲ್ಲ ನೀರು ಪಾಲಾಗುತ್ತದೆ.

ಒಂದು ಕಡೆ ಸರಕಾರ ಅಥವಾ ತಮ್ಮ ಹಳ್ಳಿಯಲ್ಲಿ ಸಿಗುವ ಎಲ್ಲಾ ಪೋಷಣೆ, ಭದ್ರತೆಗಳಿಂದ ಕುಟುಂಬವು ವಲಸೆ ಎಂಬ ಕಾರಣದಿಂದಾಗಿ ವಂಚಿತವಾಗುತ್ತದೆ. ಇನ್ನೊಂದು ಕಡೆ ಕುಟುಂಬ ಇನ್ನೂ ನಿರಕ್ಷರತೆ, ಬಡತನ, ಅಜ್ಞಾನ, ತಾಯಿಯ

ರಕ್ತಹೀನತೆಗಳಲ್ಲಿಯೇ ಉಳಿದುಕೊಳ್ಳುತ್ತದೆ. ಅಜ್ಞಾನವೋ ಮಾಹಿತಿ ಇಲ್ಲದಿರುವ ಕಾರಣಕ್ಕೋ ತಮ್ಮೆಲ್ಲ ಹಕ್ಕುಗಳನ್ನು ಕೇಳದೆ, ಪಡೆಯದೆ ವ್ಯವಸ್ಥೆಯಲ್ಲಿ ಯಾವುದು ಸಿಗಲು ಸಾಧ್ಯ. ದೇಶದ ಮಾನವ ಅಭಿವೃದ್ಧಿ ಸೂಚ್ಯಂಕ ಇಳಿಯುತ್ತಲೇ ಹೋಗುತ್ತಿದೆ. ಯಾವುದೇ ಶಿಕ್ಷಣವನ್ನೂ ಪಡೆಯದೆ ಅರ್ಧ ವರ್ಷ ಹಳ್ಳಿಯಲ್ಲಿ ಇನ್ನರ್ಧ ವರ್ಷ ಯಾವುದೋ ಇಟ್ಟಿಗೆ ಭಟ್ಟಿಯಲ್ಲಿ ಜೀವನ ಕಳೆಯುವ ಮಕ್ಕಳು ಎಂಥ ನಾಗರಿಕರಾಗಿ ಬೆಳೆಯಬಹುದು? ಚಿಕ್ಕ ವಯಸ್ಸಿನಲ್ಲಿಯೇ ಶಾಲೆ ಬಿಟ್ಟು ಮನೆಯ ಜವಾಬ್ದಾರಿ ಹೊರಲೆಂದು ದುಡಿಯಲು ನಡೆದ ಮಗ ಸದಾ ಅಪಾಯಕಾರಿ ಕೆಲಸದ ಜಾಗದಲ್ಲಿ ಒಬ್ಬರಿಗೊಬ್ಬರು ಕೆಟ್ಟ ಶಬ್ದಗಳಲ್ಲಿ ಬಯ್ದೇ ಕೆಲಸ ಮಾಡಿಸುವ ವಾತಾವರಣದಲ್ಲಿ ಎಂಥ ಮನುಷ್ಯನಾಗಿ ಬದಲಾಗಬಹುದು? ಚಿಕ್ಕವರಿರುವಾಗ ಇಟ್ಟಿಗೆ ಭಟ್ಟಿಯಲ್ಲಿ ದುಡಿಮೆಯಾದರೆ, ದೊಡ್ಡವರಾಗುತ್ತಲೇ ಶಹರಗಳಲ್ಲಿ ಮನೆ ಬೀಳಿಸುವ, ಮನೆ ಕಟ್ಟುವ ಕೆಲಸ, ಶಾಲೆ, ಕಾಲೇಜು, ಸ್ಪರ್ಧೆ ಆಟ ನಾಟಕಗಳಲ್ಲಿ ಕಳೆಯಬೇಕಾದ ಬಾಲ್ಯ, ಯೌವನ, ಬರಿ ದುಡಿತ, ದುಡಿತದಲ್ಲೇ ಕಳೆಯುತ್ತಿರಬೇಕಾದರೆ ಮಾನವ ಅಭಿವೃದ್ಧಿ ಸೂಚ್ಯಂಕ ಎಂದಾದರೂ ಮೇಲೇರಲು ಸಾಧ್ಯವೇ? ಲಿಂಗ ಅಸಮಾನತೆ ಸೂಚ್ಯಂಕ ಇಳಿಯಲು ಸಾಧ್ಯವೇ? ಈ ಸ್ಥಿತಿ ಬದಲಾಗಲೇ ಬೇಕು. ನಮ್ಮ ಗ್ರಾಮೀಣ ಕೃಷಿ ಕೂಲಿಕಾರರು ಸುಗ್ಗಿ ಮುಗಿಯುತ್ತಲೇ ಪಟ್ಟಣದತ್ತ, ರಿಯಲ್ ಎಸ್ಟೇಟ್‌ನ ಕೂಲಿಕಾರರಾಗಿ ಹೋಗುವುದು ತಪ್ಪಬೇಕು. ತಮ್ಮ ಹಳ್ಳಿಯಲ್ಲೆ ಉಳಿದು ಉದ್ಯೋಗವನ್ನೂ ಆಹಾರ, ಆರೋಗ್ಯ, ಶಿಕ್ಷಣವನ್ನೂ ಪಡೆಯುವಂತಾಗಬೇಕು. ಇವೆಲ್ಲವನ್ನೂ ನೀಡುವುದು ೨೦೦೫ರಲ್ಲಿ ಬಂದ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾನೂನು. ಗುಂಪುಗಳನ್ನು ಮಾಡಿಕೊಂಡು ತಮ್ಮ ಪಂಚಾಯತಿಯಲ್ಲಿಯೇ ಕೇಳಿದಾಗ ಕೆಲಸ ಕೊಡುವ ಯೋಜನೆ ಇದು. ಈ ಕಾನೂನಿನ ಮುಖ್ಯ ಆಶಯಗಳು ಎರಡು: ಒಂದು ಸ್ಥಳೀಯವಾಗಿ ಗ್ರಾಮೀಣ ಜನರಿಗೆ ಉದ್ಯೋಗ ಒದಗಿಸಿ ಅವರ ವಲಸೆಯನ್ನು ತಡೆಯುವುದು. ಎರಡನೆಯದೆಂದರೆ ಗ್ರಾಮೀಣ ನೈಸರ್ಗಿಕ ಸಂಪತ್ತನ್ನು ಉಳಿಸಿ, ಪುನಶ್ಚೇತನಗೊಳಿಸಿ ಬೆಳೆಸುವುದು. ತನ್ಮೂಲಕ ಸ್ಥಳೀಯರಿಗೆ ಮುಂದೆ ಶಾಶ್ವತವಾಗಿ ಹಳ್ಳಿಯಲ್ಲೇ ಕೆಲಸ ಸಿಗುವಂತಾಗಬೇಕು ಎಂಬುದು. ಆದರೆ ಉದ್ಯೋಗ ಖಾತರಿಯಲ್ಲಿ ಕೂಲಿಯು ಕಡಿಮೆ ಇದ್ದುದರಿಂದ ಗಂಡಸರು ಇದಕ್ಕೆ ಮನಸ್ಸು ಮಾಡುವುದಿಲ್ಲ. ಹೊರಗಡೆ ಹೋದರೆ ಸಿಗುವ ಕೂಲಿಯೇ ಹೆಚ್ಚಿದ್ದುದರಿಂದ ಅವರ ವಲಸೆಯು ಮುಂದುವರಿಯುತ್ತದೆ. ಮನೆಯಲ್ಲೇ ಉಳಿದ ಹೆಂಗಸರಿಗೆ ಸ್ಥಳೀಯ ಉದ್ಯೋಗದ ಭರವಸೆ ಆಕರ್ಷಣೀಯವಾಗಿ ಕಂಡಿತು. ಊರಲ್ಲೇ ಉದ್ಯೋಗ, ಹೊಟ್ಟೆಯೂ ತುಂಬುವುದು, ಮಕ್ಕಳಿಗೆ ಊಟ, ಶಾಲೆ ಎಲ್ಲವೂ ಆಗುವುದೆಂದಾಗ ಮಹಿಳೆಯರು ಕೆಲಸ ಹುಡುಕಿಕೊಂಡು ಹೋಗುವುದನ್ನು ಕಡಿಮೆ ಮಾಡಿದರು. ಈಗಾಗಲೇ ಸ್ವಸಹಾಯ ಸಂಘದಲ್ಲಿ ಒಟ್ಟಿಗೆ ಬರುವುದರ ಕಲ್ಪನೆ ಬಂದಿದ್ದರಿಂದ ಬಲುಬೇಗನೆ ಗುಂಪಾಗಿ ಕೆಲಸ ಹುಡುಕಿಕೊಳ್ಳಲು ತೊಡಗಿದರು. ಗುಂಪುಗಳಲ್ಲಿ ಮಾತ್ರ ಅರ್ಜಿಯನ್ನು ಕೊಡುವ ಅವಕಾಶವನ್ನು ಸಂಘಟನೆ ಮಾಡಲು

ಮಹಿಳೆಯರು ಬಳಸಿಕೊಂಡರು. ಆದರೆ ಪಂಚಾಯಿತಿಯಲ್ಲಿ ಕೆಲಸ ಪಡೆಯುವುದೇನು ಸುಲಭವಿರಲಿಲ್ಲ. ಕಾನೂನು ಬಂದು ಆಗಲೇ ಅನೇಕ ವರ್ಷ ದಾಟಿ ಹೋಗಿದ್ದರಿಂದ ಜನರ ಈ ಹಣವನ್ನು ಯಾವ ರೀತಿಯಾಗಿ ತೆಗೆಯಬಹುದೆಂದು ಅಧಿಕಾರಿಗಳು ಮತ್ತು ಜನ ಪ್ರತಿನಿಧಿಗಳು ಚೆನ್ನಾಗಿಯೇ ಲೆಕ್ಕಾಚಾರ ಹಾಕಿಟ್ಟು ಕೊಂಡಿದ್ದರು. ನೈಸರ್ಗಿಕ ಸಂಪನ್ಮೂಲ ವೃದ್ಧಿಗೆ ಬಳಸಬೇಕಾದ ದುಡ್ಡು ಸಿಮೆಂಟ್ ರಸ್ತೆ, ಗಟಾರುಗಳಿಗೆ ಬಳಕೆಯಾಗತೊಡಗಿತ್ತು. ಸ್ಥಳೀಯರಿಗೆ ಕೆಲಸ ಕೊಡಬೇಕಾಗಿದ್ದುದು ಜೆಸಿಬಿಗೆ ಉದ್ಯೋಗ ಕೊಟ್ಟು ಊರಲ್ಲಿ ಗುತ್ತಿಗೆದಾರರ ಸಂಖ್ಯೆ ಒಮ್ಮೆಗೇ ಹೆಚ್ಚತೊಡಗಿತು. ಯಾರಿಗೂ ತಿಳಿಯದಂತೆ ಹಣವು ಗುಪ್ತಗಾಮಿನಿಯಾಗಿ ಹರಿಯತೊಡಗಿತ್ತು.

ಇಂಥ ಸನ್ನಿವೇಶದಲ್ಲಿ ಮಹಿಳೆಯರು ಕೆಲಸಕ್ಕಾಗಿ ಅರ್ಜಿಗಳನ್ನು ಹಿಡಿದು ಬಂದರೆ ಆ ಸ್ವಹಿತಾಸಕ್ತರಿಗೇನನ್ನಿಸಿರಬೇಡ? ಬಂದವರನ್ನು ಹಿಮ್ಮೆಟ್ಟಿಸುವ ಎಲ್ಲ ರೀತಿಯ ಪ್ರಯತ್ನಗಳೂ ನಡೆದವು. ಕಲ್ಲುಗುಡ್ಡದಲ್ಲಿ ಕಾಲುವೆಗಳನ್ನು ತೆಗೆಯುವ ಗುದ್ದಲಿ ಹಾಕಿದರೆ ಠಳ್ಳೆಂದು ಸಿಡಿಯುವಂಥ ಜಾಗಗಳಿಗೆ ಕಳಿಸಿದರು. ಬೇಕಾದಾಗ ಕೆಲಸ ಕೊಡದೆ, ಮಾಡಿದ ಕೆಲಸಕ್ಕೂ ಕೂಲಿ ಹಾಕದೆ ಸತಾಯಿಸುತ್ತಲೇ ಹೋದರು. ಪಂಚಾಯಿತಿ ಅವರು ಅಡ್ಡಿಗಳನ್ನು ಒಡ್ಡುತ್ತಲೇ ಮುನ್ನಡೆದರು. ಇದನ್ನು ಎದುರಿಸಲಾಗದೆ ಬದುಕನ್ನು ಕಟ್ಟಿಕೊಳ್ಳಲು ವಲಸೆ ಅನಿವಾರ್ಯ ಆಯ್ಕೆಯಾಗಿತ್ತು ಅವರಿಗೆ ಎಂಬ ಸಂಗತಿ ಸರ್ಕಾರದ ಯೋಜನೆಗಳನ್ನು ಪುನರ್ ಪರಿಶೀಲನೆ ಮಾಡುವಂತೆ ಒತ್ತಾಯಿಸುತ್ತಿದೆ. ಆದರೂ ಕೆಲವರು ಉದ್ಯೋಗ ಪಡೆದೇ ಪಡೆಯುತ್ತೇವೆಂದು ಗಟ್ಟಿ ಮನಸ್ಸು ಮಾಡಿ ಮುಂದೆ ಬಂದ ಹೆಣ್ಣುಮಕ್ಕಳು ಉದ್ಯೋಗ ಖಾತರಿಯ ಬಗ್ಗೆ ಹೊಸ ಹೊಸ ಮಾಹಿತಿಗಳನ್ನು ಪಡೆದು ಗ್ರಾಮೀಣ ಭಾಗದ ಅಭಿವೃದ್ಧಿಗೆ ಹೊಸ ರೂಪು ಕೊಡುತ್ತಿದ್ದಾರೆ. ಸಿಮೆಂಟ್ ರಸ್ತೆಗಳು, ಸಿಮೆಂಟ್ ಕಾಲುವೆಗಳೇ ಅಭಿವೃದ್ಧಿ ಎಂಬ ಗುತ್ತಿಗೆದಾರರ ಪರಿಕಲ್ಪನೆಯನ್ನು ಪ್ರಶ್ನಿಸುತ್ತಿದ್ದಾರೆ. ಜೊತೆಗೆ ಮಹಿಳೆಯರು ನೋಡುವ ಅಭಿವೃದ್ಧಿಯು ಅದಲ್ಲ ಎಂದು ಹೇಳುತ್ತಿದ್ದಾರೆ. ಅಂದರೆ ಊರ ಸುತ್ತಲಿನ ಕೆರೆಗಳ ಪುನಶ್ಚೇತನವಾಗಬೇಕು, ಕೆರೆಗಳ ಸುತ್ತ ಸ್ಥಳೀಯ ಹೂವು ಹಣ್ಣುಗಳ ಗಿಡಮರಗಳು ನಳನಳಿಸಬೇಕು, ಕೆರೆಗಳನ್ನು ಹೆಣೆಯುವ ರಾಜಕಾಲುವೆಗಳು ಮರುಜೀವ ಪಡೆಯಬೇಕು. ಕೊಳವೆ ಬಾವಿಗಳ ಬದಲಿಗೆ ರೈತರ ಹೊಲದಲ್ಲಿ ನೀರನ್ನು ಹಿಡಿಯುವ ಕೃಷಿ ಹೊಂಡಗಳಾಗಬೇಕು. ಇದು ಮಹಿಳೆಯರ ಕನಸಿನ ಅಭಿವೃದ್ಧಿಯ ಕಲ್ಪನೆ. ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಈ ಕನಸಿಗೆ ಜೀವ ಕೊಡುತ್ತಿದೆ. ಮಹಿಳೆಯರು ಇದರ ಅರ್ಜಿ ಹಿಡಿದು ಪಂಚಾಯಿತಿಯನ್ನು ಪ್ರವೇಶಿಸಿದ್ದಾರೆ. ಮತ್ತೆ ಕೆಲವರು ಒಳಹೊಕ್ಕು ಸ್ಥಳೀಯ ಸರಕಾರದ ಆಡಳಿತವನ್ನು ತಿಳಿದುಕೊಳ್ಳುತ್ತಿದ್ದಾರೆ. ತಮಗೆ ಯಾವ ಕೆಲಸ ಬೇಕು, ಯಾವಾಗ ಬೇಕು ಎಂದು ತಾವೇ ನಿರ್ಧಾರ ಮಾಡುತ್ತಿದ್ದಾರೆ. ಗ್ರಾಮಸಭೆಯಲ್ಲಿ ಭಾಗವಹಿಸುವುದರ ಮೂಲಕ ಕುಡಿಯುವ ನೀರು, ಆಹಾರ, ಆರೋಗ್ಯ ಮುಂತಾದ

ವಿಚಾರಗಳ ಬಗ್ಗೆಯೂ ವಿಚಾರಿಸುತ್ತಿರುವದು ಕಂಡುಬರುತ್ತದೆ. ಈ ಎಲ್ಲವು ಇವರನ್ನು ವಲಸೆಯಿಂದ ಮುಕ್ತ ಮಾಡುತ್ತದೆಯೇ ಕಾದು ನೋಡಬೇಕು.

**ಟಿಪ್ಪಣಿಗಳು**

೧. ಬಳ್ಳಾರಿ ಜಿಲ್ಲೆಯಿಂದ ವಲಸೆ ಹೋಗುವವರನ್ನು ಮಾತ್ರ ಕೇಂದ್ರೀಕರಿಸಿದೆ. ಆ ಸಂದರ್ಭದಲ್ಲಿ ಗ್ರಾಮದಿಂದ ಗ್ರಾಮಕ್ಕೆ ವಲಸೆ ಹೋಗುವರು ಒಳ ವಲಸೆಯಲ್ಲಿ ಬರುತ್ತಾರೆ. ಆದರೆ ಬಳ್ಳಾರಿ ಜಿಲ್ಲೆಗೆ ಬೇರೆ ಕಡೆಯಿಂದ ವಲಸೆ ಬಂದವರನ್ನು ಹಾಗೂ ಅಂತಹ ಕುಟುಂಬಗಳನ್ನು ಈ ಅಧ್ಯಯನ ಕೇಂದ್ರೀಕರಿಸಿಲ್ಲ ಎಂಬುದನ್ನು ಗಮನಿಸಿಬೇಕು.

೨. ಈ ಅಧ್ಯಯನವು ಕುಟುಂಬದ ಸ್ವರೂಪವನ್ನು ವಿವರಿಸುವಾಗ ಸಿಂಗಲ್ ಮತ್ತು ಲಿವಿಂಗ್ ಟುಗೆದರ್ ಕುಟುಂಬಗಳನ್ನು ಹೊರತುಪಡಿಸಿದೆ.

**ಆಕರ ಗ್ರಂಥಸೂಚಿ**

ಅಗರ್‌ವಾಲ್ ಬಿ.(ಇಡಿ), ೧೯೯೦, ಸ್ಟ್ರಕ್ಚರ್ ಆಫ್ ಪೆಟ್ರಿಯಾರ್ಕಿ: ದ ಸ್ಟೇಟ್ ಕಮ್ಯೂನಿಟಿ ಆ್ಯಂಡ್ ದ ಹೌಸ್‌ಹೋಲ್ಡ್.: ಝೆಡ್ ಬುಕ್ಸ್, ಲಂಡನ್ ಆ್ಯಂಡ್ ನ್ಯೂಜೆರ್ಸಿ ಪು. ೧೧೮-೧೨೭.

ಅರ್ಡೆಫಿಯೊ-ಶಾಂಡೋರ್ಫ್ ಇ.(ಇಡಿ), ೧೯೯೪, ಫ್ಯಾಮಲಿ ಆ್ಯಂಡ್ ಡೆವಲಪ್‌ಮೆಂಟ್ ಇನ್ ಘಾನಾ. ಲೆಗಾನ್: ಘಾನಾ ಯೂನಿವರ್ಸಿಟಿ ಪ್ರೆಸ್. ಪು. ೧೭೮.

ಕಬೀರ್ ಎನ್., ೧೯೯೧, ಜಂಡರ್ ಡೈಮೆನ್ಷನ್ಸ್ ಆಫ್ ರೂರಲ್ ಪಾವರ್ಟಿ: ಅನಾಲಿಸಿಸ್ ಫ್ರಮ್ ಬಾಂಗ್ಲಾದೇಶ. ಇನ್ ದ ಜರ್ನಲ್ ಆಫ್ ಫಿಸೆಂಟ್ ಸ್ಟಡೀಸ್. ವಾಲ್ಯೂಮ್ ೧೮. ನಂ. ೨ ಜನವರಿ ೧೯೯೧, ಪು. ೨೪೧-೨೬೨.

ಪಿಯರ್ಸನ್ ಆರ್., ೧೯೯೮, ಫೆಮಿನಿಸ್ಟ್ ವಿಷನ್ಸ್ ಆಫ್ ಡೆವಲಪ್‌ಮೆಂಟ್: ಜಂಡರ್ ಅನಾಲಿಸಿಸ್ ಆ್ಯಂಡ್ ಪಾಲಸಿ: ರೂಟ್‌ಲೆಡ್ಜ್, ನ್ಯೂಯಾರ್ಕ್, ಪು. ೩೧೨.

ಪ್ರಶಾಂತ್ ಎಚ್.ಡಿ., ೨೦೧೦, ಶೈಕ್ಷಣಿಕ ಪ್ರೇರಕಾಂಶಗಳ ಸಾಮಾಜಿಕ ಆಯಾಮಗಳು: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೮-೩೧.

ಫ್ರಾನ್ಸಿಸ್ ಇ., ೧೯೯೫, ಮೈಗ್ರೇಶನ್ ಅಂಡ್ ಚೇಂಜಿಂಗ್ ಡಿವಿಜನ್ ಆಫ್ ಲೇಬರ್: ಜನರಲ್ ರಿಲೇಶನ್ ಆ್ಯಂಡ್ ಎಕನಾಮಿಕ್ ಚೇಂಜ್ ಇನ್ ಕೊಗುಡಾ, ವೆಸ್ಟರ್ನ್ ಕೀನ್ಯಾ ಇನ್ ಜರ್ನಲ್ ಆಫ್ ಇಂಟರ್‌ನ್ಯಾಷನಲ್ ಆಫ್ರಿಕನ್ ಇನ್ಸ್ಟಿಟ್ಯೂಟ್, ವಾಲ್ಯೂಮ್ ೬೫. ನಂ.೨, ೧೯೯೫, ಪು. ೧೯೭-೨೧೬.

ಫೌಕಾಲ್ಟ್ ಎಂ., ೧೯೮೦, ಪವರ್/ನಾಲೆಜ್ಡ್: ಸೆಲೆಕ್ಟೆಡ್ ಇಂಟರ್‌ವ್ಯೂ ಆ್ಯಂಡ್ ಅದರ್ ರೈಟಿಂಗ್ಸ್ ೧೯೭೨–೧೯೭೭: ಪಂತೇನ್ ಬುಕ್ಸ್ ಐಎನ್‌ಸಿ, ನ್ಯೂಯಾರ್ಕ್, ಪು. ೧೬೭.

ಬ್ರೈಡಾನ್ ಎಲ್. ಆ್ಯಂಡ್ ಚಾಂಟ್, ಎಸ್., ೧೯೮೯, ವುಮನ್ ಇನ್ ದ ಥರ್ಡ್ ವರ್ಲ್ಡ್: ಜಂಡರ್ ಇಶ್ಯೂ ಇನ್ ರೂರಲ್ ಆ್ಯಂಡ್ ಅರ್ಬನ್ ಏರಿಯಾಸ್, ಎಡ್ವರ್ಡ್ ಎಲ್ಗರ್ ಪಬ್ಲಿಷಿಂಗ್, ಪು. ೩೧೮–೪೫೪.

ಬೆನ್ನೆಹ್ ಜಿ., ೧೯೯೫, ವುಮನ್ಸ್ ಆಕ್ಸೆಸ್ ಟು ಅಗ್ರಿಕಲ್ಚರಲ್ ಲ್ಯಾಂಡ್ ಇನ್ ದಿ ಹೌಸ್‌ಹೋಲ್ಡ್: ಎ ಕೇಸ್ ಸ್ಟಡಿ ಆಫ್ ಥ್ರೀ ಸೆಲೆಕ್ಟೆಡ್ ಡಿಸ್ಟ್ರಿಕ್ಟ್ ಆಫ್ ಘಾನಾ. ಫ್ಯಾಮಲಿ ಆ್ಯಂಡ್ ಡೆವಲಪ್‌ಮೆಂಟ್ ಪ್ರೋಗ್ರಾಮ್. ಎಸ್‌ಎಡಿಇಪಿ ಟೆಕ್ನಿಕಲ್ ಸೀರಿಸ್ ನಂ.೮, ಪು. ೭೬.

ಮ್ಯಾಕ್ಡೊನಾಲ್ಡ್ ಎಂ.(ಇಡಿ), ೧೯೯೪, ಜಂಡರ್ ಪ್ಲಾನಿಂಗ್ ಇನ್ ಡೆವಲಪ್‌ಮೆಂಟ್ ಏಜೆನ್ಸಿ: ಆಕ್ಸ್‌ಫರ್ಡ್: ಆಕ್ಸ್‌ಫ್ಯಾಮ್, ಪು. ೮೦–೯೭.

ಮೂರ್ ಹೆಚ್., ೧೯೯೨, ಎ ಸೋಶಿಯಾಲಜಿ ಆಫ್ ವುಮನ್: ದಿ ಇಂಟರ್ಸೆಕ್ಷನ್ ಆಫ್ ಪೇಟ್ರಿಯಾರ್ಕಿ, ಕ್ಯಾಪಿಟಲಿಸಮ್ ಆಫ್ ಕೊಲೊನಿಯಲಿಸಂ. ನ್ಯೂಜೆರ್ಸಿ, ಎಡ್ವುಡ್ ಕ್ಲಿಫ್: ಪ್ರೆಂಟಿಸ್–ಹಾಲ್ ಐಎನ್‌ಸಿ, ಪು. ೨೧೭.

ಅಧ್ಯಾಯ ಐದು

# ಲಿಂಗವ್ಯವಸ್ಥೆ ಮೇಲಾಗುವ ವಲಸೆ ಪರಿಣಾಮಗಳು

ಅಧ್ಯಾಯ ಐದು

## ಲಿಂಗವ್ಯವಸ್ಥೆ ಮೇಲಾಗುವ ವಲಸೆ ಪರಿಣಾಮಗಳು

ಪ್ರಸ್ತುತ ಅಧ್ಯಾಯದಲ್ಲಿ ವಲಸೆ ಹೋದ ಮಹಿಳೆಯರು ಮತ್ತು ಪುರುಷರ ಮೇಲೆ ಆಗಿರುವ ಪರಿಣಾಮಗಳನ್ನು ಹಾಗೂ ವಲಸೆ ಹೋದ ಮನೆಯಲ್ಲಿನ ಮಹಿಳೆಯರ ಮೇಲೆ ಆಗಿರುವ ಪರಿಣಾಮಗಳನ್ನು ವಿಶ್ಲೇಷಣೆ ಮಾಡಲು ಪ್ರಯತ್ನಿಸಲಾಗಿದೆ.

ಈ ಪ್ರದೇಶದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಅಂಶಗಳು ಮಹಿಳೆಯರನ್ನು ವಲಸೆಗೆ ತಳ್ಳುವ ಸಂಗತಿಗಳಿವೆ. ಇದರಿಂದ ಕೃಷಿ, ಜೀವನೋಪಾಯ, ಜನಸಂಖ್ಯೆ, ಸಮುದಾಯದ ಮೇಲೆ ಅನೇಕ ರೀತಿಯ ಪರಿಣಾಮವನ್ನು ಬೀರುತ್ತವೆ. ಇದು ಅಲ್ಲದೆ ಕುಟುಂಬ ಅನುಭವಿಸಬೇಕಾದ ಪರಿಣಾಮಗಳ ಬಗ್ಗೆ ವಕ್ತೃ ಹೇಳಿದ್ದು ಹೀಗೆ "ನಮ್ಮ ಗ್ರಾಮದಲ್ಲಿ ಯಾವುದೇ ತೆರನಾದ ಕೆಲಸವಿರಲಿಲ್ಲ ಮತ್ತು ನಮ್ಮ ಹತ್ತಿರ ಹಣವಿರಲಿಲ್ಲ. ನಿಜ ಹೇಳಬೇಕೆಂದರೆ ನಮ್ಮ ಸುತ್ತಮುತ್ತಲಿರುವ ಎಲ್ಲ ಹಳ್ಳಿಗಳಲ್ಲೂ ಇದೇ ತೆರನಾದ ಪರಿಸ್ಥಿತಿ ಇದೆ. ಆದಕಾರಣ ನಮ್ಮ ಹಳ್ಳಿಗಳಲ್ಲಿರುವ ಎಲ್ಲ ಹರೆಯದ ಗಂಡಸರು ಮತ್ತು ಕೆಲ ಹೆಂಗಸರು ನಗರಗಳಿಗೆ ಕೆಲಸವನ್ನು ಹುಡುಕಿಕೊಂಡು ವಲಸೆ ಹೋಗುತ್ತಾರೆ. ವಲಸೆ ಹೋದವರಲ್ಲಿ ಕೆಲವರು ತಮ್ಮ ಕುಟುಂಬಗಳಿಗೆ ಹಣ ಕಳಿಸುವುದರ ಮೂಲಕ ಸಹಾಯ ಮಾಡುತ್ತಾರೆ. ಇದೇ ಸಮಯದಲ್ಲಿ ಕೆಲವು ಗಂಡಸರು ನಗರಗಳ ಬೀದಿಗಳಲ್ಲಿ ಕೆಟ್ಟ ಕೆಲಸವನ್ನು ಮಾಡುವುದರ ಮೂಲಕ ಸಮಯವನ್ನು ವ್ಯಯಿಸುತ್ತಿರುತ್ತಾರೆ. ಇವರಲ್ಲಿ ಕೆಲವು ಜನರಿಗೆ ತಮ್ಮ ತಲೆಯನ್ನು ಕೆಳಗೆ ಇಟ್ಟು ಮಲಗಿಕೊಳ್ಳಲು ಸಹ ಸ್ಥಳವಿರುವುದಿಲ್ಲ. ಇನ್ನು ಕೆಲವರಿಗೆ ಅನಾರೋಗ್ಯ ಉಂಟಾಗಿ ಹಳ್ಳಿಗಳಲ್ಲಿಯೇ ಜೀವ ಬಿಡಲು(ಸಾಯಲು) ವಾಪಾಸ್ಸು ಬರುತ್ತಾರೆ. ಯಾವಾಗ ಈ ತೆರನಾದ ಪರಿಸ್ಥಿತಿಯು ಉದ್ಭವಿಸುತ್ತದೋ ಆಗ ಕುಟುಂಬದ ಮಹಿಳೆಯರ ಮೇಲೆ ಹೊರೆ ಹೆಚ್ಚಾಗುತ್ತದೆ. ಆ ಕುಟುಂಬದ ಅವನ ಹೆಂಡತಿ, ಅಕ್ಕ-ತಂಗಿ, ಮಕ್ಕಳು ಅವನ ಬಗೆಗೆ ಕಾಳಜಿ ಮಾಡಬೇಕಾಗುತ್ತದೆ. ನಾವು ಬಡವರಾಗಿರಬಹುದು ಆದರೂ ಸಹ ನಮ್ಮ ಮನೆಯ ಸದಸ್ಯನನ್ನು ಸಾಯಲು ಬೀದಿಯಲ್ಲಿ ಬಿಡುವುದಿಲ್ಲ. ಒಂದು ವೇಳೆ ನಾವು ಹಾಗೆ ಮಾಡಿದರೆ ಜನರು ನಮ್ಮನ್ನು ಗೌರವಿಸುವುದಿಲ್ಲ ಮತ್ತು ಮನೆಯ ಸದಸ್ಯರಿಗೆ ಹೇಳುತ್ತಾರೆ. ನೀವು ಮನೆಗೆ ಕರೆದುಕೊಂಡು ಬನ್ನಿ ಎಂದು ಹೇಳುತ್ತಾರೆ. ನೀವು ಮನೆಯಲ್ಲಿ ಏನೂ ತಿನ್ನುವಿರೋ ಅದನ್ನೇ ಅವನಿಗೂ ನೀಡಿ. ನೀವು ಕಲ್ಲು ತಿಂದರೆ

ಅವನಿಗೂ ತಿನ್ನಲು ಕಲ್ಲು ಕೊಡಿರಿ. ಇದು ಹಳ್ಳಿಯ ಪರಿಸ್ಥಿತಿ. ಆದಕಾರಣ ನಾನು ಹೇಳುತ್ತಿರುವುದೇನೆಂದರೆ ಯಾವಾಗ ಜನರು ಹಳ್ಳಿಗಳನ್ನು ಬೀಡುತ್ತಾರೋ ಆಗ ಕೆಲವು ಬಾರಿ ಒಳ್ಳೆಯದು ಸಂಭವಿಸಿದರೆ ಕೆಲವು ಬಾರಿ ಕೆಟ್ಟದ್ದು ಘಟಿಸುತ್ತದೆ. ಕೆಟ್ಟದ್ದು ಘಟಿಸಿದಾಗ ವಿಶೇಷವಾಗಿ ಅದು ಮಹಿಳೆಯರ ಮೇಲೆ ಎಲ್ಲ ಆಯಾಮಗಳಿಂದಲೂ ಹೊರೆಯಾಗುತ್ತದೆ" ಎಂದು ಅಭಿಪ್ರಾಯ ಪಡುತ್ತಾರೆ.

ಈ ಹಿನ್ನೆಲೆಯಲ್ಲಿ ವಲಸೆಯಿಂದ ಮಹಿಳೆಯರ ಮೇಲಾಗುವ ದ್ವಿಮುಖ ತರಹದ ಪರಿಣಾಮಗಳನ್ನು ಅನೇಕ ಆಯಾಮಗಳಲ್ಲಿ ಗುರುತಿಸಬಹುದು. ಅವು ಹೀಗಿವೆ. ೧. ಕೃಷಿ, ೨. ಜೀವನೋಪಾಯ, ೩. ಆದಾಯ, ೪. ಜನಸಂಖ್ಯೆ, ೫. ಕುಟುಂಬ, ೬. ಸಮುದಾಯ.

**೫.೧. ಕೃಷಿ**

ವಲಸೆಯಲ್ಲಿ ಮಹಿಳೆಯರಿಗಿಂತ ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ಗ್ರಾಮೀಣ ಪ್ರದೇಶವನ್ನು ತೊರೆದುದರಿಂದ ಕೃಷಿಯಲ್ಲಿ ಅಸಮತೋಲನ ಉಂಟಾಗಿದೆ. ನಿರ್ದಿಷ್ಟವಾಗಿ ಹೇಳಬೇಕೆಂದರೆ ಕೃಷಿಯಲ್ಲಿ ಕೆಲಸ ಮಾಡುವ ಜನರ ಪ್ರಮಾಣ ಕಡಿಮೆಯಾಗಿದೆ. ಆದರೆ ಕೃಷಿ ಉತ್ಪಾದಕತೆಯು ಸಾಮಾನ್ಯವಾಗಿ ಕಾರ್ಮಿಕರ ಶ್ರಮದ ಮೇಲೆ ಅವಲಂಬಿತವಾಗಿರುತ್ತವೆ. ಕೃಷಿ ಕಾರ್ಮಿಕರ ಕೊರತೆಯು ಉತ್ಪನ್ನವನ್ನು ಕಡಿಮೆ ಮಾಡಿರುವುದು ಕಂಡುಬರುತ್ತದೆ. ಇನ್ನು ಭೂಮಿ ಲಭ್ಯತೆ ಬಗ್ಗೆ ಹೇಳುವುದಾದರೆ ಈ ಪ್ರದೇಶದ ಭೂಮಿಯನ್ನು ಬಂಡವಾಳಶಾಹಿಗಳು, ಕೈಗಾರಿಕೋದ್ಯಮಿಗಳು, ಸ್ಥಳೀಯ ಪ್ರಬಲ ಜಾತಿಯ ಮುಖಂಡರು ಆಕ್ರಮಿಸಿಕೊಂಡಿರುವುದರಿಂದ ಸಾಮಾನ್ಯ ಜನರಿಗೆ ಅದರಲ್ಲೂ ಕೆಳಜಾತಿ ಮತ್ತು ಕೆಳವರ್ಗದ ಜನರು ಭೂಮಿ ಹೊಂದುವ ಅವಕಾಶಗಳಿಂದ ಹಾಗೂ ಉತ್ಪಾದನೆಯಲ್ಲಿ ತೊಡಗುವ ಅವಕಾಶಗಳು ವಂಚಿತರಾಗುತ್ತಿದ್ದಾರೆ. ಈ ಕಾರಣಗಳಿಗಾಗಿ ಕುಟುಂಬಗಳಲ್ಲಿ ಒತ್ತಡವನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ. ಪುರುಷ ಕೆಲಸಗಾರರು ಕಡಿಮೆಯಾಗಿರುವುದರಿಂದ ಮತ್ತು ಮನೆಯಲ್ಲಿ ಉಳಿದ ಮಹಿಳೆಯರಿಂದ ಪ್ರಾಣಿ ಸಾಕಾಣಿಕೆ ಹೆಚ್ಚಳವಾಗಿದೆ. ಇದರಿಂದಾಗಿ ಕೃಷಿಯ ಉತ್ಪಾದನೆಯಲ್ಲಿ ಮಹಿಳೆಯರಿಗೆ ಮೊದಲಿಗಿಂತಲೂ ಹಿಡಿತ ಕಡಿಮೆ ಆಗಿದೆ. ಅಂದರೆ ಸಣ್ಣ ಮಕ್ಕಳಿರುವ ಮಹಿಳೆಯರಿಗೆ ಪುರುಷ ಕೆಲಸಗಾರರ ಹಾಗೆ ಕಷ್ಟಕರವಾದ ಕೃಷಿ ಚಟುವಟಿಕೆಗಳನ್ನು ನಿರ್ವಹಿಸಲು ಹೆಚ್ಚು ಪ್ರೋತ್ಸಾಹ, ಸಹಾಯ ಸಹಕಾರ ಸಿಗುವುದಿಲ್ಲ. ಈ ಮಹಿಳೆಯರು ಭೂಮಿಯಲ್ಲಿ ಬಿತ್ತನೆ ಮಾಡಲು, ನಾಟಿ, ಕೊಯ್ಲು ಮಾಡಲು ಗಂಡಾಳುಗಳನ್ನೇ ನಂಬಿಕೊಂಡಿರುತ್ತಾರೆ. ಅವರು ಸಿಗುವುದು ಕಷ್ಟ. ಇದರಿಂದಾಗಿ ಮಹಿಳೆಯರು ಹೆಚ್ಚು ಭೂಮಿಯಲ್ಲಿ ಬಿತ್ತನೆ ಮಾಡಿ ಬೆಳೆಯನ್ನು ಬೆಳೆಯಲು

ಸಾಧ್ಯವಾಗುತ್ತಿಲ್ಲ. ಕೆಲವು ಮಹಿಳೆಯರು ಕೂಲಿ ಕಾರ್ಮಿಕರನ್ನು ಕರೆದುಕೊಂಡರೂ ಅವರ ಖರ್ಚು ವೆಚ್ಚಗಳು ಅಧಿಕವಾಗಿರುತ್ತವೆ. ಅದನ್ನು ಭರಿಸುವ ಶಕ್ತಿ ಇವರಿಗಿಲ್ಲ. ಕೆಲ ಕುಟುಂಬದವರು ಪುರುಷ ಕೂಲಿ ಆಳುಗಳನ್ನು ಕರೆದುಕೊಳ್ಳಲು ಇಚ್ಛಿಸುವರೇ ಹೊರತು ಮಹಿಳೆಯರನ್ನು ನೇಮಿಸಿಕೊಳ್ಳಲು ಇಚ್ಛಿಸುವುದಿಲ್ಲ. ಒಂದಡೆ ಕೃಷಿಯ ಉತ್ಪಾದಕತೆಯಲ್ಲಿ ಮಹಿಳೆಯರ ಕೃಷಿ ಉತ್ಪಾದನೆಯ ಪ್ರಮಾಣದಲ್ಲಿ ಕುಸಿತ ಹಾಗೂ ಹಳ್ಳಿಗಳಲ್ಲಿ ಮಹಿಳೆಯರು ಕೂಲಿ ಕೆಲಸಕ್ಕಾಗಿ ಅಲೆದಾಟ ಮಾಡುವುದು ಕಂಡುಬರುತ್ತದೆ.

ಅಧ್ಯಯನದ ಅವಧಿಯಲ್ಲಿ ಕೃಷಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಒಣಗಿದ ಮರಗಿಡಗಳನ್ನು ಕಡಿದುಕೊಂಡು ಬರುವುದು, ಸಂಗ್ರಹಿಸುವುದು ಕಂಡುಬರುತ್ತಿತ್ತು, ಇದರಿಂದ ತಿಳಿದು ಬರುವುದೇನೆಂದರೆ ಭೂಮಿಯನ್ನು ಸ್ವಚ್ಛಗೊಳಿಸಲು ಮತ್ತು ಹದಗೊಳಿಸಲು ಹೆಚ್ಚು ಕೆಲಸಗಾರರ ಅಗತ್ಯವಿರುವುದು. ಮಹಿಳಾ ಮುಖ್ಯಸ್ಥರ ಕುಟುಂಬಗಳಲ್ಲಿ ಕೆಲಸಗಾರರ ಕೊರತೆಯು ಸುಧಾರಿತ ಭೂಸುಧಾರಣೆ ಮಾಡಲು ಅಡ್ಡಿಯಾಗುತ್ತದೆ. ಅವರಲ್ಲಿನ ಬಂಡವಾಳದ ಲಭ್ಯತೆ ಸೀಮಿತ ಇರುವುದರಿಂದ ಕೂಲಿಯಾಳುಗಳಿಗೆ ಹಣದ ರೂಪದಲ್ಲಿಯೇ ಕೂಲಿ ಪಾವತಿಸಿ ಕೆಲಸ ಮಾಡಿಸಿಕೊಳ್ಳುವುದು ಸಹ ಆಗುವುದಿಲ್ಲ. ಈ ಎಲ್ಲ ಸಂಗತಿಗಳನ್ನು ಗಮನಿಸುವುದಾದರೆ ಪುರುಷರ ಭೌತಿಕ ಅನುಪಸ್ಥಿತಿಯು ಕೃಷಿಯಲ್ಲಿ ಕಾರ್ಮಿಕರ ಅಂತರವನ್ನು ಹೆಚ್ಚಿಸಿದೆ ಎನ್ನಬಹುದು.

ಪುರುಷ ಕೆಲಸಗಾರರ ಕೊರತೆ ಜೊತೆಗೆ ಲಿಂಗಾಧಾರಿತ ಶ್ರಮವಿಭಜನೆಯಿಂದಾಗಿ ಮಹಿಳೆಯರು ಹೆಚ್ಚು ಸಮಯವನ್ನು ಮನೆಯ ಸಾಮುದಾಯಿಕ ಕೆಲಸ ಕಳೆಯಬೇಕಾಗುತ್ತದೆ ಮತ್ತು ತಮ್ಮ ಭೂಮಿಯಲ್ಲಿ ಕಡಿಮೆ ಸಮಯ ಕೆಲಸ ಮಾಡಬೇಕಾಗುತ್ತದೆ. ಇದರಿಂದಾಗಿ ಕೃಷಿ ಭೂಮಿಯಲ್ಲಿರುವ ಪೊದೆಯನ್ನು ತೆರವುಗೊಳಿಸಲು, ಭೂಮಿಯನ್ನು ಉಳಲು, ಹದಗೊಳಿಸಲು ಆಗುತ್ತಿಲ್ಲ. ಅಂದರೆ ಒಂದರಿಂದ ಮೂರು ವರ್ಷಗಳ ಪಾಳುಭೂಮಿಯನ್ನು ಹದಗೊಳಿಸಲು ಅಧಿಕ ಸಮಯ ಹಿಡಿಯುತ್ತದೆ. ಮಹಿಳೆಯರು ತಮ್ಮ ಕೈಯಲ್ಲಾಗುವ ಸಾಧನ, ಸಲಕರಣೆಗಳಿಂದ ಭೂಮಿ ಬಂಜರಾಗುವುದನ್ನು ತಪ್ಪಿಸಲು ಪ್ರಯತ್ನಿಸಿದರೂ. ಸಾಧ್ಯವಾಗುತ್ತಿಲ್ಲ. ಇದರಿಂದ ಬೆಳೆ ಬೆಳೆಯುವುದು ಕಡಿಮೆಯಾಗಿದೆ. ಕುಟುಂಬಗಳು ಆಹಾರದ ಅಸಮರ್ಪಕತೆಯನ್ನು ಸಹ ಎದುರಿಸುತ್ತಿವೆ. ಫ್ರಾನ್ಸಿಸ್ ಬೋಸ್ಟನ್‌ನಲ್ಲಿ ನಡೆಸಿದ ಅಧ್ಯಯನ ಈ ಫಲಿತಾಂಶವನ್ನು ಎತ್ತಿ ಹಿಡಿಯುತ್ತದೆ. ಈ ಬಗ್ಗೆ ಅವರ ಹೇಳಿಕೆ ಗಮನಾರ್ಹವಾದುದು "ಮಹಿಳಾ ಮುಖ್ಯಸ್ಥರ ಮನೆಗಳಲ್ಲಿ ಎತ್ತುಗಳು ಇರುವುದಿಲ್ಲ, ಅವುಗಳನ್ನು ಸಾಕುವುದು, ಮೇಯಿಸುವುದು ಮತ್ತು ಅವುಗಳ ನಿರ್ವಹಣೆ ಹಾಗೂ ಅವುಗಳ ಬಳಕೆಯನ್ನು ಮಹಿಳೆಯರು ಮಾಡಲು ಸಾಧ್ಯವಾಗುವುದಿಲ್ಲ. ಆದಕಾರಣ ಆ ಕುಟುಂಬಗಳು ಗ್ರಾಮದ ಇತರೆ ಕುಟುಂಬಗಳಿಗಿಂತ ಬಡತನದಿಂದಿರುತ್ತವೆ. ಒಂದು ಮಹಿಳೆಯರಿಗೆ ಈ ಸಾಮರ್ಥ್ಯಗಳನ್ನು ಸಮಾಜ ಕಲಿಸಿರುವುದಿಲ್ಲ. ಇನ್ನೊಂದು, ಅವರಲ್ಲಿ ಎತ್ತುಗಳ ಕೊರತೆ

ಇದ್ದರೆ ಅವರ ಕುಟುಂಬದ ಆಹಾರ ಭದ್ರತೆಯು ಅಷ್ಟಕಷ್ಟೇ ಇರುತ್ತದೆ ಎಂದು ಹೇಳಿದ್ದಾರೆ" (ಫ್ರಾನ್ಸಿಸ್ ಇ., ೨೦೦೦, ೨೦೦೨. ಪು.೪೮). ಲಿಂಗಾಧಾರಿತ ಶ್ರಮವಿಭಜನೆ ಕುರಿತ ಮೈಕ್ರೊ ಅಧ್ಯಯನಗಳು ಗ್ರಾಮೀಣ ಪ್ರದೇಶದ ಬಡ ಕುಟುಂಬಗಳಲ್ಲಿ ಮಹಿಳೆಯರು ದುಡಿಮೆಗಿಂತ ಹೆಚ್ಚು ಅಧಿಕ ಸಮಯವನ್ನು ಮನೆ ಕೆಲಸಗಳಿಗಾಗಿ ವ್ಯಯಿಸುತ್ತಾರೆ, ಕೃಷಿ ಮತ್ತು ಮನೆಯ ಕೆಲಸಗಳಿಗೆ ಅವರ ಕೊಡುಗೆ ಗಮನಾರ್ಹ ಎಂದು ತಿಳಿಸಿವೆ.

ಈ ಪ್ರದೇಶದ ಪುರುಷರ ವಲಸೆಯ ಇನ್ನೊಂದು ಪ್ರಮುಖ ಪರಿಣಾಮವೇನೆಂದರೆ ಒಂದೆಡೆ ಕುಟುಂಬದ ಕೃಷಿ ಭೂಮಿಯ ಗಾತ್ರ ಕಡಿಮೆಯಾಗಿದ್ದರೆ, ಮತ್ತೊಂದೆಡೆ ಭೂಮಿಯ ತುಂಡಾಗುವಿಕೆ ಹೆಚ್ಚಾಗುತ್ತದೆ. ಅಂದರೆ ಭೂಮಿ ಪಾಲು ಮಾಡುವಿಕೆಯು ವಲಸೆಗಾರರು ಇಲ್ಲದ ಸಮಯದಲ್ಲಿ ನಡೆಯುತ್ತದೆ. ಇದರಿಂದ ಮಹಿಳಾ ಮುಖ್ಯಸ್ಥರು ತಮ್ಮ ಪಾಡಿಗೆ ತಾವೇ ನಾಮಮಾತ್ರ ಕೃಷಿ ಹಕ್ಕನ್ನು ಹೊಂದುತ್ತಾರೆ.

ಹಾಗೆಯೇ ಕುಟುಂಬದ ಮಹಿಳಾ ಮುಖ್ಯಸ್ಥರನ್ನು ಬಂಡವಾಳ ಮತ್ತು ಕಾರ್ಮಿಕರ ಕೊರತೆ ಬೆಳೆಗಳ ವಿಧಗಳಿಗೆ ಮತ್ತು ಕುಟುಂಬಕ್ಕೆ ಹೊಂದಾಣಿಕೆಯಾಗುವಂತೆ ಒತ್ತಾಯಿಸುತ್ತವೆ. ಮಹಿಳೆಯರ ಕೃಷಿ ಭೂಮಿಯ ನಿರ್ವಹಣೆಯು ಸಣ್ಣ ಭೂಹಿಡುವಳಿ ಕೃಷಿಕರಾಗಿ ಮತ್ತು ಮಹಿಳಾ ಕೃಷೀಕರಣಕ್ಕೆ ಸ್ಥಿತ್ಯಂತರ ಹೊಂದುವಂತೆ ಮಾಡಿದೆ. ಈ ತೆರನಾದ ಹೊಂದಾಣಿಕೆಯ ಪರಿಣಾಮ ಇಳುವರಿಯು ಕಡಿಮೆಯಾಗುವಂತೆ ಮತ್ತು ಕಡಿಮೆ ಪೋಷಕಾಂಶವುಳ್ಳ ಆಹಾರ ಬೆಳೆಯನ್ನು ಬೆಳೆಯುವಂತೆ ಮಾಡಿದೆ. ಉದಾಹರಣೆಗೆ ತರಕಾರಿ ಬೆಳೆಯನ್ನು ಬೆಳೆಯುವ ಬದಲಾಗಿ ಕಬ್ಬನ್ನು ಬೆಳೆಯುವುದು. ಇದರಿಂದ ಕುಟುಂಬಗಳು ಆಹಾರದ ಅಭದ್ರತೆ ಮತ್ತು ನ್ಯೂನತೆ ಪೋಷಣೆಯಿಂದ ಬಳಲುವವು. ಈ ರೀತಿಯ ಮಹಿಳಾ ಮುಖ್ಯಸ್ಥರು ಕುಟುಂಬಕ್ಕೆ ಮುಖ್ಯ ಸಹಾಯಕರಾದಾಗ ಸಹ ಅವರು ಭೌತಿಕ ಮತ್ತು ಭಾವನಾತ್ಮಕ ಸಂಗತಿಗಳಲ್ಲಿ ಲಿಂಗಪೂರ್ವಗ್ರಹಗಳನ್ನು ಎದುರಿಸಬೇಕಾಗುತ್ತದೆ. ಆದರೂ ಅವರು ಕುಟುಂಬದ ಕಲ್ಯಾಣಕ್ಕಾಗಿ ದುಡಿಯುವುದು ಕಂಡುಬರುತ್ತದೆ.

ಒಟ್ಟಾರೆ ಗ್ರಾಮೀಣ ಕುಟುಂಬಗಳು ಪ್ರಾಥಮಿಕ ವೃತ್ತಿಯಾಗಿ ಕೃಷಿಯಲ್ಲಿ ತೊಡಗಿಕೊಂಡಿರುತ್ತವೆ. ಗಂಡಸರ ವಲಸೆ ಮತ್ತು ಇತರೆ ಅಂಶಗಳ ಪರಿಣಾಮ, ಕಾರ್ಮಿಕರ ಕೊರತೆಯಿಂದಾಗಿ ಲಿಂಗಾಧಾರಿತ ಶ್ರಮವಿಭಜನೆಯಲ್ಲಿ ಮಹಿಳೆಯ ಕೃಷಿ ಕೆಲಸದ ಹೊಣೆ ಹೆಚ್ಚಾಗಿದೆ. ಉತ್ಪಾದನೆ ಕುಂಠಿತವಾಗಿದೆ. ಆದಕಾರಣ ಕೃಷಿ ಮತ್ತು ವಲಸೆಯ ಸಂಬಂಧಗಳು ವಿಲೋಮದಿಂದ ಕೂಡಿವೆ. ಅಂದರೆ ವಲಸೆ ಹೆಚ್ಚಾದಂತೆ ಕೃಷಿಯ ಉತ್ಪಾದನೆ ಕಡಿಮೆಯಾಗುತ್ತದೆ. ಕೃಷಿಯ ಉತ್ಪಾದನೆ ಕಡಿಮೆಯಾದಂತೆ ಮಹಿಳೆಯರು ತಮ್ಮ ಕುಟುಂಬವನ್ನು ನಿರ್ವಹಿಸಲು ಜೀವನೋಪಾಯಕ್ಕಾಗಿ ಪ್ರಾಣಿ ಸಾಕಾಣಿಕೆಯಂತಹ

ಮೂಲಗಳ ಕಡೆ ಗಮನ ಹರಿಸಬೇಕಾಗುತ್ತದೆ. ಆಗ ಅವರು ಮಾಧ್ಯಮಿಕ ಜೀವನೋಪಾಯ ತಂತ್ರಗಳನ್ನು ಅಳವಡಿಸಿಕೊಳ್ಳುತ್ತಾರೆ ಎಂದು ಹೇಳಬಹುದು.

**೫.೨. ಜೀವನೋಪಾಯ**

ಕೃಷಿ ಉತ್ಪಾದನೆಯ ಕೊರತೆಯಿಂದಾಗಿ ಗ್ರಾಮೀಣ ಮಹಿಳೆಯರು ಮಾಧ್ಯಮಿಕ ಜೀವನೋಪಾಯ ಮೂಲಗಳನ್ನು ಹುಡುಕಿಕೊಳ್ಳುವುದು ಕಂಡುಬರುತ್ತದೆ. ಅಂದರೆ ಮನೆಯ ಖರ್ಚು ವೆಚ್ಚ, ಬಂಡವಾಳ, ಸಮಯ, ಮನೆಕೆಲಸದ ಹೊಣೆಗಾರಿಕೆಗೆ ಅನುಗುಣವಾಗಿ ಸಣ್ಣ ಪುಟ್ಟ ವ್ಯಾಪಾರ ವ್ಯವಹಾರ ಮಾಡುವರು. ನಗರ ಪ್ರದೇಶದಲ್ಲಿ ಸಣ್ಣ ಪುಟ್ಟ ವ್ಯಾಪಾರ ವ್ಯವಹಾರದಿಂದ ಔಪಚಾರಿಕ ಕೆಲಸದ ಆದಾಯಕ್ಕಿಂತ ಹೆಚ್ಚು ಆದಾಯವನ್ನು ಪಡೆಯುತ್ತಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಅದು ಕಡಿಮೆಯೇ. ಆದರೂ ಕೃಷಿಯಿಂದ ಆಗುವ ಅಸಮರ್ಪಕ ಆದಾಯದ ಕೊರತೆಯನ್ನು ಈ ಸಣ್ಣ ಪುಟ್ಟ ವ್ಯಾಪಾರಗಳು ತುಂಬಿಕೊಡುವಲ್ಲಿ ತನ್ನದೇ ಆದ ಪಾತ್ರವನ್ನು ವಹಿಸುತ್ತವೆ.

ಹೆಚ್ಚಿನ ಮಹಿಳೆಯರು ಸಣ್ಣ ಪುಟ್ಟ ವ್ಯಾಪಾರದಲ್ಲಿ ತೊಡಗಿರುವುದರಿಂದ ಗಂಡಸರು ವಲಸೆ ಹೋದಾಗ ಆಗುವ ಅನನುಕೂಲಗಳನ್ನು ಸರಿದೂಗಿಸಲು ಸಾಧ್ಯವಾಗಿದೆ. ಪುರುಷ ವಲಸೆಗಾರರಿಂದ ಸಹಾಯ, ಸಹಕಾರ ದೊರೆತರೆ ಹೆಚ್ಚು ಸಮಯವನ್ನು ಈ ವ್ಯಾಪಾರಕ್ಕಾಗಿ ಉಪಯೋಗಿಸಿ, ತಮ್ಮ ಕುಟುಂಬಕ್ಕೆ ಹೆಚ್ಚು ಆದಾಯವನ್ನು ದೊರಕಿಸಿಕೊಳ್ಳುತ್ತೇವೆ ಎಂಬ ಅವರ ಅಭಿಪ್ರಾಯದ ಮಧ್ಯೆಯೂ ಮಹಿಳೆಯರು ಹೆಚ್ಚು ಸಮಯವನ್ನು ಮನೆಕೆಲಸಗಳಿಗೆ ವ್ಯಯಿಸುವುದು, ಜೀವನೋಪಾಯ ಮೂಲಗಳಿಗೆ ಸಮಯ ಮತ್ತು ಶ್ರಮವನ್ನು ಹೊಂದಿಸುವುದು ಕಷ್ಟ ಆಗಿದೆ. ಇದರಿಂದ ಕಡಿಮೆ ಆದಾಯದಲ್ಲಿ ಜೀವನ ನಡೆಸಲು ಪರದಾಡುತ್ತಿದ್ದಾರೆ ಎಂದು ಹೇಳಬಹುದು.

ಅಧ್ಯಯನಕ್ಕೆ ಒಳಪಟ್ಟ ಮಹಿಳೆಯರು ಕೃಷಿ ಚಟುವಟಿಕೆಗಳ ಜೊತೆಗೆ ಒಂದು ಅಥವಾ ಅದಕ್ಕಿಂತ ಹೆಚ್ಚು ಪೂರಕ ಆದಾಯ ತರುವ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವುದು ಕಂಡುಬಂದಿದೆ. ಶೇಕಡ ೮೪ರಷ್ಟು ಕುಟುಂಬಗಳು ಹಲವಾರು ವರ್ಷಗಳಿಂದ ಮಾಧ್ಯಮಿಕ ಜೀವನೋಪಾಯ ಮೂಲವನ್ನು ಒಂದು ಅಥವಾ ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಮಾರಾಟ ಮಾಡುವುದರ ಮೂಲಕ ಪಡೆಯುತ್ತಿವೆ. ಮನೆಯಲ್ಲಿಯೇ ಸಣ್ಣದಾದ ಅಂಗಡಿಯನ್ನು ಇಟ್ಟುಕೊಂಡಿರುವುದು ಇದೆ. ಮಹಿಳೆಯರಿಗೆ, ಹುಡುಗಿಯರಿಗೆ ಬೇಕಾಗುವ ಕ್ಲಿಪ್, ಹೇರ್‌ಪಿನ್, ಬಳೆ, ರಬ್ಬರ್ ಬ್ಯಾಂಡ್ ಇತ್ಯಾದಿಯನ್ನು ಮಾರಾಟ ಮಾಡುವುದನ್ನು; ಕೋಳಿ, ಕುರಿ ಸಾಕಾಣಿಕೆ ಮಾಡುವುದನ್ನು, ಹಾಲು, ಮೊಸರು, ಮಜ್ಜಿಗೆ ಮಾರುವುದನ್ನು; ಬೆಳಗ್ಗೆ, ಸಾಯಕಾಲ ಸಮಯದಲ್ಲಿ ಮಿರ್ಚಿ, ವಡೆ, ಬೋಂಡಾ, ದೋಸೆ, ಪಡ್ಡು ಮಾಡಿ ಮಾರಾಟ ಮಾಡುತ್ತಿರುವುದು ಕಂಡುಬರುತ್ತದೆ.

ಸಣ್ಣಮಟ್ಟ ವ್ಯಾಪಾರ ಮತ್ತು ವ್ಯವಹಾರದ ಅಂಗಡಿಗಳ ಮಾಲೀಕತ್ವದಲ್ಲಿ ಲಿಂಗ ಅಂತರ ಕಂಡುಬರುತ್ತದೆ. ಅಂದರೆ ಮಹಿಳೆಯರು ನಡೆಸುವ ಅಂಗಡಿಗಳಲ್ಲಿ ಕಾಲು ಭಾಗದಷ್ಟು ಮಾತ್ರ ಅವರು ಮಾಲೀಕತ್ವವನ್ನು ಹೊಂದಿದ್ದರೆ; ಪುರುಷರು ಮುಕ್ಕಾಲು ಪ್ರತಿಶತ ಮಾಲೀಕತ್ವವನ್ನು ಹೊಂದಿದ್ದಾರೆ. ಇನ್ನು ಬಹುತೇಕ ಮಹಿಳೆಯರು ಅಂಗಡಿಗಳನ್ನು ನಡೆಸುತ್ತಿದ್ದರೂ ಸಹ ಅವುಗಳ ಮಾಲೀಕತ್ವವನ್ನು ಅವರು ಹೊಂದಿಲ್ಲ. ಇದು ಏನನ್ನು ಸೂಚಿಸುವುದೆಂದರೆ ಮಹಿಳೆಯರು ವ್ಯಾಪಾರೋದ್ಯಮದಲ್ಲಿ ತೊಡಗಿಕೊಂಡಿದ್ದರೂ ಸಹ ಅವರ ಆದಾಯ ಮನೆಯ ನಿರ್ವಹಣೆಗೆ ಖರ್ಚಾಗುತ್ತದೆ ಹೊರತು ವ್ಯಾಪಾರವನ್ನು ಅಭಿವೃದ್ಧಿಪಡಿಸಲು ಅಲ್ಲ ಎಂಬುದನ್ನು ತಿಳಿಸುತ್ತದೆ. ಹಾಗಾಗಿ ಮಹಿಳೆಯರು ಕೆಲಸ ಮಾಡಿದರೂ ಸಹ ಮಾಲೀಕತ್ವನ್ನು ಹೊಂದಲು ಸಾಧ್ಯವಾಗಿಲ್ಲ ಎಂದು ಹೇಳಬಹುದು.

ಮಹಿಳೆಯರ ಕೃಷಿ ಮತ್ತು ಪೂರಕ ವ್ಯಾಪಾರ ವ್ಯವಹಾರದಿಂದ ಆಹಾರ ವಸ್ತು, ಬಟ್ಟೆಗಳನ್ನು ಖರೀದಿಸಲು ಮತ್ತು ಮನೆಯ ಅಗತ್ಯಗಳನ್ನು ಪೂರೈಸಿಕೊಳ್ಳಲು, ಮಕ್ಕಳ ಶಾಲಾ ಶುಲ್ಕವನ್ನು ಭರಿಸಲು, ವೈದ್ಯಕೀಯ ಖರ್ಚುವೆಚ್ಚಗಳನ್ನು ಭರಿಸಲು ಸಾಧ್ಯವಾಗಿದೆ. ಇದರಿಂದ ಜೀವನೋಪಾಯದ ಹೊಸ ಆಯ್ಕೆಗಳನ್ನು ಮಾಡಿಕೊಳ್ಳಲು ಮತ್ತು ವೈಯಕ್ತಿಕ ಸ್ವಾಯತ್ತತೆ ಪಡೆದುಕೊಳ್ಳಲು ಸಾಧ್ಯವಾಗಿದೆ. ಇದು ಮಹಿಳೆಯರು ಹಲವು ರೂಪಗಳಲ್ಲಿ ಬದಲಾವಣೆಗೊಳ್ಳುವ ಪಾತ್ರವನ್ನು ತಿಳಿಸುತ್ತದೆ ಮತ್ತು ಆ ಪಾತ್ರ ಮನೆಯ ಒಳ-ಹೊರಗು ನಡೆಯುತ್ತದೆ. "ಮಳೆ ಬರುವ ಮೊದಲು ನನ್ನ ಸಣ್ಣ ಪುಟ್ಟ ವ್ಯಾಪಾರ ವ್ಯವಹಾರದ ಚಟುವಟಿಕೆಗಳು ಕಡಿಮೆ ಆಗುತ್ತವೆ, ಮಳೆ ಬಂದಾದ ಮೇಲೆ ನಾನು ಗದ್ದೆಯ ಕೆಲಸಗಳಲ್ಲಿ ತೊಡಗಿಕೊಳ್ಳುತ್ತೇನೆ. ಒಂದು ಸಾರಿ ನಾಟಿ ಮಾಡಿದರೆ ಗದ್ದೆಯ ಕೆಲಸದಿಂದ ಸಮಯ ದೊರಕುತ್ತದೆ. ಆಗ ಮತ್ತೆ ವ್ಯಾಪಾರ ವ್ಯವಹಾರದ ಕೆಲಸಗಳು ಪ್ರಾರಂಭವಾಗುತ್ತವೆ. ಕಳೆ ಬಂದಾಗ ಮತ್ತೆ ವ್ಯಾಪಾರದ ಚಟುವಟಿಕೆ ಕುಂಟುತ್ತಾ ಸಾಗುತ್ತದೆ. ಕಳೆ ತೆಗೆದಾದ ನಂತರ ಮತ್ತೆ ಒಂದು ತಿಂಗಳು ವ್ಯಾಪಾರ ನಡೆಸುತ್ತೇನೆ. ಮಕ್ಕಳು ಮತ್ತು ನಾನು ಎಲ್ಲ ಚಟುವಟಿಕೆಗಳನ್ನು ನಿಭಾಯಿಸಬೇಕಾಗುವುದರಿಂದ ಕೃಷಿ ಮತ್ತು ವ್ಯಾಪಾರವನ್ನು ಸಮನಾಗಿ ನಡೆಸಿಕೊಂಡು ಹೋಗುವುದು ಕಷ್ಟ. ಅದರಲ್ಲೂ ಮನೆಯ ಗಂಡಸು ದುಡಿಮೆಗೆ ದೂರದ ಪ್ರದೇಶಕ್ಕೆ ಹೋದಾಗ ಇನ್ನೂ ಕಷ್ಟವಾಗುತ್ತದೆ. ಕೃಷಿ ಚಟುವಟಿಕೆಗಳು ನಿರಂತರವಾಗಿ ಸಾಗಿದರೆ ವ್ಯಾಪಾರದ ಚಟುವಟಿಕೆಗಳು ಕಡಿಮೆಯಾಗುತ್ತವೆ. ವ್ಯಾಪಾರ ಕೆಲಸ ಜೋರಾಗಿ ನಡೆಯುತ್ತಿರುವಾಗ ಕೃಷಿ ಕೆಲಸಗಳು ಕಡಿಮೆಯಾಗುತ್ತವೆ. ಕೃಷಿ ಕೆಲಸಗಳಿಗಾಗಲಿ, ವ್ಯಾಪಾರದ ಕೆಲಸಗಳಿಗಾಗಲಿ ನಿರಂತರವಾಗಿ ಮಾಡುವುದು ಕಷ್ಟ. ಆದಕಾರಣ ನಾನು ನನ್ನ ಸಮಯವನ್ನು ಎಷ್ಟು ಏತಕ್ಕಾಗಿ ಕೊಡಬೇಕು ಎಂಬುದನ್ನು ವಿಂಗಡಿಸಿಕೊಂಡಿರುತ್ತೇನೆ ಮತ್ತು ಎಲ್ಲ ಕೆಲಸಗಳಲ್ಲೂ ಖುಷಿಯಾಗಿರುತ್ತೇನೆ. ಏಕೆಂದರೆ ಎಲ್ಲ ಕೆಲಸಗಳನ್ನು ನಾನೇ ನಿಭಾಯಿಸಬೇಕಾಗಿರುವುದು" ಎಂದಿರುವರು. ಇದನ್ನು ಗಮನಿಸಿದಾಗ ವೈಯಕ್ತಿಕ

ಹೊಣೆಗಾರಿಕೆ, ಕೆಲಸದ ಸ್ವರೂಪ, ಸಾಮಾಜಿಕ-ಸಾಂಸ್ಕೃತಿಕ ರಚನೆಗಳು ಮಹಿಳೆಯರ ಮೇಲೆ ಹೆಚ್ಚಿನ ಕೆಲಸದ ಹೊರೆಯನ್ನು ಹೆಚ್ಚಿಸಿವೆ ಎಂದು ಹೇಳಬಹುದು.

ಈ ಪ್ರದೇಶದಲ್ಲಿ ಲಿಂಗತಾರತಮ್ಯವಿರುವುದು ಹಲವು ಸಂಗತಿಗಳಿಂದ ತಿಳಿದು ಬಂದಿದೆ. ಮಹಿಳೆ ಮತ್ತು ಪುರುಷರಿಗೆ ಬೇರೆ ಬೇರೆ ತೆರನಾದ ಆಸ್ತಿ, ಸಂಪನ್ಮೂಲಗಳ ಲಭ್ಯತೆ ಮತ್ತು ಅವಕಾಶಗಳು ಇರುವುದನ್ನು ಗಮನಿಸಿದಾಗ ಭೂಮಿಯನ್ನು ಮಹಿಳೆಯರು ತಮ್ಮ ಹೆಸರಿನಲ್ಲಿಯೇ ಹೊಂದಿರುವುದು ತುಂಬ ಕಡಿಮೆ. ಕೇವಲ ಬೆರಣಿಕೆಯಷ್ಟು ಮಹಿಳೆಯರಿಗೆ ಮಾತ್ರ ಭೂಮಿ ಹಕ್ಕಿನ ಅವಕಾಶ ಲಭ್ಯವಾಗಿದೆ. ಮಹಿಳೆಯರಿಗೆ ಶಿಕ್ಷಣದ ಕೊರತೆ ಇದೆ. ಏಕೆಂದರೆ ಲಿಂಗತಾರತಮ್ಯದಿಂದಾಗಿ ಹುಡುಗಿಯರ ಶಿಕ್ಷಣ ಎರಡನೇ ಆದ್ಯತೆಯಾಗಿದೆ. "ಕಲಿಕೆಗೆ ಅವಕಾಶದ ಲಭ್ಯತೆ ಇಲ್ಲದಿರುವುದರಿಂದ ಮಹಿಳೆಯರು ಹೆಚ್ಚು ವಿದ್ಯಾಭ್ಯಾಸ ಮಾಡಲು ಸಾಧ್ಯವಾಗಿಲ್ಲ. ಪುರುಷರ ಮಧ್ಯಸ್ಥಿಕೆಯಲ್ಲಿಯೇ ಮಹಿಳೆಯರಿಗೆ ಉತ್ಪಾದನಾ ಸಂಪನ್ಮೂಲಗಳ ಮತ್ತು ನಿರ್ಣಯ ಕೈಗೊಳ್ಳುವಿಕೆಯ ಅವಕಾಶ ಪ್ರಾಪ್ತವಾಗುತ್ತದೆ ಎಂದು ಕಿಂಗ್ ಇ. ಮತ್ತು ಹಿಲ್ ಎ. ಅಭಿಪ್ರಾಯ ಪಡುತ್ತಾರೆ" (ಕಿಂಗ್ ಇ. ಆ್ಯಂಡ್ ಹಿಲ್ ಎ. (ಇಡಿ), ೧೯೯೩, ಪು. ೧೭೪). ಮಹಿಳೆಯರು ಮಾಡುವ ಕೃಷಿ ಕೆಲಸಗಳು, ಸಣ್ಣ-ಪುಟ್ಟ ವ್ಯಾಪಾರ ವ್ಯವಹಾರಗಳು ಹಣದ ಆದಾಯಕ್ಕಿಂತ ಹೆಚ್ಚು ಅವರ ಅವಶ್ಯಕತೆಯನ್ನು ಸೂಚಿಸುತ್ತವೆ ಎಂದು ಹೇಳಬಹುದು.

ಒಟ್ಟಿನಲ್ಲಿ ಹೇಳಬೇಕೆಂದರೆ ಪುರುಷರ ವಲಸೆಯ ಪರಿಣಾಮವು ಮಹಿಳೆಯ ಪ್ರಾಥಮಿಕ ಮತ್ತು ಮಾಧ್ಯಮಿಕ ಜೀವನೋಪಾಯ ಮೂಲಗಳ ಮೇಲೆ ಅದರಲ್ಲೂ ಮಹಿಳೆಯರ ಕೆಲಸದ ಹೊರೆ ಹೆಚ್ಚಾಗುವಂತೆ ಮಾಡಿದೆ. ಇದಕ್ಕೆ ತಕ್ಕಂತೆ ಮಹಿಳೆಯರು ವೈಯಕ್ತಿಕವಾಗಿ ಮತ್ತು ಕೌಟುಂಬಿಕವಾಗಿ ತಮ್ಮ ಜೀವನಚಕ್ರವನ್ನು ಬದಲಿಸಿಕೊಂಡು ಹಲವು ಕೆಲಸಗಳನ್ನು ನಿರ್ವಹಿಸಿವಂತೆ ಮಾಡಿದೆ.

**೫.೩. ಆದಾಯ**

ಆದಾಯ ಕುಟುಂಬದ ಜೀವನೋಪಾಯಕ್ಕೆ ಅತ್ಯಂತ ಪ್ರಮುಖವಾದ ಮೂಲವಾಗಿದೆ. ವಲಸಿಗರ ಹಣ ರವಾನೆಯು ಮನೆಯ ಆದಾಯವನ್ನು ಹೆಚ್ಚಿಸಿದೆ ಅಲ್ಲದೆ, ಮನೆಯ ಸದಸ್ಯರು ವಸ್ತುಗಳನ್ನು ಕೊಳ್ಳಲು ಮತ್ತು ಇನ್ನು ಕೆಲವು ಸಲ ಕುಟುಂಬದ ಆದಾಯವನ್ನು ಹೆಚ್ಚಿಸುವಲ್ಲಿ ಕಾರಣವಾಗುತ್ತದೆ. ಈ ಬಗ್ಗೆ ಅನೇಕ ಅಧ್ಯಯನಗಳು ನಡೆದಿವೆ. ಅಫಶರ್ ಎಚ್. ಪ್ರಕಾರ "ಬಾಂಗ್ಲಾ ದೇಶದಲ್ಲಿ ವಲಸೆಯಿಂದ ಬಡತನ ಕಡಿಮೆಯಾಗಿದೆ ಮತ್ತು ಕೃಷಿ ಭೂಮಿಯ ಹೆಚ್ಚಳವಾಗಿದೆ ಎಂದು ಹೇಳಿದ್ದಾರೆ" (ಅಫಶರ್ ಎಚ್., ೨೦೦೩, ಪು. ೧೫೯). ಅದೇ ಗೆಸ್ಟ್ ಅವರು ನಡೆಸಿದ ಅಧ್ಯಯನವು "ವಲಸೆ ಕುಟುಂಬದ ಪೂರಕ ಆದಾಯಕ್ಕೆ ಪ್ರಮುಖ ಕೊಡುಗೆ ನೀಡಿದೆ. ಆರ್ಥಿಕತೆಗೆ ಬಹು ಆಯಾಮದ ಪ್ರಭಾವವನ್ನು ಬೀರಿದೆ.

ಕಟ್ಟಡ ನಿರ್ಮಾಣ ಸಾಮಗ್ರಿಗಳು ಸ್ಥಳೀಯವಾಗಿಯೇ ಲಭ್ಯವಾಗತೊಡಗಿವೆ. ಇದನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ನೋಡುವುದಾದರೆ ವಲಸೆ ಹೋದ ಕುಟುಂಬಗಳಲ್ಲಿ ವಲಸೆ ಹೋಗದ ಕುಟುಂಬಕ್ಕಿಂತ ಉತ್ತಮವಾದ ಜೀವನಮಟ್ಟವನ್ನು ಹೊಂದಿರುತ್ತವೆ ಎಂದು. ಅದರ ಜೊತೆಗೆ ಕುಟುಂಬದ ಕಲ್ಯಾಣಕ್ಕಾಗಿ ಉತ್ತಮವಾದ ಆದಾಯವನ್ನು ಪಡೆಯುತ್ತಿರುತ್ತವೆ. ವಲಸೆ ಹೋಗದ ಕುಟುಂಬಗಳಿಗೆ ಇದು ಸಾಧ್ಯವಾಗುವುದಿಲ್ಲ ಎಂದಿರುವರು" (ಗೆಸ್ಟ್ ಪಿ., ೧೯೯೮, ಪು. ೨೭೫–೩೧೮). ಅದೇ ರೀತಿ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಹೋದವರ ಆಂತರಿಕ ಹಣ ರವಾನೆಯು ಇದೇ ತರಹದ ಸಂಭವನೀಯ ಪರಿಣಾಮವನ್ನು ಉಂಟುಮಾಡಿದೆ. ಈ ತೆರನಾದ ಹಣ ರವಾನೆಯು ಕಡಿಮೆ ಎನಿಸಿದರೂ ಗ್ರಾಮೀಣ ಕುಟುಂಬಗಳಿಗೆ ಅತ್ಯವಶ್ಯಕ. ಈ ತೆರನಾದ ಹಣ ಬಡತನ ಕಡಿಮೆಯಾಗುವುದಕ್ಕೆ ಕಾರಣವಾಗುತ್ತಿದೆ ಎಂದು ಹೇಳಬಹುದು. ಇದನ್ನು ಅವರ ಸಂಭಾಷಣೆಯಲ್ಲಿ ನೋಡುವುದಾದರೆ

ಯಮನಪ್ಪ : ಬನ್ನಿ ಬನ್ನಿ

ಕಲ್ಲಪ್ಪ : ನಮಸ್ಕಾರ, ಆರಾಮ ಇದ್ದೀಯೇನು, ನಿನ್ನ ಕುಟುಂಬ ಹೇಗಿದೆ? ನಾನು ಈಗಷ್ಟೇ ಗದ್ದೆಯಿಂದ ಬಂದೆ, ನಿನ್ನನ್ನು ಕಂಡು ಹೋಗಲು ಬಂದಿದ್ದೇನೆ, ನನ್ನ ಹೆಂಡತಿ ಸಂಜೆ ಅಡುಗೆ ಮಾಡುವುದರೊಳಗೆ ಮನೆಗೆ ಹೋಗಬೇಕು.

ಯಮನಪ್ಪ: ದೇವರ ದಯೆಯಿಂದ ನಾವೆಲ್ಲರೂ ಆರಾಮ ಇದ್ದೀವಿ, ಅವನೊಬ್ಬನೇ ನಮ್ಮನ್ನೆಲ್ಲ ಆರಾಮಾಗಿ ಇಟ್ಟಿರೋದು.

ಕಲ್ಲಪ್ಪ: ಕರೆ ಹೇಳಿದೆ ನೋಡ, ದೇವರಿಲ್ಲದಿದ್ದರೆ ನಾವು ಎಲ್ಲಿ ಇರುತ್ತಿದ್ದೆವು? ಅದಕ್ಕಾಗಿ ನಾವು ಪ್ರತಿದಿನ ದೇವರಿಗೆ ನಡೆದುಕೊಳ್ಳಬೇಕು. ಏನು ದೊಡ್ಡ ಟಿ.ವ್ಹಿ! ಚಂದ ಇದೆ. ಇದು ಹೊಸದು ಅಲ್ಲವಾ, ನಾನು ಹೋದ ಸಲ ಬಂದಾಗ ಇದು ಇರಲಿಲ್ಲ.

ಯಮನಪ್ಪ: ಹೌದು, ನೀನು ಸರಿಯಾಗಿ ಹೇಳುತ್ತಿ. ನಿನಗ ನನ್ನ ಮಗ ಆಂಜನೇಯ ಗೊತ್ತಲ್ಲ, ಅವಾ ಹಳ್ಳಿ ಬಿಟ್ಟು ಮೂರು–ನಾಲ್ಕ ವರ್ಷ ಆಯಿತು.

ಕಲ್ಲಪ್ಪ: ಹೌದು ನನಗ ನಿನ್ನ ಮಗಾ ಆಂಜನೇಯ ಗೊತ್ತ ಅದಾನ. ಹೈಸ್ಕೂಲ್ ಆದ ಮೇಲೆ ಆತ ಶಾಲೆಗೆ ಮತ್ತ ಹೋಗಲಿಲ್ಲ, ಅವನ ಅಕ್ಕನ ಜೊತೆಗೆ ಹೋಗ್ಯಾನ, ಈಗ ಅವರು ಬೆಂಗಳೂರಾಗ ಅದಾರ.

ಯಮನಪ್ಪ: ಸರಿ ಬಿಡು. ಸಾಲಿ ಅಲ್ಲಿಮಟಾ ಓದಿದ, ಈಗ ದೇವರ ದಯೆಯಿಂದ ಅವನಿಗೆ ಕೆಲಸ ಸಿಕ್ಕಿದೆ. ಅವನ ಮೊದಲ ಸಂಬಳದಾಗ ಅವನು ಮನಿಗಿ ರೇಡಿಯೋ

ತಂದಾನ. ಅಷ್ಟೇ ಅಲ್ಲದೆ ಪ್ರತಿ ಎರಡು ತಿಂಗಳಿಗೊಮ್ಮೆ ನನಗ ಮತ್ತ ಅವನ ತಾಯಿಗೆ ಸ್ವಲ್ಪ ಹಣ ಕಳಸತಾನ ಅಂತಾ ಹೇಳ್ಯಾನ. ನಾನು ಅವನ ತಾಯಿ ಹೇಳಿದಂಗ ಅವಾ ಶಾಲೆಗೆ ಹೋಗಲಾಕ ಹಣ ಖರ್ಚ ಮಾಡಿದೇ ಅವನ ಅಕ್ಕನಿಗೆ ಅಲ್ಲ. ಈಗ ನೋಡ ಅದರ ಲಾಭ? ಗಂಡಮಕ್ಕಳು ಹೆಣ್ಣಮಕ್ಕಳಗಿಂತ ಹೆಚ್ಚು ಲಾಭ ತರತಾರ.

ಕಲ್ಲಪ್ಪ: ಹೌದು ಹೌದು ನಾವು ಗಂಡಸರು ನಮಗ ಏನು ಸರಿ ಅಂತ ಅನಿಸುತ್ತದೊ ಅದನ್ನೇ ಮಾಡಬೇಕು, ಹೆಣ್ಣಮಕ್ಕಳ ಮಾತ ಕೇಳಬಾರದು, ಆದ್ರ ಈಗ ಅವನ ಅಕ್ಕ ಹೇಂಗ ಅದಾಳ?

ಯಮನಪ್ಪ: ಆರಾಮ ಇದಾಳ. ಒಂದು ಇಲ್ಲದಿದ್ದರ ಇನ್ನೊಂದು ವ್ಯಾಪಾರ ಮಾಡತಾಳ. ನಿನಗ ಗೊತ್ತ ಅದಲಾ ಅಕೀನ ಮದುವಿ ನಾಗಪ್ಪನ ಮಗನ ಜೊತೆ ಆತು. ಈಗ ನಾಲ್ಕು ಮಕ್ಕಳ ಅದಾವ. ಅವನು ಕೆಲಸಾ ಮಾಡತಾನ ಆಕಿ ಸಣ್ಣ ಪುಟ್ಟ ವ್ಯಾಪಾರ ವ್ಯವಹಾರ ಮಾಡತಾಳ. ನಾಲ್ಕ ಮಕ್ಕಳ ಮತ್ತ ಗಂಡ ಇರುವುದರಿಂದ ನಾವು ಆಕಿಯಿಂದ ಏನು ನಿರೀಕ್ಷೆ ಮಾಡಲಾಕ ಆಗತದ? ಅಕಿನ ಹತ್ರ ಇದ್ದಾಗ ಸ್ವಲ್ಪ ಹಣ ಕೊಡತಾಳ ಆದ್ರ ಅದು ಯಾವುದಕ್ಕೂ ಆಗುವುದಿಲ್ಲ. ಒಂದು ಕೊಟ್ಟರ ಇನ್ನೊಂದು ಕೇಳತಾಳ. ಗಂಡಮಕ್ಕಳ ತರಾ ಅಲ್ಲ. ಗಂಡಮಕ್ಕಳು ಕೊಟ್ಟದ್ದು ಮನಿಗಿ ಉಪಯೋಗ ಆಗತದ. ಇನ್ನು ಇಬ್ಬರು ಗಂಡಮಕ್ಕಳು ಸಿಟಿಯಲ್ಲಿ ಏನ ಮಾಡತಾರ?

ಕಲ್ಲಪ್ಪ: ಗಂಡಮಕ್ಕಳು ಆರಾಮ ಅದಾರ ಮತ್ತ ಚನ್ನಾಗಿ ಕೆಲಸಾ ಮಾಡತಾರ, ಎರಡು ತಿಂಗಳಿಗೊಮ್ಮೆ ಒಬ್ಬರು ಇಲ್ಲದಿದ್ದರ ಇನ್ನೊಬ್ಬ ಹಣ ಕೊಟ್ಟು ಕಳಸತಾರ. ಅವರು ಕಳುಹಿಸುವ ಹಣ ಬಾಳ ಉಪಯೋಗ ಆಗತದ. ಮಳೆ ಆಗದೇ ಇರುವ ಟೈಮ್‌ದಾಗ ಅವರು ಕೊಡುವ ಹಣನೇ ನಮ್ಮ ಬದುಕಿಗಿ ಆಗತದ. ಈಗ ಕೃಷಿಯಿಂದನೂ ಅಷ್ಟೇನು ಬೆಳೆ ಬರುವುದಿಲ್ಲ, ಮತ್ತ ಮನಿಗೂ ಸಾಕಾಗುವುದಿಲ್ಲ.

ಯಮನಪ್ಪ: ನಿಜ ಬಿಡು, ಒಳ್ಳೆಯದಾಯಿತು. ನಮ್ಮ ಕುಟುಂಬಗಳು ಅದೃಷ್ಟ ಮಾಡಿದ ಕುಟುಂಬ ಅದಾವ ಹಳ್ಳಿಯಲ್ಲಿ. ಮತ್ತ ಹಳ್ಳಿಯಲ್ಲಿ ಕೆಲವು ಜನರು ವೈರಿಗಳು ಅದಾರ ಅಷ್ಟೇ (ಗುನುಗಿದನು). ನಡೀ ಅಪಾ ಏನರ ಸ್ವಲ್ಪ ಕುಡಿಯೋಣ. ವೆಂಕಪ್ಪ ಬಿಸಿ-ಬಿಸಿಯಾದ ಚಹಾ ತೆಗೆದುಕೊಂಡ ಬಂದ. ಕುಡಿ ಪಾ ಮನಿಗಿ ಹೋಗಿ ಊಟಾ ಮಾಡಲಿಕತೀ.

ಕಲ್ಲಪ್ಪ: ಹಂಗೇ ಆಗಲಿ ನಡಿ ಅಂದ.

ಮನೆಯ ಆದಾಯದಲ್ಲಿ ವಲಸೆ ಹೋದವರ ಪಾಲು ಕೃಷಿಯ ಆದಾಯಕ್ಕಿಂತ ಹೆಚ್ಚಾಗಿರುತ್ತದೆ. ವಲಸೆ ಹೋದ ಕುಟುಂಬಗಳಲ್ಲಿ ಶೇಕಡ ೭೦ರಷ್ಟು ಹಣವನ್ನು ವಲಸಿಗರಿಂದ ಪಡೆಯುತ್ತೇವೆ ಎಂದು, ಶೇಕಡ ೩೦ರಷ್ಟು ಕುಟುಂಬಗಳು ವಲಸಿಗರಿಂದ

ಹಣ ರವಾನೆ ಆಗುವುದಿಲ್ಲ ಎಂದಿರುವರು. ವಲಸೆ ಹೋದ ಕುಟುಂಬಗಳಲ್ಲಿ ಹೆಚ್ಚು ಕುಟುಂಬಗಳು ಒಂದು ವರ್ಷಕ್ಕೆ ರೂ.೧೫೦೦೦/-ಕ್ಕಿಂತ ಕಡಿಮೆ ಹಣವನ್ನು ಪಡೆದರೆ, ಕೆಲವು ಕುಟುಂಬಗಳು ವರ್ಷಕ್ಕೆ ರೂ.೨೫೦೦೦/- ಹಣವನ್ನು ಪಡೆಯುತ್ತಿವೆ. ಎರಡು ಮೂರಂಶದಷ್ಟು ಕುಟುಂಬಗಳು ವರ್ಷಕ್ಕೆ ರೂ.೧೦೦೦೦/-ಕ್ಕಿಂತ ಕಡಿಮೆ ಹಣವನ್ನು ಪಡೆಯುತ್ತಿರುವುದನ್ನು ಈ ಅಧ್ಯಯನ ಗುರುತಿಸುತ್ತದೆ.

ನಕ್ಷೆ ೫.೧.

**ಕುಟುಂಬಗಳಿಗೆ ಹಣ ರವಾನೆ**




ವಲಸೆ ಹೋದ ಕುಟುಂಬಗಳಲ್ಲಿ ಹೆಚ್ಚಿನ ಕುಟುಂಬಗಳು ಎರಡು ತಿಂಗಳಿಗೊಮ್ಮೆ ಅಥವಾ ಮೂರು ತಿಂಗಳಿಗೊಮ್ಮೆ ಹಣವನ್ನು ವಲಸಿಗರಿಂದ ಪಡೆಯುತ್ತವೆ. ಈ ಅಧ್ಯಯನದಲ್ಲಿ ವಲಸೆ ಹೋದ ಮಹಿಳೆಯರಿಗಿಂತ ಪುರುಷರು ನಿರಂತರವಾಗಿ ಎರಡು ಅಥವಾ ಮೂರು ತಿಂಗಳಿಗೊಮ್ಮೆ ಹಣವನ್ನು ರವಾನಿಸುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಏಕಿದೆ ಅಂದರೆ ಈ ಭಾಗದಲ್ಲಿ ಮಹಿಳೆಯರಿಗಿಂತ ಪುರುಷರು ಹೆಚ್ಚು ಶಿಕ್ಷಣವನ್ನು ಪಡೆದಿದ್ದಾರೆ ಮತ್ತು ಅವರಿಗೆ ಔಪಚಾರಿಕ ವಲಯದಲ್ಲಿ ಉದ್ಯೋಗಗಳು ಲಭಿಸಿವೆ. ಇದರಿಂದ ಅವರ ಸಂಬಳವು ನಿರಂತರವಾಗಿದೆ ಮತ್ತು ಮಹಿಳೆಯರಿಗಿಂತ ಅಧಿಕವಾಗಿದೆ. ಮಹಿಳಾ ವಲಸಿಗರಲ್ಲಿ ಹೆಚ್ಚಿನವರು ಅನೌಪಚಾರಿಕ ದುಡಿಮೆಯನ್ನು ನಂಬಿ ಜೀವನ ನಡೆಸುವವರು ಇದ್ದಾರೆ ಮತ್ತು ಅನೌಪಚಾರಿಕ ದುಡಿಮೆ ಹೆಚ್ಚು ಲಾಭವನ್ನು ತಂದರೂ ಅದಕ್ಕೆ ಬಂಡವಾಳ ಹಾಕುವಷ್ಟು ಇವರಲ್ಲಿ ಹಣವಿಲ್ಲ ಆದ್ದರಿಂದ ಅದನ್ನು ಸಾಧಿಸಲು ಅವರಿಗೆ ಆಗಿಲ್ಲ.

ಸಾಮಾನ್ಯವಾಗಿ ಹೇಳಬೇಕೆಂದರೆ ವಲಸಿಗರಿಂದ ಹಣ ರವಾನೆಯು ನಿರಂತರವಾಗಿಲ್ಲ ಮತ್ತು ಮೊತ್ತವು ಕಡಿಮೆ ಇದೆ. ಆದರೂ ಸಹ ಕುಟುಂಬದ ದುರ್ಬಲತೆ, ಬಡತನವನ್ನು ಕಡಿಮೆ ಮಾಡುವಲ್ಲಿ ಮತ್ತು ಆಹಾರ ಭದ್ರತೆಯನ್ನು ನೀಡುವಲ್ಲಿ ಅದು ಪ್ರಮುಖ ಪಾತ್ರ ವಹಿಸುತ್ತಿದೆ ಎಂದು ಹೇಳಬಹುದು. ಅನೇಕ ಅಧ್ಯಯನಗಳು ಆಂತರಿಕ ವಲಸೆಯು ಕೃಷಿ ಕಾರ್ಮಿಕರಿಗೆ ಕೂಲಿ ನೀಡಿ ಕೃಷಿಯನ್ನು ವಿಸ್ತರಿಸುವಲ್ಲಿ, ಶಾಲಾ ಮಕ್ಕಳ ಶುಲ್ಕವನ್ನು ಪಾವತಿಸುವಲ್ಲಿ ವಲಸಿಗರ ಹಣ ರವಾನೆಯು ಸಹಾಯ ಮಾಡುತ್ತದೆ ಎಂದು ಗುರುತಿಸಿವೆ. ಇನ್ನೂ ಕೆಲವು ಅಧ್ಯಯನಗಳು ವಲಸಿಗರ ಹಣ ರವಾನೆಯು ಮೂರು ಮುಖ್ಯ ಉಪಯೋಗಗಳನ್ನು ಮಾಡುತ್ತದೆ ಎಂದು ತಿಳಿಸಿವೆ. ಅದರಲ್ಲಿ ಒಂದು ವೈಯಕ್ತಿಕ ಸೇವೆಯ ತೃಪ್ತಿ, ಸಾಮಾಜಿಕ ಮತ್ತು ಸಾಮುದಾಯಿಕ ಕಾರ್ಯಕ್ರಮಗಳಲ್ಲಿ ಸಾಮಾಜಿಕ ಘನತೆಯಿಂದ ಭಾಗವಹಿಸುವಂತೆ ಮಾಡುವುದು. ಎರಡನೆಯದು ತಮ್ಮ ಸಮುದಾಯಗಳಲ್ಲಿ ಸಾಮಾಜಿಕ ಕಾರ್ಯಕ್ರಮಗಳಿಗೆ ಪ್ರೋತ್ಸಾಹ ನೀಡುವುದು. ಮೂರನೆಯದಾಗಿ ಉತ್ಪಾದನಾ ಚಟುವಟಿಕೆಗಳಿಗೆ ಬಂಡವಾಳವನ್ನಾಗಿ ಉಪಯೋಗಿಸುವುದು.

ಒಟ್ಟಾರೆಯಾಗಿ ಹೇಳುವುದಾದರೆ ವಲಸಿಗರ ಹಣ ರವಾನೆಯಿಂದ ಕುಟುಂಬದ ದಿನನಿತ್ಯದ ಅಗತ್ಯಗಳನ್ನು ಪೂರೈಸಿಕೊಳ್ಳುವುದರ ಜೊತೆಗೆ ಮನೆಯ ಸಣ್ಣ ಪುಟ್ಟ ರಿಪೇರಿಗಳಿಗೆ ಮತ್ತು ನಿರ್ವಹಣೆಗೆ ವ್ಯಯ ಮಾಡಲಾಗುತ್ತದೆ. ಜೊತೆಗೆ ಕುಟುಂಬಕ್ಕೆ ಸೈಕಲ್, ರೇಡಿಯೋ, ಸ್ಟೀರಿಯೋ, ಟಿ.ವಿ. ಇತ್ಯಾದಿ ವಸ್ತುಗಳನ್ನು ಖರೀದಿಸುತ್ತಾರೆ. ಅವರ ಹಣ ಖರ್ಚಾಗುವುದರಲ್ಲಿ ಉತ್ಪಾದನಾ ಚಟುವಟಿಕೆಗಳ ಮೇಲಿನ ಹೂಡಿಕೆಗೆ ಸೀಮಿತವಾಗಿದೆ. ಬಳಕೆಗೆ ಇದರ ಹೆಚ್ಚು ಪಾಲು ಅಧಿಕವಾಗಿದೆ. ಆದರೆ ಇದನ್ನು ನಾವು ಗ್ರಾಮಗಳ ಜನರ ಉತ್ತಮ ಯೋಗಕ್ಷೇಮದ ನೆಲೆಯಿಂದ ನೋಡಬೇಕಾಗಿದೆ.

ಕುಟುಂಬಕ್ಕೆ ವಲಸಿಗರು ಮಾಡಿದ ಆರ್ಥಿಕ ಸಹಾಯಕ್ಕೆ ಪ್ರತಿಯಾಗಿ ಮನೆಯವರು ವಲಸಿಗ ಸದಸ್ಯರಿಗೂ ಪ್ರೋತ್ಸಾಹ ನೀಡುತ್ತಿರುವುದು ಕಂಡುಬರುತ್ತಿದೆ. ಹೆಚ್ಚಿನ ಕುಟುಂಬಗಳು(೬೮%) ವಲಸಿಗರಿಗೆ ಸ್ನೇಹಿತರ ಮೂಲಕ, ಆ ಪ್ರದೇಶಕ್ಕೆ ಹೋಗುತ್ತಿರುವ ಗ್ರಾಮದ ಇತರೆ ಸದಸ್ಯರ ಮೂಲಕ ಪರಸ್ಪರ ಸಹಾಯ, ಸಹಕಾರವನ್ನು ನೀಡುತ್ತವೆ. ೮೬% ಭೂಮಿಯಿಂದ ಬೆಳೆದ ಆಹಾರ ಧಾನ್ಯಗಳನ್ನು, ೯% ತಯಾರಿಸಿದ ಮತ್ತು ಪ್ಯಾಕ್ ಮಾಡಿದ ತಿಂಡಿ-ತಿನಿಸುಗಳನ್ನು, ೨% ಗ್ರಾಮದಲ್ಲಿ ಪಶುಸಂಗೋಪನೆ ವಸ್ತುಗಳನ್ನು, ೪%ರಷ್ಟು ವಲಸಿಗರು ಕುಟುಂಬದಲ್ಲಿ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೆ ರಜೆಯ ಸಮಯದಲ್ಲಿ ಗ್ರಾಮಗಳಿಗೆ ಬಂದಾಗ ಸಹಾಯವನ್ನು ಮಾಡುತ್ತಾರೆ. ನಗರ ಪ್ರದೇಶದ ಅನೌಪಚಾರಿಕ ವಲಯದಲ್ಲಿ ಕೆಲಸ ಮಾಡುವ ತಂದೆ-ತಾಯಂದಿರು ಮಕ್ಕಳಿಗೆ ರಜಾ ದಿನಗಳಲ್ಲಿ ಅವರ ಮೂಲ ನಿವಾಸದ ಗ್ರಾಮಕ್ಕೆ ಕಳುಹಿಸುತ್ತಾರೆ. ಇದರಿಂದ ಕುಟುಂಬದಲ್ಲಿ ಅವರಿಗೆ ಪ್ರೀತಿ, ಗೌರವ ಅಧಿಕವಾಗಿ ದೊರೆಯುತ್ತದೆ.

ಕೆಲ ಪ್ರದೇಶಕ್ಕೆ ವಲಸೆ ಹೋದವರು ಕುಟುಂಬಕ್ಕೆ ಸಹಾಯ ಮಾಡುವುದು ಕಡಿಮೆ ಆಗಿದೆ. ಏಕೆಂದರೆ ಅವರು ನಗರ ಪ್ರದೇಶದಲ್ಲಿ ನಡೆಯುವ ಕೋಮುಗಲಭೆ ಅಥವಾ ಪರಸ್ಪರ ಸಹಕಾರದ ಕೊರತೆಯಿಂದ ದುಡಿಮೆ ಕಡಿಮೆಯಾಗಿದೆ. ಅದು ಅವರ ಜೀವನೋಪಾಯ ನಡೆಸುವುದಕ್ಕೆ ಸಾಕಾಗುತ್ತದೆ ಎಂಬುದು ಕೆಲ ವಕ್ತೃಗಳ ಅಭಿಪ್ರಾಯವಾಗಿದೆ. ಅದೇ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಭೂಮಿಯಲ್ಲಿ ಬೆಳೆದ ಬೆಳೆಗಳ ವಿನಿಮಯದ ಪದ್ಧತಿಗಳ ಬಗೆಗೆ ಹೇಳುತ್ತಾ ಇಂತಹ ಆಚರಣೆಗಳು ವಸ್ತು ಮತ್ತು ಸೇವೆಗಳ ವಿನಿಮಯಕ್ಕೆ ಸಹಾಯ ಮಾಡುತ್ತವೆ ಎನ್ನುತ್ತಾರೆ. ಆದರೆ ವಾಸ್ತವ ಸ್ಥಿತಿ ಏನೆಂದರೆ ನಗರ ಪ್ರದೇಶದಲ್ಲಿ ವಾಸಿಸುವವರ ಜೀವನ ವೆಚ್ಚ ಗ್ರಾಮೀಣ ಪ್ರದೇಶಕ್ಕಿಂತ ಅಧಿಕವಾಗಿರುತ್ತದೆ. ಅಲ್ಲದೆ ಅವರು ನಿರ್ದಿಷ್ಟ ಆದಾಯವನ್ನು ಹೊಂದಿರುತ್ತಾರೆ. ಆದರೆ ಅವರಿಗೆ ಯಾವುದೇ ತೆರನಾದ ಪೂರಕ ಆದಾಯಗಳಿರುವುದಿಲ್ಲ. ಇದರ ಪರಿಣಾಮವಾಗಿ ನಗರ ಪ್ರದೇಶದ ಸಂಸ್ಕೃತಿ ಹೆಚ್ಚು ವೈಯಕ್ತಿಕವಾಗಿರುತ್ತದೆ. ಅವರು ತಮ್ಮ ಬಜೆಟ್ಟನ್ನು ಆದಾಯಕ್ಕೆ ತಕ್ಕಂತೆ ಹೊಂದಿಸಬೇಕಾಗುತ್ತದೆ. ಹೀಗಾಗಿ ಜೀವನಶೈಲಿಯನ್ನು ಅವರು ಭಿನ್ನವಾಗಿ ನೋಡುತ್ತಾರೆ. ಇದು ಸರಳವಾಗಿ ನಗರ ಜೀವನದ ಆರ್ಥಿಕ ಚಿತ್ರಣವನ್ನು ಪ್ರತಿಫಲಿಸುತ್ತದೆ.

ಒಟ್ಟಿನಲ್ಲಿ ಹಣ ರವಾನೆಯು ಕುಟುಂಬದ ಆರ್ಥಿಕತೆಗೆ ಮತ್ತು ಸಮುದಾಯದ ಚಟುವಟಿಕೆಗಳಿಗೆ ಸಹಾಯ ಮಾಡುತ್ತದೆ. ಈ ಕುಟುಂಬಗಳಿಗೆ ಹಣ ರವಾನಿಸದಿದ್ದರೆ ಕಷ್ಟವಾಗುತ್ತದೆಂಬುದು ಅನೇಕರ ಅಭಿಪ್ರಾಯವಾಗಿದೆ. ಇದು ಕುಟುಂಬದ ಕಲ್ಯಾಣವನ್ನು ಬಯಸುತ್ತದೆ.

**೫.೪. ಜನಸಂಖ್ಯೆ**

ಈ ಮೊದಲೇ ಚರ್ಚಿಸಿದಂತೆ ವಲಸೆಯಿಂದ ಕೃಷಿ ಮೇಲಾಗುವಷ್ಟೇ ಪರಿಣಾಮಗಳು ಜನಸಂಖ್ಯೆ ಮೇಲೂ ಆಗುತ್ತದೆ. ಅಂದರೆ ಪುರುಷ ವಲಸೆ ಹೆಚ್ಚಾದಂತೆ ಮಹಿಳಾ ಮುಖ್ಯಸ್ಥರ ಕುಟುಂಬಗಳ ಸಂಖ್ಯೆಯಲ್ಲಿ ಹೆಚ್ಚಳವಾಗುತ್ತದೆ(ಚಾಂಟ್ಸ್ ವ್ಯಾಖ್ಯಾನದಂತೆ ಪುಟ ೯೮ ಅನ್ನು ನೋಡಿ). ಇದರ ಬಗೆಗೆ ನಡೆದ ಸಂಶೋಧನೆಗಳು ಮಹಿಳಾ ಮುಖ್ಯಸ್ಥರ ಕುಟುಂಬಗಳ ಹೆಚ್ಚಾಗುವಿಕೆಯನ್ನು ಸಾಕ್ಷೀಕರಿಸುತ್ತವೆ. ಈ ತೆರನಾದ ಪರಿಣಾಮಗಳು ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಬೇರೆ ಬೇರೆ ಆಗುತ್ತವೆ. ಗ್ರಾಮೀಣ ಪ್ರದೇಶದಲ್ಲಿ ವಲಸೆಯಿಂದ ಮಹಿಳಾ ಮುಖ್ಯಸ್ಥ ಕುಟುಂಬಗಳು ಹೆಚ್ಚಾದರೆ ನಗರ ಪ್ರದೇಶದಲ್ಲಿ ಹೆಚ್ಚಾದ ವಿಚ್ಛೇದನದಿಂದ ಮಹಿಳಾ ಮುಖ್ಯಸ್ಥ ಕುಟುಂಬಗಳು ಹೆಚ್ಚಾಗುತ್ತಿರುವುದು ಕಂಡುಬರುತ್ತದೆ.

ಈ ಪ್ರದೇಶದಲ್ಲಿ ವಲಸೆಯಿಂದಾಗಿಯೇ ಮಹಿಳಾ ಮುಖ್ಯಸ್ಥರ ಕುಟುಂಬ ಹೆಚ್ಚಾಗುತ್ತಿರುವುದನ್ನು ಈ ಅಧ್ಯಯನವು ಸಹ ಪುಷ್ಟೀಕರಿಸುತ್ತದೆ. ಇದರಿಂದ ವಲಸಿಗರ

ಮೇಲೆ ಕುಟುಂಬದ ಅವಲಂಬನೆಯು ಹೆಚ್ಚಾಗುತ್ತದೆ. ಇದಕ್ಕೆ ಮತ್ತೊಂದು ಕಾರಣವೆಂದರೆ ಮಹಿಳೆಯರು ಭೂಮಿ ಮತ್ತು ಬಂಡವಾಳದ ಅವಕಾಶದ ಲಭ್ಯತೆ ಸೀಮಿತ ಆಗಿದೆ. ಇದರಿಂದ ಮಹಿಳೆಯರ ಮೇಲಿನ ಹೊರೆ ಹೆಚ್ಚಾಗಿ ಸಂಪನ್ಮೂಲಗಳ ಲಭ್ಯತೆ ಕಡಿಮೆಯಾಗಿದೆ. ಹೀಗಾಗಿ ಮಹಿಳಾ ಮುಖ್ಯಸ್ಥರ ಕುಟುಂಬಗಳ ಪರಿಸ್ಥಿತಿ ದುರ್ಬಲವಾಗಿದೆ. ವಲಸೆ ಹೋದವರು ಕುಟುಂಬದ ನಿರ್ಣಯ ಪ್ರಕ್ರಿಯೆಯಲ್ಲಿ ಪ್ರಮುಖವಾದ ಸ್ಥಾನವನ್ನು ಹೊಂದಿರುವುದು. ವಲಸಿಗರು ತಾವು ಇರುವ ಪ್ರದೇಶದ ನಿರ್ಣಯ ಪ್ರಕ್ರಿಯೆಗಳನ್ನು ನಿರ್ದೇಶಿಸುವುದು ಕಂಡುಬರುತ್ತದೆ. ಇಲ್ಲಿ ಹೆಸರಿಗೆ ಮಹಿಳೆಯರು ಕುಟುಂಬದ ಮುಖ್ಯಸ್ಥರಾಗಿರುತ್ತಾರೆ. ಲಿಂಗತಾರತಮ್ಯವು ಹಾಗೆಯೇ ಮುಂದುವರಿಯುತ್ತದೆ. ಇದರಿಂದ ಪಿತೃಪ್ರಧಾನ ಹಿಡಿತ ಮತ್ತು ಮೌಲ್ಯಗಳು ಕುಟುಂಬದಲ್ಲಿ ಮುಂದುವರಿಯುತ್ತಲೇ ಇರುತ್ತವೆ.

**೫.೫. ಕುಟುಂಬ**

ವಲಸೆಯಿಂದ ಮಹಿಳೆಯರ ಸಾಮಾಜಿಕ ಸಾಂಸ್ಕೃತಿಕ ಪಾತ್ರಗಳಲ್ಲಿ ಬದಲಾವಣೆಗಳು ಆಗಿವೆ. ಪುರುಷರು ವಲಸೆ ಹೋದರೆ ಮಹಿಳೆಯರು ಅನಿವಾರ್ಯವಾಗಿ ಆ ಕುಟುಂಬದ ಮುಖ್ಯಸ್ಥರಾಗಿ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಇದರಿಂದಾಗಿ ಲಿಂಗಾಧಾರಿತ ಶ್ರಮವಿಭಜನೆಯಲ್ಲಿ ಮೂಲಭೂತ ಬದಲಾವಣೆಗಳಾಗಿವೆ. ಇದರಿಂದ ಕೃಷಿಯ ಕೆಲಸ, ಕೌಟುಂಬಿಕ ಕೆಲಸದ ಹೊಣೆ ಮತ್ತು ಮಕ್ಕಳ ಕಾಳಜಿಯಂತಹ ಜವಾಬ್ದಾರಿಗಳು ಹೆಚ್ಚಾಗಿ ಆರ್ಥಿಕ ಜೀವನೋಪಾಯಕ್ಕೆ ಕಡಿಮೆ ಸಮಯ ದೊರೆಯುತ್ತದೆ. ಆದರೆ ಇದಕ್ಕೆ ವಿರುದ್ಧವಾಗಿ ವಲಸೆ ಹೋಗದ ಕುಟುಂಬಗಳಲ್ಲೂ ಸಹ ಮಹಿಳೆಯರ ಮೇಲೆ ಕೃಷಿ ಮತ್ತು ಕೃಷಿಯೇತರ ಕೆಲಸಗಳ ಹೊಣೆ ಪುರುಷರಿಗಿಂತ ಅಧಿಕವಾಗಿರುವುದು ಕಂಡುಬರುತ್ತದೆ.

ಈ ಅಧ್ಯಯನದಲ್ಲಿ ಶೇಕಡ ೯೦ರಷ್ಟು ಮಹಿಳೆಯರು ಕೃಷಿ ಮತ್ತು ಮನೆಯ ಕೆಲಸಗಳಲ್ಲಿ ಭಾಗವಹಿಸುವಿಕೆ ಅಧಿಕವಾಗಿದೆ. ಪುರುಷ ಮುಖ್ಯಸ್ಥರು ಮತ್ತು ಕುಟುಂಬದವರು ನಿರ್ವಹಿಸುವ ಕೆಲಸ ಕಾರ್ಯಗಳನ್ನು ಮಹಿಳೆಯರು ನಿರ್ವಹಿಸುವುದರಿಂದ ಸ್ತ್ರೀಯರ ಸಿದ್ಧ ಮಾದರಿ ಪಾತ್ರ ಮತ್ತು ಜವಾಬ್ದಾರಿಗಳು ಶಿಥಿಲವಾಗುವ ಸಾಧ್ಯತೆ ಇದೆ. ಇದರಲ್ಲಿ ಕೃಷಿ ಮತ್ತು ಮನೆಯ ಕೆಲಸಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಹೆಚ್ಚಾಗಿ ಮಹಿಳೆ ಮತ್ತು ಹುಡುಗಿಯರ ಮೇಲೆ ಹೊರಿಸುವುದರಿಂದ ಕೆಲವೊಂದು ಸಮಯ ಇದಕ್ಕಾಗಿ ಹೆಣ್ಣು ಮಕ್ಕಳನ್ನು ಶಾಲೆಯಿಂದ ಹೊರಗುಳಿಯುವಂತೆಯೂ ಮಾಡಿರುವುದು ಇದೆ.

**ನಿರ್ಣಯದಲ್ಲಿ ಭಾಗವಿಸುವಿಕೆ**

ಈ ಪ್ರದೇಶದ ವಲಸೆಯ ಇನ್ನೊಂದು ಪರಿಣಾಮವೆಂದರೆ ಮಹಿಳೆಯರ ನಿರ್ಣಯ ಕುರಿತದ್ದು. ಮಹಿಳೆಯರು ನಿರ್ಣಯ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಿರುವುದು ಸಹ

ಸೀಮಿತವಾಗಿದೆ. ೩೮ ಪ್ರತಿಕ್ರಿಯೆದಾರರು ಕುಟುಂಬದ ನಿರ್ಣಯ ಪ್ರಕ್ರಿಯೆಯಲ್ಲಿ ಮಹಿಳೆಯರು ಭಾಗವಹಿಸುವಿಕೆ ಹೆಚ್ಚಾಗಿದೆ ಎಂದು. ೪೦ ಪ್ರತಿಕ್ರಿಯೆದಾರರು ಕುಟುಂಬದ ನಿರ್ಣಯ ಕೈಗೊಳ್ಳುವಿಕೆಯಲ್ಲಿ ವಲಸೆ ಹೋದ ಪುರುಷರ ಭಾಗವಿಸುವಿಕೆ ಹೆಚ್ಚಾಗಿದೆ ಎಂದು ತಿಳಿಸಿದ್ದಾರೆ. ೨೫ ಪ್ರತಿಕ್ರಿಯೆದಾರರು ಕುಟುಂಬದ ನಿರ್ಣಯ ಕೈಗೊಳ್ಳುವಿಕೆಯಲ್ಲಿ ಪುರುಷ ಸಂಬಂಧಿಗಳ ಪಾತ್ರ ಹೆಚ್ಚಾಗಿದೆ ಎಂದು. ಇದೇ ಸಮಯಕ್ಕೆ ೫೫ ಪ್ರತಿಕ್ರಿಯೆದಾರರು ಮಹಿಳೆಯ ಕುಟುಂಬದ ನಿರ್ಣಯ ಪ್ರಕ್ರಿಯೆಯಲ್ಲಿ ಭಾಗವಹಿಸುವಿಕೆ ಹೆಚ್ಚಾಗಿಲ್ಲ ಎಂದು. ೭೫ಕ್ಕೂ ಅಧಿಕ ಪ್ರತಿಕ್ರಿಯೆದಾರರು ವಲಸೆ ಹೋದವರನ್ನು ನಿರ್ಣಯ ಕೈಗೊಳ್ಳುವಿಕೆಯಲ್ಲಿ ಸಂಪರ್ಕಿಸಲಾಗುತ್ತದೆ ಎಂದು. ಅದೇ ಸಂದರ್ಭದಲ್ಲಿ ೪೫ ಜನರು ಪ್ರಮುಖ ನಿರ್ಣಯಗಳನ್ನು ಕುಟುಂಬದ ಹಿರಿಯ ಪುರುಷರು ಮಾಡುತ್ತಾರೆ ಎಂದಿದ್ದಾರೆ.

ಕುಟುಂಬದ ಪ್ರಮುಖ ನಿರ್ಣಯಗಳನ್ನು ಪುರುಷರು, ಪುರುಷ ಸಂಬಂಧಿಗಳೇ ಕೈಗೊಳ್ಳುತ್ತಾರೆ. ಕೆಲವು ಕುಟುಂಬಗಳಲ್ಲಿ ಅಧಿಕೃತ ಮುಖ್ಯಸ್ಥರೇ ನಿರ್ಣಯಗಳನ್ನು ಕೈಗೊಳ್ಳುವುದು ಕಂಡುಬಂದಿದೆ. ಏಕೆಂದರೆ ವಲಸೆ ಹೋದವರಲ್ಲಿ ಹೆಚ್ಚಾಗಿ ಎಲ್ಲ ಜವಾಬ್ದಾರಿಯನ್ನು ಪುರುಷ ಸಂಬಂಧಿಗಳ ಕೈಯಲ್ಲಿ ನೀಡಿರುತ್ತಾರೆ, ಹಣ ರವಾನೆಯನ್ನು ಸಹ ಅವರ ಹೆಸರಿಗೆ ಮಾಡುತ್ತಾರೆ ಮತ್ತು ವಲಸೆ ಹೋದ ಪುರುಷರ ಪರವಾಗಿ ಅವರು ಕೆಲಸ ನಿರ್ವಹಿಸುವಂತೆ ತಿಳಿಸಿರುತ್ತಾರೆ. ಆದಕಾರಣ ಪುರುಷ ಸಂಬಂಧಿಗಳು ಹಾಗೇ ವರ್ತಿಸುತ್ತಾರೆ. ಕೆಲವು ಮಹಿಳೆಯರು ವಲಸೆ ಹೋದ ಪುರುಷ ಸದಸ್ಯರಿಂದ ಹಲವಾರು ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ವಲಸೆ ಹೋದ ಪುರುಷ ಸದಸ್ಯರಿಗೆ ಕುಟುಂಬದ ಮೌಲ್ಯ, ಸಂಪ್ರದಾಯಗಳ ಬಗೆಗೆ ಹೆಚ್ಚು ಕಾಳಜಿ ಇರುವುದರಿಂದ ಮಹಿಳೆಯರ ನಿರ್ಧಾರಗಳು ಕ್ಷುಲ್ಲಕವೆನಿಸುವುದು ಕಂಡುಬರುತ್ತದೆ.

**ಮೌಲ್ಯಗಳು**

ಗ್ರಾಂಶಿ "ಹೊಸ ಪರಿಸರದ ಮುಖಾಮುಖಿ ವ್ಯಕ್ತಿಯ ಮೌಲ್ಯ ವ್ಯವಸ್ಥೆಯನ್ನು ಬದಲಾವಣೆ ಮಾಡಲು ಇರುವ ಒಂದು ಸಾಧನ ಎಂದು ಹೇಳಿದ್ದಾರೆ" (ಗ್ರಾಂಶಿ ಎ., ೧೯೭೧, ಪು. ೪೨೬). ಜನ ಯಾವಾಗ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಕ್ಕೆ ವಲಸೆ ಹೋಗುತ್ತಾರೋ ಆಗ ವಲಸಿಗರನ್ನು ಅವರ ಸಮುದಾಯದಿಂದ ಗುರುತಿಸಲಾಗುತ್ತದೆ ಮತ್ತು ಅವರ ಕುಟುಂಬದ ಮೌಲ್ಯಗಳಿಂದ ಅವರ ಜೀವನದ ಪ್ರಾಮುಖ್ಯತೆಯನ್ನು ಗುರುತಿಸಲಾಗುತ್ತದೆ. ಜೊತೆಗೆ ಹಿರಿಯರು ಸಾಂಪ್ರದಾಯಿಕ ಕುಟುಂಬದ ನಿಯಂತ್ರಣವನ್ನು ಗ್ರಾಮೀಣ–ನಗರ ವಲಸೆ ಪ್ರಕ್ರಿಯೆಯು ಮುರಿಯುತ್ತದೆ ಎಂಬುದು ಹಿರಿಯರು ಅಭಿಪ್ರಾಯವಾಗಿದೆ. ಇನ್ನು ಕೆಲವರು ವಲಸೆಯಿಂದ ತಮ್ಮ ಜೀವನಶೈಲಿಯಲ್ಲಿ ಬದಲಾವಣೆಯಾಗಿದೆ ಎಂದಿರುವರು. ಕೆಲವು ಹಿರಿಯ ಪ್ರತಿಕ್ರಿಯೆದಾರರು 'ನಕಾರಾತ್ಮಕ

ಮತ್ತು ಅನಗತ್ಯವಾದ ನಗರ ಜೀವನವನ್ನು ವಲಸಿಗರು ಅನುಸರಿಸುತ್ತಿದ್ದಾರೆ ಎಂದು. ಅದನ್ನು ಅವರು ಸಾಮಾಜಿಕ ನಿಷ್ಕ್ರಿಯತೆ ಎಂದು ಹೇಳುತ್ತಾ ಹಳ್ಳಿಗಳಲ್ಲಿ ಅದು ಬೀರುತ್ತಿರುವ ಪರಿಣಾಮವನ್ನು ವಿವರಿಸುತ್ತಾರೆ. ಎಲ್ಲರೂ ನಗರದಲ್ಲಿಯೇ ನೆಲೆಸಬೇಕು ಎಂದು ಹೇಳುತ್ತಿರುವುದರಿಂದ ಗ್ರಾಮದಲ್ಲಿ ಕೆಲಸ ಮಾಡುವವರು ದೊರೆಯುತ್ತಿಲ್ಲ, ಅಲ್ಲದೆ ಕೃಷಿಯನ್ನು ಕನಿಷ್ಠ ಕೆಲಸವೆಂದು ಕಾಣುತ್ತಿದ್ದಾರೆ. ಯುವ ಜನರ ಕನಸು ನಗರದಲ್ಲಿ ವಾಸಿಸಬೇಕು ಎನ್ನುವುದಾಗಿರುತ್ತದೆ. ಇದರಿಂದ ಹಳ್ಳಿಗಳ ಮೇಲೆ ಮತ್ತು ವೈಯಕ್ತಿಕ ಜೀವನದಲ್ಲೂ ನಕಾರಾತ್ಮಕ ಪರಿಣಾಮ ಬೀರುತ್ತದೆ ಎನ್ನುವರು. ಪ್ರತಿಕ್ರಿಯೆದಾರರಲ್ಲಿ ಕೆಲ ವಲಸಿಗರು ನಗರ ಪ್ರದೇಶಕ್ಕೆ ಹೋಗುತ್ತಿರುವುದರಿಂದ ಅವರ ಮೇಲೆ ಸಾಂಪ್ರದಾಯಿಕ ಕುಟುಂಬದ ನಿಯಂತ್ರಣ ತಪ್ಪುತ್ತದೆ ಮತ್ತು ಸಂಬಂಧಗಳು ಸಹ ಸಡಿಲಗೊಳ್ಳುತ್ತಿವೆ. ಕೆಲವು ಸಂದರ್ಭಗಳಲ್ಲಿ ತಂದೆ–ತಾಯಂದಿರ ಮತ್ತು ಮಕ್ಕಳ ನಡುವೆ ಏನಾದರೂ ಭಿನ್ನಾಭಿಪ್ರಾಯಗಳು ಬಂದರೆ ಅವರ ಜೊತೆಗೆ ಮಾತನಾಡಿ ಭಿನ್ನಾಭಿಪ್ರಾಯಗಳನ್ನು ದೂರ ಮಾಡಿಕೊಳ್ಳುವುದಿಲ್ಲ, ಮಾತನಾಡುವುದನ್ನೇ ಬಿಟ್ಟುಬಿಡುತ್ತಾರೆ. ಆ ಮೂಲಕ ಅವರು ನಮ್ಮ ಜೊತೆ ಸಂಪರ್ಕವನ್ನೇ ಕಡಿದು ಹಾಕಿಕೊಳ್ಳುತ್ತಾರೆ. ಮೊದಲಿಗೆ ಕುಟುಂಬದ ಹಿರಿಯರು ಸಮಸ್ಯೆಗಳು ಎದುರಾದಲ್ಲಿ ಬಗೆಹರಿಸುತ್ತಿದ್ದರು. ಆದರೆ ಈಗ ಹಾಗಾಗುತ್ತಿಲ್ಲ. ಇದರಿಂದ ಹಿರಿಯರ ಪಾತ್ರ ಕಡಿಮೆಯಾಗುತ್ತಿದೆ ಎಂದಿರುವರು.

ಇನ್ನು ಕೆಲವು ಪ್ರತಿಕ್ರಿಯೆದಾರರು ವಲಸೆ ಹೋದ ಮಹಿಳೆ ಮತ್ತು ಪುರುಷರು ಯಾವುದೇ ಮುಚ್ಚು ಮರೆಯಿಲ್ಲದೆ ಮಾತನಾಡುವುದು ಇದೆ. ಅಸಭ್ಯವಾಗಿ ವರ್ತಿಸುವುದು ಇದೆ. ಅಲ್ಲದೆ ಗ್ರಾಮದಲ್ಲಿರುವ ಸ್ಥಳೀಯ ನಾಯಕರ ನಡೆಯನ್ನು, ನಾಯಕತ್ವವನ್ನು ಪ್ರಶ್ನಿಸುವುದು ಇದೆ ಎಂದಿರುವರು. ಇನ್ನೊಬ್ಬ ಪ್ರತಿಕ್ರಿಯೆದಾರರು ಮಕ್ಕಳು ಮತ್ತು ವಯಸ್ಸಿಗೆ ಬಂದವರು ನಗರದಲ್ಲಿ ವಾಸಿಸುತ್ತಿರುವುದರಿಂದ ಅವರಿಗೆ ಬುದ್ಧಿ ಬರುವುದಕ್ಕಿಂತ ಮೊದಲೇ ಅನೈತಿಕತೆಗೆ ಹೋಗುವ ಸಂಭವ ಹೆಚ್ಚು ಇದೆ. ನಮ್ಮ ಮೌಲ್ಯಗಳು ನಾಶವಾಗುತ್ತಿವೆ ಎನ್ನುತ್ತಾರೆ. ಕೇವಲ ಬೆರಣಿಕೆಯಷ್ಟು ಪ್ರತಿಕ್ರಿಯೆದಾರರು ಮಾತ್ರ ವಲಸಿಗರಲ್ಲಿ ಯಾವುದೇ ತೆರನಾದ ಮೌಲ್ಯಗಳಲ್ಲಿ ಬದಲಾವಣೆಗಳು ನಕಾರಾತ್ಮಕವಾಗಿ ಆಗಿಲ್ಲ ಎಂದಿರುವರು. ಆದರೆ ಕೆಲ ವಲಸಿಗರು ಸಾಂಸ್ಕೃತಿಕ ಮೌಲ್ಯಗಳ ಮೇಲೆ ನಕಾರಾತ್ಮಕ ಪರಿಣಾಮಗಳು ಆಗಿವೆ. ಇವು ವಲಸೆಯಿಂದ ಆದ ಪ್ರಯೋಜನಗಳನ್ನು ಮೀರಿಸುತ್ತವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ವಲಸೆಯನ್ನು 'ನಗರೀಕರಣ' ನೆಲೆಯಿಂದ ನೋಡುವುದಾದರೆ ವಲಸಿಗರು ನಗರ ಪ್ರದೇಶಗಳಿಗೆ ವಲಸೆ ಹೋದಾಗ ಅಲ್ಲಿಯ ಜೀವನ ಶೈಲಿ, ನಂಬಿಕೆ, ಆಚಾರ, ವಿಚಾರ, ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ನಗರೀಕರಣದ ಬದಲಾವಣೆಗಳು ನಡೆಯಬೇಕೆಂಬುದು ಅವರ ನಿರೀಕ್ಷೆಯಾಗಿದೆ. ಇದು ವಲಸಿಗರು ಜೀವನವನ್ನು ನೋಡುವ

ರೀತಿ, ಅವುಗಳನ್ನು ಬದಲಾವಣೆ ಎನ್ನಬಹುದು. ಆದರೆ ಗ್ರಾಮೀಣ-ನಗರ ವಲಸೆಯ ವಿಮರ್ಶಕರು ವಲಸಿಗರು 'ಗ್ರಾಮೀಣ ಸಂಸ್ಕೃತಿಯ ಪುರಾತನ ಉತ್ತಮವಾದ ಮೌಲ್ಯ'ವನ್ನು ಬಿಡುತ್ತಿದ್ದಾರೆ ಮತ್ತು 'ನಗರ ಕೆಟ್ಟ ಜೀವನಶೈಲಿ'ಯನ್ನು ಅಳವಡಿಸಿಕೊಳ್ಳುತ್ತಿದ್ದಾರೆ ಎಂದು ವಿಮರ್ಶಿಸಿರುವರು. ಇದು ಅತಾರ್ಕಿಕವಾದ. ಯಾವಾಗ ಹೊಸ-ಹೊಸ ಆಯ್ಕೆಗಳು ಇರುತ್ತವೆಯೋ ಆಗ ಬಹಳ ಜನರು ಒಳ್ಳೆಯ ಗುಣಗಳನ್ನು ಅಳವಡಿಸಿಕೊಳ್ಳುತ್ತಾರೆ ಮತ್ತು ಕೆಟ್ಟದನ್ನು ಬಿಡುತ್ತಾರೆ. ಸಾಮಾನ್ಯವಾಗಿ ಬದಲಾವಣೆ ಎಂದರೆ ಹಲವು ಆಯ್ಕೆಗಳು ಇರುತ್ತವೆ. ಅವುಗಳು ಸಣ್ಣವುಗಳಾಗಿರಬಹುದು, ಸ್ಥಿರವಾಗಿರಬಹುದು. ಈ ಮಧ್ಯೆ ಮನೆಯಲ್ಲಿ ಒಳ್ಳೆಯ ಅಥವಾ ಕೆಟ್ಟ ಘಟನೆಗಳು ಜರುಗಿದಾಗ ವಲಸಿಗರು ಭಾಗಿಯಾಗುತ್ತಾರೆ. ವಲಸಿಗರಿಗೆ ಬಿಡುವಾದಾಗ ಮನೆಗೆ ಭೇಟಿ ನೀಡುತ್ತಾರೆ. ತಂದೆ-ತಾಯಂದಿರನ್ನು ಸಂಬಂಧಿಕರನ್ನು ವಿಚಾರಿಸುತ್ತಾರೆ. ಅವರ ಕಷ್ಟ-ಸುಖಗಳಲ್ಲಿ ಭಾಗಿಯಾಗುತ್ತಾರೆ. ಇದರಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ವಲಸಿಗರು ಹೊಸ ಪರಿಸರಕ್ಕೆ ಒಡ್ಡಿಕೊಳ್ಳುವುದರಿಂದ ವಲಸಿಗರ ಮೇಲಾಗುವ ಬದಲಾವಣೆಗಳು ಅವರಲ್ಲಿ ಮಾತ್ರವಲ್ಲದೆ ಮೂಲಸ್ಥಾನದಲ್ಲಿರುವವರ ಮೇಲೆಯೂ ಆಗುತ್ತವೆ. ಅದು ಲಿಂಗಸಂಬಂಧಿ ನೆಲೆಯಲ್ಲಿಯೂ ನಡೆಯುತ್ತವೆ. ವಲಸಿಗರು ನಗರ ಮತ್ತು ಗ್ರಾಮೀಣ ಭಾಗದ ಸಂಸ್ಕೃತಿ, ಚಿಂತನೆ, ಮೌಲ್ಯಗಳನ್ನು ಸಂಯೋಜಿಸುವುದರಿಂದ ಲಿಂಗಸಂಬಂಧಿ ಚಿಂತನೆಗಳಲ್ಲಿ ಪರಿಷ್ಕರಣೆಗಳು ನಡೆಯುತ್ತವೆ. ಅವನ್ನು ಎದ್ದು ಕಾಣುವ ಸ್ವರೂಪದಲ್ಲಿ ಕಾಣದಿದ್ದರೂ ಮನಸ್ಸಿನಲ್ಲೂ ಅನುಭವಿಸಬಹುದಾದ ಸಂಗತಿಗಳಾಗಿವೆ.

**ವೈವಾಹಿಕ ಸಂಬಂಧಗಳು**

ಅಧ್ಯಯನದಲ್ಲಿ ವಯಸ್ಸಿಗೆ ಬಂದ ಗಂಡಸರು ಅಧಿಕ ಸಂಖ್ಯೆಯಲ್ಲಿ ನಗರ ಪ್ರದೇಶಕ್ಕೆ ವಲಸೆ ಹೋಗುತ್ತಿರುವುದರಿಂದ ಗ್ರಾಮಿಣ ಪ್ರದೇಶದ ವಿವಾಹ ಮಾರುಕಟ್ಟೆಯಲ್ಲಿ ಅಸಮತೋಲನ ಉಂಟಾಗಿರುವುದು ಇದೆ. ಈ ಬಗ್ಗೆ ಒಬ್ಬ ಹರೆಯದ ಯುವತಿ ಹೇಳುವುದೇನೆಂದರೆ "ನಮ್ಮ ತಂದೆ-ತಾಯಿ ನಮಗೆ ವಯಸ್ಸಾಗಿದೆ ಬೇಗನೆ ನಿನ್ನ ಮದುವೆ ಮಾಡಬೇಕು. ಆದರೆ ನಮಗೆ ಒಳ್ಳೆಯ ಗಂಡು ಸಿಗುತ್ತಿಲ್ಲ, ಏಕೆಂದರೆ ಸೂಕ್ತ ಪುರುಷರೆಲ್ಲರೂ ನಗರ ಪ್ರದೇಶಕ್ಕೆ ವಲಸೆ ಹೋಗಿದ್ದಾರೆ. ಯಾರು ಗ್ರಾಮದಲ್ಲಿ ಇರುವರೋ ಅವರು 'ಒಳ್ಳೆಯವರು ಅಲ್ಲ' ಮತ್ತು ಅವರು ಜವಾಬ್ದಾರಿ ಇರುವರಲ್ಲ. ಅವರು ಹೆಣ್ಣುಮಕ್ಕಳನ್ನು ಮದುವೆಯಾಗುತ್ತಾರೆ ಅಷ್ಟೇ ಹೊರತು ಹೆಂಡತಿ, ಮಕ್ಕಳನ್ನು ಜವಾಬ್ದಾರಿಯಿಂದ ನೋಡಿಕೊಳ್ಳುವುದಿಲ್ಲ. ಅಂತಹವರಿಗೆ ಕೊಟ್ಟು ನಾವು ಹೇಗೆ ಮದುವೆ ಮಾಡುವುದು, ಅವರಿಗೆ ಒಳ್ಳೆಯ ಕೆಲಸವೂ ಇಲ್ಲ, ಪ್ರತಿದಿನವೂ ದುಡಿಯುವುದಿಲ್ಲ. ಇಂತಹವರನ್ನು ನೀನು ಮದುವೆಯಾಗುವುದಾದರೂ ಹೇಗೆ? ಎಂದು ದುಃಖದಿಂದ ಹೇಳುತ್ತಾ, ಕೆಲವು ಸಲ ನಮಗೆ ಅಂತಹವರನ್ನೇ ಮದುವೆಯಾಗಬೇಕೆಂದು ಒತ್ತಾಯವನ್ನು ಮಾಡುತ್ತಾರೆ. ಅಂತಹ

ಸಂದರ್ಭಗಳಿಗೆ ನಾವು ತಯಾರಾಗಿರುವುದಿಲ್ಲ. ಆಗ ಮನೆಯಲ್ಲಿ ಜಗಳಗಳು ನಡೆಯುತ್ತವೆ" ಎಂದಿರುವರು.

ಇದನ್ನು ಸಮರ್ಥಿಸುವಂತೆಯೇ ಪ್ರತಿಕ್ರಿಯೆದಾರರಲ್ಲಿ ಕೆಲವರು ಮದುವೆಯ ವಯಸ್ಸು ಹೆಚ್ಚಾಗುತ್ತಿರುವುದನ್ನು ಹೇಳಿದ್ದಾರೆ. ಇನ್ನು ಕೆಲವರು ನಗರ ಪ್ರದೇಶದಲ್ಲಿ ವಾಸಿಸುವವರು ಮೂಲಭೂತ ಸೌಕರ್ಯಗಳನ್ನು ಮೊದಲು ಮಾಡಿಕೊಳ್ಳಲು ಬಯಸುತ್ತಾರೆ. ವಾಸಿಸಲು ನೆಲೆ, ಪೀಠೋಪಕರಣಗಳು, ಅಡುಗೆ ಮಾಡುವ ಸಾಮಾನುಗಳು ಮತ್ತು ಸಾಮಗ್ರಿಗಳು, ಇನ್ನಿತರ ವಸ್ತುಗಳನ್ನು ಮದುವೆಯ ಪೂರ್ವದಲ್ಲಿಯೇ ತೆಗೆದುಕೊಂಡು ಮದುವೆಯಾಗಲು ಬಯಸುತ್ತಾರೆ ಎನ್ನುತ್ತಾರೆ. ಮತ್ತೆ ಕೆಲವರು ಯಾವ ಗಂಡಸರು ಹೆಚ್ಚು ಸಮಯ ತಮ್ಮ ಹೆಂಡತಿಯಿಂದ, ಮನೆಯಿಂದ ದೂರ ಉಳಿಯುತ್ತಾರೋ ಅಂತವರ ಮದುವೆ ಮುರಿದು ಬಿದ್ದಿರುವ ಉದಾಹರಣೆಗಳು ಇವೆ. ಆದರೂ ಸಹ ವಲಸೆ ಹೋದವರಲ್ಲಿ ವಿಚ್ಛೇದನ ಸ್ವಲ್ಪ ಕಡಿಮೆಯೇ. ವಲಸೆ ಹೋದವರ ಕೆಲವು ಹೆಂಡತಿಯರು ಹೇಳುವುದೇನೆಂದರೆ ನಮ್ಮ ಗಂಡಂದಿರು ನಮ್ಮಿಂದ ದೂರವಿರುವ ನಗರದಲ್ಲಿ ವಾಸಿಸುವುದು ನಾವು ಈ ಹಳ್ಳಿಗಳಲ್ಲಿ ವಾಸಿಸುತ್ತಿರುವುದರಿಂದ ನಮ್ಮ ವಿವಾಹಗಳು ಅನಿಶ್ಚಿತತೆಯಿಂದ ಕೂಡಿರುತ್ತವೆ, ಯಾವಾಗ ಏನು ಬೇಕಾದರೂ ಆಗಬಹುದು ಎಂದೇ ನಾವು ಅಂದುಕೊಳ್ಳುತ್ತೇವೆ. ಹಾಗೆಯೇ ಇನ್ನೂ ಕೆಲವರು ಹೆಂಡತಿಯರಿಗೆ ಮತ್ತು ಮಕ್ಕಳಿಗೆ ಆರ್ಥಿಕ ಭದ್ರತೆಯನ್ನು ಒದಗಿಸುತ್ತಾರೆ ಮತ್ತು ಸಮಾಜದಲ್ಲಿ ಗೌರವವನ್ನು ನೀಡುತ್ತಾರೆ ಎನ್ನುವರು.

ವಲಸೆ ಹೋದ ಪ್ರದೇಶದಲ್ಲಿ ಗಂಡ-ಹೆಂಡತಿ ಬಹಳ ದಿನಗಳಿಂದ ದೂರವಿರುವುದು ಅವರ ಲೈಂಗಿಕ ನಿಗ್ರಹಕ್ಕೆ ದಾರಿ ಮಾಡಿಕೊಡುತ್ತದೆ ಎನ್ನುವ ಭಾವನೆಯಿದೆ. ಕೆಲವು ಹಳ್ಳಿಗಳಲ್ಲಿ ವಲಸಿಗರಿಗೆ ಸಾಮಾನ್ಯವಾಗಿ ೨-೩ ಮಕ್ಕಳು ಇದ್ದೇ ಇರುತ್ತಾರೆ. ಇದರಿಂದ ಫಲವತ್ತತೆ ದರ ಕಡಿಮೆಯಾಗಿದೆ ಎನ್ನಲಾಗುವುದಿಲ್ಲ. ವಲಸೆ ಹೋದವರಲ್ಲಿ ಸಾಮಾನ್ಯವಾಗಿ ತಿಳುವಳಿಕೆ ಮಟ್ಟ ಅಧಿಕವಾಗುತ್ತಿದೆ. ಅವರ ಆರ್ಥಿಕ ಪರಿಸ್ಥಿಯ ಜೊತೆಗೆ ನಗರ ಪ್ರದೇಶದ ಪರಿಸರ ಪ್ರಭಾವದಿಂದ ಫಲವತ್ತತೆ ದರ ಕಡಿಮೆ ಆಗುತ್ತದೆ. ವಲಸೆ ಹೋದವರಿಗೆ ಕುಟುಂಬ ಯೋಜನಾ ಪದ್ಧತಿಗಳ ಬಗೆಗೆ ಅರಿವು ಇರುತ್ತದೆ. ಇದರಿಂದಾಗಿಯೂ ಸಹ ಫಲವತ್ತತೆ ಕಡಿಮೆಯಾಗಿದೆ ಮತ್ತು ಕುಟುಂಬದ ಗಾತ್ರ ಕಡಿಮೆ ಆಗಿದೆ ಎನ್ನಬಹುದು.

**ಸಾಮಾಜಿಕ ಸ್ಥಾನಮಾನ**

ವಲಸೆ ಹೋದ ಕುಟುಂಬದ ಸದಸ್ಯರು ಸಾಮಾಜಿಕವಾಗಿ ಉತ್ತಮವಾದ ಸ್ಥಾನಮಾನವನ್ನು ಹೊಂದಿರುತ್ತಾರೆ. ಏಕೆಂದರೆ ವಲಸಿಗರು ಹೆಚ್ಚು ದುಡಿಮೆ ಮಾಡುತ್ತಾರೆ ಮತ್ತು ಮನೆಗೆ ಹಣ ರವಾನಿಸುತ್ತಾರೆ ಎಂಬುದರ ಮೇಲೆಯೇ ವಲಸಿಗರ ಕುಟುಂಬದ ಸಾಮಾಜಿಕ ಸ್ಥಾನಮಾನವು ನಿರ್ಣಯವಾಗುತ್ತದೆ. ವಲಸಿಗರ ಸಾಮಾಜಿಕ ಗೌರವ ಯಾವಾಗ

ಹೆಚ್ಚಾಗುತ್ತದೆ ಅಂದರೆ ಅವರ ಗ್ರಾಮಗಳಲ್ಲಿ ಅವರ ಸಂಬಂಧಿಕರು ನಗರ ಪ್ರದೇಶದಲ್ಲಿ ಅಥವಾ ಹೊರ ರಾಜ್ಯ ಅಥವಾ ದೇಶದಲ್ಲಿ ವಾಸಿಸುತ್ತಾರೆ ಎಂದು ಹೇಳಿದಾಗ ಗ್ರಾಮೀಣ ಪ್ರದೇಶದಲ್ಲಿ ನೀಡುವ ಗೌರವ ಭಿನ್ನವಾಗಿರುತ್ತದೆ. ಅದು ಅಲ್ಲಿಯೇ ವಾಸಿಸುವ ಜನರಿಗಿಂತ ಹೆಚ್ಚಾಗಿರುತ್ತದೆ. ಸಾಮಾಜಿಕ ಕಾರ್ಯಕ್ರಮಗಳಿಗಾಗಿ ವಲಸೆ ಹೋದ ಜನರು ಗ್ರಾಮಗಳಿಗೆ ಬಂದಾಗ ಗ್ರಾಮಸ್ಥರು ವಿಸ್ಮಯದಿಂದ ನೋಡುತ್ತಾರೆ. ಮತ್ತೆ ಕೆಲವರು ಜನರು ಹೊಗಳಿಕೆಯಿಂದ ಮತ್ತು ಅಸೂಯೆಯಿಂದ ಮಾತನಾಡುತ್ತಾರೆ. ಕೆಲವು ಕುಟುಂಬಗಳ ಮುಖ್ಯಸ್ಥರು ಹೇಳುವುದೇನೆಂದರೆ ಕುಟುಂಬಗಳ ಸಾಮಾಜಿಕ ಸ್ಥಾನಮಾನ ಯಾವಾಗ ಕಡಿಮೆಯಾಗುತ್ತದೆ ಎಂದರೆ ವಲಸೆ ಹೋದವರು ಕಡಿಮೆ ಹಣವನ್ನು ಕಳುಹಿಸುತ್ತಿದ್ದಾಗ ಅಥವಾ ಹಣವನ್ನು ಕಳಿಸದೇ ಇದ್ದಾಗ. ಆಗ ಗ್ರಾಮಸ್ಥರು ಅಥವಾ ಜನರು ಗೌರವದಿಂದ ನೋಡುವುದಿಲ್ಲ, ಕೀಳಾಗಿ ಕಾಣುತ್ತಾರೆ, ಒಬ್ಬ ವಕ್ತೃ ಹೇಳುವುದೇನೆಂದರೆ "ಯಾವಾಗ ಮನೆಯ ಮಕ್ಕಳು ವಲಸೆ ಹೋಗುತ್ತಾರೋ ಆಗ ಸಮುದಾಯದವರ ನಿರೀಕ್ಷೆ ಗ್ರಾಮದಲ್ಲಿರುವ ತಮ್ಮ ಮನೆಗಳಿಗೆ ಹಣವನ್ನು ಕಳುಹಿಸಬೇಕು, ಗ್ರಾಮದಲ್ಲಿರುವ ನಮ್ಮ ಮನೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಬೇಕು ಎಂದು. ಆದರೆ ಯಾವಾಗ ವಲಸೆ ಹೋದ ಮಕ್ಕಳು ಹಣವನ್ನು ರವಾನಿಸುವುದಿಲ್ಲವೋ ಆಗ ಮನೆಯ ಪರಿಸ್ಥಿತಿಯಲ್ಲಿ ಯಾವುದೇ ಸುಧಾರಣೆಗಳು ಆಗುವುದಿಲ್ಲ. ಆಗ ಗ್ರಾಮಸ್ಥರು ಅಪಹಾಸ್ಯ ಮಾಡುತ್ತಾರೆ ಎಂದಿರುವರು."

**೫.೬. ಸಮುದಾಯ**

ಕುಟುಂಬಗಳ ಸರ್ವೆಯಲ್ಲಿ ಶೇಕಡ ೯೪ರಷ್ಟು ವಲಸೆಯಿಂದ ಸಕಾರಾತ್ಮಕ ಪರಿಣಾಮಗಳು ಸಮುದಾಯ ಮಟ್ಟದಲ್ಲಿ ಉಂಟಾಗುತ್ತವೆ ಎಂದು, ಶೇಕಡ ೬ರಷ್ಟು ಕುಟುಂಬಗಳು ವಲಸೆಯಿಂದ ನಕಾರಾತ್ಮಕ ಪರಿಣಾಮಗಳು ಸಮುದಾಯದ ಮೇಲಾಗುತ್ತವೆ ಎಂದು ಹೇಳಿದ್ದಾರೆ.

ವಲಸೆಯಿಂದ ಆದ ಸಕಾರಾತ್ಮಕ ಪರಿಣಾಮಗಳನ್ನು ನೋಡುವುದಾದರೆ ಮನೆಗೆ ಹಣಕಾಸಿನ ಕೊಡುಗೆ ಮತ್ತು ನಗರಗಳಲ್ಲಿನ ತಮ್ಮ ಸಮುದಾಯದ ಸಂಘಗಳಿಗೆ ದೇಣಿಗೆಯನ್ನು ನೀಡುವುದರ ಮೂಲಕ ಸಮುದಾಯ ಅಭಿವೃದ್ಧಿ ಯೋಜನೆಗಳಿಗೆ ಬೆಂಬಲ ನೀಡುವರು. ಇನ್ನು ಕೆಲವರು ವಲಸೆ ಹೋದವರು ನಗರಗಳ ಆಧುನಿಕತೆಗೆ ತೆರೆದುಕೊಳ್ಳುತ್ತಾರೆ, ಹೊಸ-ಹೊಸ ಮಾಹಿತಿಗಳನ್ನು ಪಡೆದುಕೊಳ್ಳುತ್ತಾರೆ. ಇದರಿಂದ ಅವರ ಸಮುದಾಯದ ಅಭಿವೃದ್ಧಿಯಾಗುತ್ತದೆ ಎಂದು ಹೇಳಿದ್ದಾರೆ. ಕೆಲವು ಸಮುದಾಯದ ಸದಸ್ಯರು ವೈಯಕ್ತಿಕವಾಗಿ ಅಥವಾ ಕುಟುಂಬಕ್ಕಾಗಿ ಬಂಡವಾಳವನ್ನು ವಲಸಿಗರು ಹೂಡುತ್ತಾರೆ. ಇದರಿಂದ ಸಮುದಾಯದ ಸದಸ್ಯರಿಗೆ ಉದ್ಯೋಗ ದೊರೆಯುತ್ತದೆ ಮತ್ತು ಗ್ರಾಮದ ಸ್ಥಾನಮಾನವು ವೃದ್ಧಿಯಾಗುತ್ತದೆ ಎನ್ನುವರು. ಇದನ್ನು ಒಬ್ಬರ ವಿವರಣೆಯು

ಸಾಕ್ಷೀಕರಿಸುತ್ತದೆ. "ನೀವು ಈ ಕುಟುಂಬದ ಮನೆಯನ್ನು ನೋಡಿದ್ದಿರಾ? ಇದನ್ನು ನನ್ನ ತಂದೆ ಹಲವಾರು ವರ್ಷಗಳ ಹಿಂದೆ ಕಟ್ಟಿಸಿದ್ದರು. ಆಗ ಅವರು ಮಣ್ಣಿನ ಇಟ್ಟಿಗೆಗಳನ್ನು ಬಳಸಿ ಕಟ್ಟಿ ಸಿಮೆಂಟ್‌ನಿಂದ ಪ್ಲಾಸ್ಟರ್ ಮಾಡಿಸಿದ್ದರು. ಆದರೆ ಈಗ ಮಳೆಯಿಂದಾಗಿ ಅಡಿಪಾಯ ಕುಸಿದು, ಮನೆಯ ಒಂದು ಭಾಗ ಬಿದ್ದು ಹೋಗಿದೆ. ಯಾರು ಮನೆಯಲ್ಲಿ ಇಲ್ಲದ ಸಮಯದಲ್ಲಿ ಹೀಗಾಗಿದೆ, ದೇವರು ದೊಡ್ಡವನು, ಅವನು ನಮ್ಮೆಲ್ಲರನ್ನು ಉಳಿಸಿದ್ದಾನೆ. ಸಿಟಿಯಲ್ಲಿ ಕೆಲಸ ಮಾಡುತ್ತಿರುವ ನನ್ನ ಮಗ ಲೋನ್ ಮಾಡಿ ಮನೆಯನ್ನು ಸರಿಯಾಗಿ ಕಟ್ಟಿಸಲು ನಿಧಾನವಾಗಿ ಸಹಾಯ ಮಾಡಿದ. ಇದರಿಂದ ಗ್ರಾಮದಲ್ಲಿ ಕಲ್ಲು ಒಡೆಯುವವನಿಗೆ, ಬಡಿಗನಿಗೆ, ಗಾರೆ ಕೆಲಸದವರಿಗೆ ಕೆಲಸ ದೊರೆಯಿತು. ಈಗ ನಮ್ಮ ಮನೆಯ ಚಿತ್ರಣವೇ ಬದಲಾಯಿತು. ಈಗ ಮನೆಯಲ್ಲಿ ಆರಾಮವಾಗಿ ಮಲಗಿಕೊಳ್ಳಬಹುದು, ಯಾವುದೇ ಭಯವಿಲ್ಲದೆ, ಗ್ರಾಮದಲ್ಲಿ ಜನರು ನಮ್ಮದು ಸಿಮೆಂಟ್‌ನ ಮನೆಯೆಂದು ಗೌರವ ನೀಡುತ್ತಾರೆ. ನನಗೆ ಗೌರವ ನೀಡುವುದು ಸಂತೋಷವೆನಿಸುತ್ತದೆ" ಎಂದು ಅಭಿಪ್ರಾಯ ಪಡುತ್ತಾರೆ.

ಕಾಲ್ವೆಲ್ ಅವರು ಹೇಳಿರುವಂತೆ "ವಲಸೆ ಸಕಾರಾತ್ಮಕ ಪರಿಣಾಮಗಳಲ್ಲಿ ಆರ್ಥಿಕತೆಯ ಅಭಿವೃದ್ಧಿ ಇರುವಲ್ಲಿ ಬಂಡವಾಳ ಹೂಡಿಕೆಗೆ ಅನುವು ಮಾಡಿಕೊಡುತ್ತದೆ, ಅಲ್ಲದೆ ಹೆಚ್ಚು ಅಪಾಯಗಳಿಲ್ಲದ ಜೀವನಕ್ಕೆ ದಾರಿ ಮಾಡಿಕೊಡುತ್ತದೆ ಎಂದಿರುವರು" (ಉಧೃತ: ಜೆ. ಎ. ಜಾಕ್ಸನ್ (ಇಡಿ), ೧೯೬೯, ಪು. ೩೧೮). ಇದೇ ತೆರನಾದ ಸಂಗತಿಗಳು ಈ ಪ್ರದೇಶದಲ್ಲಿಯೂ ಕಂಡುಬರುತ್ತವೆ. ಈ ಪ್ರದೇಶದಲ್ಲಿ ಸರಿಯಾಗಿ ಕೆಲಸ ಮಾಡುವವರು ಗ್ರಾಮ ಬಿಟ್ಟು ಅನತಿ ದೂರದ ನಗರ ಪ್ರದೇಶದಲ್ಲಿ ಇರುವುದರಿಂದ ಸಮುದಾಯ ಅಭಿವೃದ್ಧಿ ಯೋಜನೆಗಳು ಯಶಸ್ವಿಯಾಗಲು ಸಾಧ್ಯವಾಗುತ್ತಿಲ್ಲ ಎಂದು ಕೆಲವರು ಹೇಳಿದ್ದಾರೆ. ಇನ್ನು ಹಲವರು ಗ್ರಾಮ ಹೆಚ್ಚು ಅಭಿವೃದ್ಧಿ ಹೊಂದಿದರೆ ಕಡಿಮೆ ಜನರು ವಲಸೆ ಹೋಗುತ್ತಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಗ್ರಾಮದಲ್ಲಿ ಎಲ್ಲ ಮೂಲಭೂತ ಸೌಲಭ್ಯಗಳು ದೊರೆತರೆ, ಉದ್ಯೋಗ ದೊರಕಿದರೆ ಜನರು ವಲಸೆ ಹೋಗುವುದು ತಪ್ಪುತ್ತದೆ. ಆದರೆ ಯುವಜನರು ನಿರುದ್ಯೋಗಿಗಳಾದಾಗ, ಅಪರಾಧ ಪ್ರಕರಣಗಳು ಹೆಚ್ಚಾದಾಗ, ಮೂಲಭೂತ ಸೌಲಭ್ಯಗಳ ಕೊರತೆಯಾದಾಗ, ವಲಸೆ ಹೋಗದೇ ಇದ್ದರೆ ಹಸಿವಿನಿಂದ ಸಾಯುವುದು ಅನಿವಾರ್ಯವಾಗುತ್ತದೆ ಎಂದಿರುವರು.

ಹೀಗೆ ವಲಸೆ ಹೋದವರಲ್ಲಿ ಎಲ್ಲರೂ ಸಮುದಾಯ ಅಭಿವೃದ್ಧಿಗೆ ಸಹಾಯ ಮಾಡಿದ್ದಾರೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ವಲಸೆ ಹೋದ ನೂರು ಜನರಲ್ಲಿ ಇಬ್ಬರು ಅಥವಾ ಮೂವರು ಮಾತ್ರ ಸಮುದಾಯ ಅಭಿವೃದ್ಧಿಗೆ ಸಹಾಯ ಮಾಡುತ್ತಾರೆ. ವಲಸೆ ಹೋಗಿ ನಗರದಲ್ಲಿ ತುಂಬಾ ವ್ಯವಸ್ಥಿತವಾಗಿ ಮನೆ ಕಟ್ಟಿಸಿಕೊಂಡು ನೆಲೆಸಿರುವ ಕುಟುಂಬದವರು ಪ್ರಾಥಮಿಕ ಶಾಲೆಯ ಮಕ್ಕಳಿಗೆ ಕುಡಿಯಲು ನೀರಿನ ಸೌಲಭ್ಯ ಮತ್ತು

ಶಾಲೆಗೆ ಸಹಾಯ ಮಾಡಿದ್ದಾರೆ. ಅಲ್ಲದೆ ಇನ್ನೊಬ್ಬ ವಲಸೆ ಹೋದವರು ದೇವರ ಗುಡಿ ಕಟ್ಟಲು ಹಣದ ಸಹಾಯ ಮಾಡಿದ್ದಾರೆ. ಹೀಗೆ ವಲಸೆ ಹೋದವರು ಸಮುದಾಯ ಅಭಿವೃದ್ಧಿಗೆ ತಮ್ಮ ಕೈಯಲ್ಲಾದ ಸಹಾಯ ಮಾಡಿದ್ದಾರೆ ಎಂದು ಹೇಳಬಹುದು.

ವಲಸೆಯಿಂದ ಆಗುತ್ತಿರುವ ನಕಾರಾತ್ಮಕ ಪರಿಣಾಮಗಳ ಕುರಿತು ಕೆಲವೇ ಜನರು ಹೀಗೆ ಹೇಳಿದರೂ ಅಂದರೆ ಗ್ರಾಮದ ಸಾಮಾಜಿಕ ಅಭಿವೃದ್ಧಿ, ಕೃಷಿಯ ಸುಸ್ಥಿರ ಅಭಿವೃದ್ಧಿ ಮತ್ತು ಆಹಾರ ಭದ್ರತೆಯ ಮೇಲೆ ನಕಾರಾತ್ಮಕ ಪರಿಣಾಮವುಂಟಾಗುತ್ತದೆ. ಗ್ರಾಮ ನಿವಾಸಿಗಳಲ್ಲಿ ಗ್ರಾಮವೆಂದರೆ ಸಾಕಾಗುವಷ್ಟು ಆಹಾರ, ಕುಟುಂಬದ ಪರಸ್ಪರ ಸಂಬಂಧಗಳಿಗೆ ಭದ್ರತೆ ಇರುವುದು. ಶಾಂತಿಯಿಂದ ನೆಲೆಸುವುದು ಅದೇ ತೆರನಾಗಿ ನಗರ ವೆಂದರೆ ಹೆಚ್ಚು ಶಿಕ್ಷಿತರು ಮತ್ತು ಹೆಚ್ಚು ಆದಾಯವನ್ನು ಹೊಂದಿದ ಉದ್ಯೋಗವನ್ನು ಹೊಂದಿರುವವರು ಮತ್ತು ಹೆಚ್ಚು ರಿಸ್ಕ್/ಅಪಾಯವನ್ನು ಹೊಂದಿದವರು ಎಂಬ ಭಾವನೆ ಗ್ರಾಮದವರಲ್ಲಿದೆ ಎನ್ನುತ್ತಾರೆ.

**ಸಮುದಾಯದ ಸದಸ್ಯರ ನಿರೀಕ್ಷೆಗಳು**

ಸಮುದಾಯದ ಸದಸ್ಯರು ಗ್ರಾಮದಲ್ಲಿ ಉದ್ಯೋಗದ ಅವಕಾಶಗಳು ಲಭ್ಯವಾಗಬೇಕು. ಮಹಿಳೆ ಮತ್ತು ಪುರುಷರಿಬ್ಬರು ಆದಾಯವನ್ನು ಗಳಿಸುವಂತಹ ಅವಕಾಶಗಳು ಬರಬೇಕು. ಆಗ ಗ್ರಾಮ ಮತ್ತು ಗ್ರಾಮದ ಜನರು ಸುಸ್ಥಿರವಾಗಿರಲು ಸಾಧ್ಯವಾಗುತ್ತದೆ. ಮಹಿಳೆ ಮತ್ತು ಪುರುಷರಿಬ್ಬರು ಸಣ್ಣ ಪುಟ್ಟ ವ್ಯಾಪಾರ ವ್ಯವಹಾರದಲ್ಲಿಯೂ ಸಹ ತೊಡಗಿಕೊಳ್ಳಲು ಅವಕಾಶ ಬೇಕು. ಆಗ ಜೀವನ ನಡೆಸಲು ಸರಳವಾಗುತ್ತದೆ. ಹಾಗೆಯೇ ಗ್ರಾಮದಲ್ಲಿಯೇ ಆರೋಗ್ಯ, ಕುಡಿಯುವ ನೀರಿನ ಸೌಕರ್ಯ, ಉತ್ತಮವಾದ ರಸ್ತೆ, ಕೆಲಸ ಮಾಡಲು ಕೆಲಸ ದೊರಕುವಂತಿರಬೇಕು ಎಂದಿರುವರು. ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯ ಬಗೆಗೆ ಕೇಳಿದಾಗ ಸರ್ಕಾರ ಯೋಜನೆಗಳು ಅಷ್ಟು ಸರಳವಾಗಿ ಅನುಷ್ಠಾನ ಆಗುವುದಿಲ್ಲ. ಅಲ್ಲದೆ ಸರ್ಕಾರದ ಕೂಲಿಗಿಂತ ಹೊರಗೆ ದುಡಿದರೆ ಉತ್ತಮ ಕೂಲಿ ದೊರೆಯುತ್ತದೆ ಎಂಬ ಯೋಚನೆ ಅವರಲ್ಲಿ ಮನೆ ಮಾಡಿದೆ.

ಒಟ್ಟಿನಲ್ಲಿ ಈ ಪ್ರದೇಶದಲ್ಲಿ ವಲಸೆಯ ಕೆಲವು ವಿಶೇಷ ಲಕ್ಷಣಗಳನ್ನು ಗುರುತಿಸಬಹುದು. ಅದರಲ್ಲಿ ಸಾಮಾನ್ಯವಾಗಿ ಈ ಭಾಗದ ಬಡಜನರು ನಗರ ಪ್ರದೇಶಕ್ಕೆ ವಲಸೆ ಹೋಗುವುದು ಬಡತನದ ಕಾರಣಕ್ಕಾಗಿ ಮತ್ತು ಆರ್ಥಿಕ ಅನನುಕೂಲತೆ ಅಥವಾ ಹತಾಶೆಯಿಂದ ಎನ್ನಬಹುದು. ಶಿಕ್ಷಣ ಪಡೆದ ಜನರು ಔಪಚಾರಿಕ ವಲಯದಲ್ಲಿ ಕೆಲಸವನ್ನು ಕಂಡುಕೊಂಡರೆ, ಶಿಕ್ಷಣವನ್ನು ಪಡೆಯದೇ ಇರುವವರು, ಕೌಶಲ್ಯವನ್ನು ಹೊಂದಿದವರು ಅನೌಪಚಾರಿಕ ವಲಯದಲ್ಲಿ ಕೆಲಸ ಹುಡುಕಿಕೊಳ್ಳಲು ಪ್ರಾರಂಭಿಸುತ್ತಾರೆ ಮತ್ತು ಅನಿವಾರ್ಯವಾಗಿ ಕೊಳಚೆ ಪ್ರದೇಶಗಳಲ್ಲಿ, ನೆಲೆ ನಿಲ್ಲಲು ಪ್ರಾರಂಭಿಸುತ್ತಾರೆ. ವಲಸೆ ಹೋದ

ಹಲವರು ಗ್ರಾಮಗಳಲ್ಲಿರುವ ತಮ್ಮ ಕುಟುಂಬಕ್ಕೆ ಹಣವನ್ನು ಕುಟುಂಬದ ಉಪಯೋಗಕ್ಕಾಗಿ ಕಳುಹಿಸುತ್ತಾ ಇದ್ದಾರೆ. ಈ ಪ್ರದೇಶದಲ್ಲಿ ವಲಸೆ ಹೋದವರು ಮತ್ತು ವಲಸೆ ಹೋಗದ ಕುಟುಂಬಗಳನ್ನು ತುಲನಾತ್ಮಕವಾಗಿ ನೋಡಿದಾಗ ವಲಸೆ ಹೋದ ಕುಟುಂಬಗಳ ಬಡತನ ಸ್ವಲ್ಪಮಟ್ಟಿಗೆ ಕಡಿಮೆ ಆಗಿದೆ ಎನ್ನಬಹುದು.

ಈ ಅಧ್ಯಾಯದಲ್ಲಿ ಕಂಡುಬಂದ ಮತ್ತೊಂದು ಅಂಶವೆಂದರೆ ಕೃಷಿಯ ಉತ್ಪಾದನೆಯಲ್ಲಿ ಕುಸಿತಗೊಂಡಿರುವುದು. ಏಕೆಂದರೆ ಕೃಷಿ ಮಾಡಬೇಕಾದ ಸಮರ್ಥರು ನಗರಗಳಿಗೆ ವಲಸೆ ಹೋಗುವುದರಿಂದ ಕುಟುಂಬದ ಆಹಾರ ಪೂರೈಕೆ ಮತ್ತು ಭದ್ರತೆಯ ಮೇಲೆ ನಕಾರಾತ್ಮಕ ಪರಿಣಾಮವಾಗುತ್ತದೆ. ಲಾಭವನ್ನು ನಂಬಿರುವವರಿಗೆ ವಲಸೆಯು ಪ್ರಯೋಜನವಾಗುತ್ತದೆ, ಅಂದರೆ ಅವರ ಕುಟುಂಬಗಳಿಗೆ ಮತ್ತು ಸಮುದಾಯಕ್ಕೆ ಅವರು ಸ್ಥಿರವಾಗಿ ಹಣವನ್ನು ರವಾನಿಸುತ್ತಿರುವುದರಿಂದ ಪ್ರಯೋಜನವಾಗುತ್ತದೆ. ಇದರ ಇನ್ನೊಂದು ಮಗ್ಗಲಿನಲ್ಲಿ ವಲಸೆಯನ್ನು ವೈಯಕ್ತಿಕ ಲಾಭ ಮತ್ತು ಸಾಮಾಜಿಕ ನಷ್ಟವೆಂದು ಕರೆಯುತ್ತಾರೆ. ಏಕೆಂದರೆ ವೈಯಕ್ತಿಕವಾಗಿ ಒಟ್ಟು ಲಾಭವನ್ನು ವಲಸೆ ಹೋದವರು ಅನುಭವಿಸಬಹುದು ಆದರೆ ಕುಟುಂಬ ಮತ್ತು ಸಮುದಾಯಕ್ಕೆ ಉತ್ಪಾದಕ ಸದಸ್ಯರನ್ನು ಕಳೆದುಕೊಂಡಂತಾಗುತ್ತದೆ ಎಂಬುದನ್ನು ಗುರುತಿಸಬಹುದು.

ಈ ಪ್ರದೇಶದ ಮಹಿಳೆಯರ ಸಾಮಾಜಿಕ–ಸಾಂಸ್ಕೃತಿಕ ಮತ್ತು ರಾಜಕೀಯ ಸ್ಥಾನಮಾನಗಳು ಕೆಲವು ಸಂದರ್ಭಗಳಲ್ಲಿ ಸ್ಥಿರವಾಗಿ ಉಳಿದಿವೆ. ಇನ್ನೂ ಕೆಲ ಸಂದರ್ಭದಲ್ಲಿ ಗ್ರಾಮೀಣ–ನಗರ ವಲಸೆ ಅವರ ಸ್ಥಾನಮಾನವನ್ನು ಕ್ಷೀಣಿಸುವಂತೆ ಮಾಡಿದೆ. ವಲಸೆಯೊಂದಿಗೆ ಮಹಿಳೆಯರ ಕೆಲಸದ ಹೊರೆ ಹೆಚ್ಚುತ್ತದೆ. ಜೊತೆಗೆ ಜೀವನೋಪಾಯದ ಆರ್ಥಿಕ ಸ್ಥಾನಮಾನ ಹೆಚ್ಚಾಗುವುದಿಲ್ಲ ಅಥವಾ ಸಾಮಾಜಿಕ ಸ್ಥಾನಮಾನವು ವೃದ್ಧಿಯಾಗುವುದಿಲ್ಲ. ಹೀಗಾಗಿ ಅವರು ಪುರುಷರಿಗೆ ಅಧೀನವಾಗಿರಬೇಕಾಗುತ್ತದೆ. ಬ್ರೈಡನ್ ಮತ್ತು ಚಾಂಟ್ ಹೇಳಿರುವಂತೆ "ಪುರುಷ ವಲಸೆಯಿಂದ ಮಹಿಳೆಯ ಮೇಲೆ ಭಿನ್ನವಾದ ಜವಾಬ್ದಾರಿಗಳು ಹೆಚ್ಚಾಗುತ್ತವೆ. ಪುರುಷರು ವಲಸೆ ಹೋದಾಗ ಮಹಿಳೆಯ ಕುಟುಂಬದ ಕೆಲಸ ಇದ್ದೇ ಇರುತ್ತದೆ. ಇದರ ಜೊತೆಗೆ ಜೀವನೋಪಾಯಕ್ಕಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಮೂಲಗಳನ್ನು ಮಹಿಳೆಯರು ಕಂಡುಕೊಳ್ಳಲು ಹೆಚ್ಚು ಸಮಯವನ್ನು ವ್ಯಯಿಸಬೇಕಾಗುತ್ತದೆ. ಮಹಿಳೆಯರ ಮೇಲೆ ಪ್ರತಿದಿನದ ಕೆಲಸದ ಹೊರೆ ಪುರುಷ ವಲಸೆಯಿಂದ ಹೆಚ್ಚಾಗುತ್ತದೆ"(ಬ್ರೈಡಾನ್ ಎಲ್. ಆಂಡ್ಯ್ ಚಾಂಟ್ ಎಸ್., ೧೯೮೯, ಪು. ೪೧೭). ಕೃಷಿ ಕೆಲಸದಲ್ಲೂ, ಕೌಟುಂಬಿಕ ಕೆಲಸದಲ್ಲೂ ಹಾಗೂ ಜೀವನೋಪಾಯದ ಕೆಲಸದಲ್ಲೂ ಮಹಿಳೆಯ ಮೇಲೆ ಅಧಿಕ ಹೊರೆ ಬೀಳುತ್ತದೆ. ಆದರೆ ಮಹಿಳೆಯ ತ್ಯಾಗ, ಕೆಲಸ ಮಾಡುವ ಮನೋಭಾವ, ಚಾಕಚಕ್ಯತೆಯನ್ನು ಆ ಸಮುದಾಯದ ಪುರುಷರಾಗಲಿ, ಕುಟುಂಬದ ಸದಸ್ಯರಾಗಲಿ ಪರಿಗಣಿಸದಿರುವುದು ವಿಪರ್ಯಾಸ. ಮಹಿಳೆಯರನ್ನು

ಸಾಮಾನ್ಯವಾಗಿ ಅವರು ಎಲ್ಲ ಕೆಲಸಗಳನ್ನು ಮಾಡಬೇಕು. ಆದರೆ ಪರಿಗಣನೆ ಇಲ್ಲದಿರುವುದು ಅವರನ್ನು ಅದೃಶ್ಯಗೊಳಿಸಿದಂತೆ ಆಗುತ್ತದೆ ಎಂದು ಹೇಳಬಹುದು.

**ಆಕರ ಗ್ರಂಥಸೂಚಿ**


ಅಫಶರ್ ಎಚ್., ೧೯೯೧, ವುಮೆನ್, ಡೆವಲಪ್‌ಮೆಂಟ್ ಆ್ಯಂಡ್ ಸರ್ವೈವಲ್ ಇನ್ ದ ಥರ್ಡ್ ವರ್ಲ್ಡ್: ಲಾಂಗ್‌ಮ್ಯಾನ್, ನ್ಯೂಯಾರ್ಕ್, ಪು. ೧೫೫.

ಕಿಂಗ್ ಇ. ಆ್ಯಂಡ್ ಹಿಲ್ ಎ.(ಇಡಿ), ೧೯೯೩, ವುಮನ್ಸ್ ಎಜುಕೇಷನ್ ಇನ್ ಡೆವಲಪಿಂಗ್ ಕಂಟ್ರಿಸ್: ಬ್ಯಾರಿಯರ್ಸ್, ಬೆನಿಫಿಟ್ಸ್ ಆ್ಯಂಡ್ ಪಾಲಸೀಸ್. ಜಾನ್ ಹಾಪ್‌ಕಿನ್ಸ್ ಯೂನಿವರ್ಸಿಟಿ ಪ್ರೆಸ್(ಫಾರ್ ದ ವರ್ಲ್ಡ್ ಬ್ಯಾಂಕ್), ಪು. ೧೭೪.

ಗ್ರಾಮ್ಷಿ ಎ., ೧೯೭೧ ಸೆಲೆಕ್ಶನ್ ಫ್ರಮ್ ದ ಪ್ರಿಸನ್ ನೋಟ್ಸ್ ಲಾರೆನ್ಸ್ ಆ್ಯಂಡ್ ವಿಶಾರ್ಟ್ ಲಿಮಿಟೆಡ್, ಲಂಡನ್ ಪು. ೪೨೬.

ಗೆಸ್ಟ್ ಪಿ., ೧೯೯೮, ಅಸೆಸಿಂಗ್ ದ ಕಾನ್ಸಿಕ್ವೆನ್ಸಿಸ್ ಆಫ್ ಇಂಟರ್ನಲ್ ಮೈಗ್ರೇಶನ್: ಮೆಥಡಲಾಜಿಕಲ್ ಇಶ್ಯೂ ಆ್ಯಂಡ್ ಅ ಕೇಸ್ ಸ್ಟಡೀ ಆನ್ ಥೈಲ್ಯಾಂಡ್ ಬೇಸಡ್ ಆನ್ ಲಾಂಗಿಟ್ಯೂಡಲ್ ಸರ್ವೆ ಡಾಟಾ. ಇನ್ ಆರ್ ಬಿಲ್ಸ್‌ಬರೋ(ಇಡಿ) ಮೈಗ್ರೇಶನ್, ಅರ್ಬನೈಜೇಷನ್ ಆ್ಯಂಡ್ ಡೆವಲಪ್‌ಮೆಂಟ್ : ನ್ಯೂ ಡೈರಕ್ಶನ್ ಆ್ಯಂಡ್ ಇಶ್ಯೂ, ಯುಎನ್‌ಎಫ್‌ಪಿಎ, ನ್ಯೂಯಾರ್ಕ್, ಪು. ೨೭೫–೩೧೮.

ಜಾಕ್ಸನ್ ಜೆ. ಎ.(ಇಡಿ) ೧೯೬೯, ಮೈಗ್ರೇಶನ್: ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಕೇಂಬ್ರೀಡ್ಜ್, ಪು. ೩೧೮.

ಫ್ರಾನ್ಸಿಸ್ ಇ., ೨೦೦೦, ಜಂಡರ್, ಮೈಗ್ರೇಶನ್ ಅಂಡ್ ಮಲ್ಟಿಪಲ್ ಲೈವ್‌ಲಿಹುಡ್ಸ್: ಕೇಸ್ ಫ್ರಮ್ ಈಸ್ಟರ್ನ್ ಆ್ಯಂಡ್ ಸೌಥರ್ನ್ ಆಫ್ರಿಕಾ; ದ ಜರ್ನಲ್ ಆಫ್ ಡೆವಲಪ್‌ಮೆಂಟ್ ಸ್ಟಡೀಸ್. ವಾಲ್ಯೂಮ್ ೩೮, ನಂ.೫ ಜೂನ್ ೨೦೦೨. ಪು. ೪೮.

ಬ್ರೈಡಾನ್ ಎಲ್. ಆ್ಯಂಡ್ ಚಾಂಟ್ ಎಸ್., ೧೯೮೯, ವುಮನ್ ಇನ್ ದ ಥರ್ಡ್ ವರ್ಲ್ಡ್: ಜಂಡರ್ ಇಶ್ಯೂ ಇನ್ ರೂರಲ್ ಆ್ಯಂಡ್ ಅರ್ಬನ್ ಏರಿಯಾಸ್, ಎಡ್ವರ್ಡ್ ಎಲ್ಗರ್ ಪಬ್ಲಿಷಿಂಗ್, ಪು. ೪೧೭.

ಅಧ್ಯಾಯ ಆರು

# ಸಮಾರೋಪ

೬.೧. ಅಧ್ಯಯನದ ಫಲಿತಗಳು

೬.೨. ಅಧ್ಯಯನದ ಮಿತಿಗಳು

೬.೩. ಮುಂದಿನ ಅಧ್ಯಯನದ ಸಾಧ್ಯತೆಗಳು

ಅಧ್ಯಾಯ ಆರು

# ಸಮಾರೋಪ

## ೬.೧. ಅಧ್ಯಯನದ ಫಲಿತಗಳು

ಈ ಅಧ್ಯಯನವು ಲಿಂಗವ್ಯವಸ್ಥೆ, ವಲಸೆ ಮತ್ತು ಗ್ರಾಮೀಣ ಜೀವನೋಪಾಯಗಳು ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಯಾವ ತೆರನಾಗಿದೆ ಎಂಬುದನ್ನು ಪರಿಶೀಲಿಸಿದೆ. ವಲಸೆ ಮತ್ತು ಜೀವನೋಪಾಯ ಕುರಿತು ಸಾಹಿತ್ಯ, ಅಧ್ಯಯನಗಳು ಹೆಚ್ಚಾಗುತ್ತಿದ್ದರೂ ಲಿಂಗಸಂಬಂಧಿ ಅಂಶವು ಎಲ್ಲ ಅಧ್ಯಯನಗಳ ಚರ್ಚೆಯಲ್ಲಿ ಕಂಡುಬರುವುದಿಲ್ಲ. ಆದರೆ ಕೆಲ ಅಧ್ಯಯನಗಳಲ್ಲಿ ಕಂಡುಬರುವ ಚರ್ಚೆಗಳು ಬಿಡಿ ಬಿಡಿಯಾಗಿವೆ ಹೊರತು ಇಡಿಯಾಗಿ ರೂಪುಗೊಂಡಿಲ್ಲ.

ಸ್ತ್ರೀವಾದಿಗಳ ಚಿಂತನೆ ಮತ್ತು ಕೊಡುಗೆಗಳಿಂದ ಮಹಿಳೆಯರನ್ನು ಅಭಿವೃದ್ಧಿಯಲ್ಲಿ ಒಳಗೊಳ್ಳುವಂತಹ ದೃಷ್ಟಿಕೋನಗಳು ಪ್ರಾರಂಭವಾದವು. ಇದರಿಂದ ಲಿಂಗ ಸಂಬಂಧವನ್ನು ಅರ್ಥಮಾಡಿಕೊಳ್ಳುವಂತಹ ಮತ್ತು ವಲಸೆಯನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ನೋಡುವ ಕ್ರಮ ಪ್ರಾರಂಭವಾಯಿತು.

ಜಾಗತಿಕವಾಗಿ ವಲಸೆ, ವಲಸೆಯ ವಿಧಗಳು, ನಮೂನೆಗಳು ಮತ್ತು ವಲಸೆ ಹೋಗಲು ಇರುವ ಕಾರಣಗಳು, ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ವಲಸೆ, ವಲಸೆ ಕುರಿತ ಸಿದ್ಧಾಂತಗಳು ಮತ್ತು ವಲಸೆ ಕುರಿತ ಸಾಹಿತ್ಯವನ್ನು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದಿಂದ ಕಂಡುಬಂದ ಅಂಶವೆಂದರೆ ವಲಸೆ ಕುರಿತ ಸಾಹಿತ್ಯದಲ್ಲಿ ಲಿಂಗಸಂಬಂಧಿ ನೆಲೆಯ ಚರ್ಚೆಗಳು ಕಂಡುಬರುವುದಿಲ್ಲ ಎಂಬುದನ್ನು ಗುರುತಿಸುತ್ತದೆ. ಕಳೆದ ಒಂದು ದಶಕದಿಂದ ವಲಸೆ ಕುರಿತ ಅಧ್ಯಯನಗಳು ಪ್ರಾರಂಭವಾದರೂ ಸಾಮಾಜಿಕ ಸಂಶೋಧಕರು ಮಹಿಳೆಯ ಅನುಭಗಳನ್ನು ಸಮಗ್ರವಾಗಿ ಕಟ್ಟಿಕೊಡುವಲ್ಲಿ ಸೋತರು ಎನ್ನಬಹುದು. ಮಹಿಳೆಯರನ್ನು ವಲಸಿಗರ ಜೊತೆಗೆ ಹೋಗುವವರು ಎಂದು ಮಾತ್ರ ನೋಡಲಾಗಿತ್ತು ಅದು ಗಂಡನ ಜೊತೆಗೆ ಹೆಂಡತಿ ಹೋಗುವ ಹಾಗೇ. ಆದರೆ ಇಂದು ವಲಸೆಯ

ಪ್ರವೃತ್ತಿಯಲ್ಲಿ ಬದಲಾವಣೆ ಆಗಿದೆ. ಇಂದು ಮಹಿಳೆ ಒಬ್ಬಳೆ ವಲಸೆ ಹೋಗುತ್ತಿದ್ದಾಳೆ ಎಂಬುದನ್ನು ಈ ಅಧ್ಯಯನ ಗುರುತಿಸಿತು.

ಗ್ರಾಮೀಣ-ನಗರ ವಲಸೆಯ ಸಂಬಂಧ, ಕುಟುಂಬಗಳ ಸಾಮಾಜಿಕ-ಆರ್ಥಿಕ ಸ್ಥಾನಮಾನ, ಲಿಂಗಾಧಾರಿತ ಶ್ರಮವಿಭಜನೆ, ನಿರ್ಣಯ ಪ್ರಕ್ರಿಯೆಯಲ್ಲಿ ಲಿಂಗಸಂಬಂಧಿ ಪಾತ್ರ, ಯಾರು ವಲಸೆ ಹೋಗುತ್ತಾರೆ, ಏಕೆ ವಲಸೆ ಹೋಗುತ್ತಾರೆ ಎಂಬುದನ್ನು ಈ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ.

ಮಹಿಳೆಯ ಮೇಲೆ ಕೆಲಸದ ಹೊರೆ, ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳನ್ನು ಮಹಿಳೆಯರು ಯಾವ ತೆರನಾಗಿ ನಿಭಾಯಿಸುತ್ತಾರೆ, ಕುಟುಂಬ ಮತ್ತು ಕೌಟುಂಬಿಕೇತರ ಜವಾಬ್ದಾರಿ ಮಹಿಳೆಯರು ಯಾವ ತೆರನಾಗಿ ನಿಭಾಯಿಸುತ್ತಾರೆ ಎಂಬುದನ್ನು ಅಧ್ಯಯನ ವಿವರಿಸುತ್ತದೆ.

ಈ ಅಧ್ಯಯನವು ವಲಸೆ ಮತ್ತು ಜೀವನೋಪಾಯವನ್ನು ವಾಸ್ತವದ ನೆಲೆಯಲ್ಲಿ ನಿಂತು ನೋಡುತ್ತದೆ. ಈ ಪ್ರದೇಶದಲ್ಲಿ ಕಂಡುಬರುವ ಸಾಮಾಜಿಕ ವಾಸ್ತವವೆಂದರೆ ಮಹಿಳೆಯರು ಪುರುಷರಿಗಿಂತ ಹೆಚ್ಚು ಅಡ್ಡಿಗಳನ್ನು, ಕಷ್ಟಗಳನ್ನು ಜೀವನದಲ್ಲಿ ಸಾಮಾಜಿಕ ಸಾಂಸ್ಕೃತಿಕ ಕಾರಣಗಳಿಂದಾಗಿ ಎದುರಿಸುತ್ತಿದ್ದಾರೆ. ಲಿಂಗ ಅಸಮಾನತೆ ಎಲ್ಲೆಡೆಯೂ ಹರಡಿಕೊಂಡಿದೆ. ಅದರ ಪ್ರಭಾವ ಸಮಯ, ಸಂದರ್ಭಗಳಿಗೆ ತಕ್ಕ ಹಾಗೇ ಕಾಣಸಿಗುತ್ತವೆ. ಸಂಪನ್ಮೂಲಗಳ ನಿಯಂತ್ರಣ, ಆರ್ಥಿಕ ಚಟುವಟಿಗಳಲ್ಲಿ ಭಾಗವಹಿಸುವಿಕೆ, ರಾಜಕೀಯ ಧ್ವನಿಗಾಗಿ ಎಲ್ಲ ಮಹಿಳೆಯರು ಒಗ್ಗೂಡದೇ ಇರುವುದು ಇತ್ಯಾದಿ ಇವೆ. ಇದು ಮಹಿಳೆಯರ ವಿರುದ್ಧ ತಾರತಮ್ಯವನ್ನುಂಟು ಮಾಡುತ್ತದೆ. ಪ್ರತಿಯೊಂದು ಆರ್ಥಿಕ ವಲಯದ ಚಟುವಟಿಕೆ ಮತ್ತು ಉತ್ಪಾದನೆಯಿಂದ ಮಹಿಳೆಯರು ಹೆಚ್ಚಾಗಿ ಅಪಾಯಕ್ಕೆ ಈಡಾಗಿದ್ದಾರೆ.

ಈ ಪ್ರದೇಶದಲ್ಲಿ ಮಹಿಳೆಯರು ಕೃಷಿಯ ಕೆಲಸಕ್ಕೆ ಬೆನ್ನೆಲುಬಾಗಿ ನಿಂತಿದ್ದಾರೆ. ಅವರು ಕುಟುಂಬದ ಹಸಿವನ್ನು ನೀಗಿಸುತ್ತಾರೆ. ಕೃಷಿ ಭೂಮಿಯನ್ನು ಸ್ವಚ್ಛಗೊಳಿಸುತ್ತಾರೆ. ಸಸಿ ನೆಡುತ್ತಾರೆ, ಕಳೆ ತೆಗೆಯುತ್ತಾರೆ, ಕೊಯ್ಲು/ರಾಶಿ ಮಾಡುತ್ತಾರೆ. ನಿರಂತರವಾಗಿ ಭೂಮಿ, ಮನೆಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುತ್ತಾರೆ. ಮಹಿಳೆಯರು ಇಷ್ಟೆಲ್ಲಾ ಕೆಲಸಗಳನ್ನು ನಿರ್ವಹಿಸಿದರೂ ನೀತಿಗಳು ಅವರನ್ನು ಪರಿಗಣಿಸಿಲ್ಲ. ಮಹಿಳೆಯರ ಜೀವನೋಪಾಯ ನಿರ್ವಹಣೆ ಪ್ರಾಥಮಿಕ ಮೂಲದಲ್ಲಿ ನಿರ್ಲಕ್ಷಿಸಲಾಗಿದೆ. ಇದು ಮಹಿಳೆಯರ ಅಧೀನತೆಯನ್ನು ಪುಷ್ಟೀಕರಿಸುತ್ತದೆ.

ಸರ್ಕಾರದ ಕೆಲವು ಯೋಜನೆಗಳು ಮಹಿಳೆಯರನ್ನು ಒಳಗೊಳ್ಳುವಿಕೆಗೆ ಒತ್ತು ನೀಡಿದವು. ಆದರೆ ಯಶಸ್ವಿಯಾಗಲಿಲ್ಲ. ಸ್ವಲ್ಪಮಟ್ಟಿಗೆ ಮಹಿಳೆಯರನ್ನು ಒಳಗೊಂಡಿತಾದರೂ

ನಗರ–ಗ್ರಾಮೀಣ ಮಹಿಳೆಯರ ನಡುವೆ ವಿಭಾಗ ಮಾಡಿತು. ಇದು ಅಭಿವೃದ್ಧಿಯ ಕತೆಯನ್ನು ಮಧ್ಯಸ್ಥಿಕೆಗಳ ಮೂಲಕ ಸರಿದೂಗಿಸಿತು.

ನೀತಿಯಲ್ಲಿ ಲಿಂಗವನ್ನು ಒಳಗೊಳ್ಳದೆ ಇರುವ ನಿರ್ಲಕ್ಷತನವು ಅಭಿವೃದ್ಧಿಯಲ್ಲಿನ ದೀರ್ಘಕಾಲದ ಸಮಸ್ಯೆಗಳಿಗೆ ಕಾರಣವಾಗಿದೆ. ಇದು ಅಭಿವೃದ್ಧಿ ನಿಧಾನಗತಿಯ ಬೆಳವಣಿಗೆ, ಅಂಚಿನ ಗುಂಪುಗಳಲ್ಲಿ ಆಹಾರ ಅಭದ್ರತೆ, ದುರ್ಬಲ ಆಡಳಿತ, ಕೃಷಿ ಮತ್ತು ಬಡತನದ ಮಹಿಳೀಕರಣ, ಮಹಿಳೆಯ ಕಡಿಮೆ ಗುಣಮಟ್ಟದ ಬದುಕು, ಪರಿಸರದ ಅವನತಿ, ಜನಸಂಖ್ಯಾ ಬೆಳವಣಿಗೆ ಇತ್ಯಾದಿ ಸಮಸ್ಯೆಗಳನ್ನು ಉಲ್ಬಣಗೊಳಿಸಿದೆ.

ಇದರಿಂದ ಮಹಿಳೆಯರು ರಾಷ್ಟ್ರ ಮತ್ತು ರಾಜ್ಯ ಹಾಗೂ ಜಿಲ್ಲೆ ಮಟ್ಟದ ಕಾರ್ಯಚಟುವಟಿಕೆಗಳಲ್ಲಿ ಅಗೋಚರವಾಗಿದ್ದಾರೆ. ಆರ್ಥಿಕ ಚಟುವಟಿಕೆಗಳ ವಿಸ್ತರಣೆಯಲ್ಲಿ ಮತ್ತು ಗೃಹಾಧಾರಿತ ಉತ್ಪನ್ನಗಳ ತಯಾರಿಕೆಯಲ್ಲಿ ಇವರ ಭಾಗವಹಿಸುವಿಕೆ ಕಡಿಮೆ ಇದೆ. ಯಾವಾಗ ಮಹಿಳೆಯರನ್ನು ಅಭಿವೃದ್ಧಿಯ ಫಲಾನುಭವಿಗಳನ್ನಾಗಿ ಗುರುತಿಸಲಾಯಿತೋ ಆಗ ಮಹಿಳೆಯರನ್ನು ಸಂತಾನೋತ್ಪತ್ತಿಯ ಸಾಮರ್ಥ್ಯಕ್ಕೆ ಅನುಗುಣವಾಗಿ ಅಥವಾ ಕಲ್ಯಾಣ ಕಾರ್ಯಕ್ರಮದ ಫಲಾನುಭವಿಯನ್ನಾಗಿ ಗುರುತಿಸಲಾಯಿತು.

ವಲಸೆ ಹೋಗದ ಮಹಿಳೆಯು ಕುಟುಂಬದಲ್ಲಿ ತುಂಬ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿರುತ್ತಾಳೆ. ಈ ಅಧ್ಯಯನ ಕ್ಷೇತ್ರದಲ್ಲಿ ಕಂಡುಬಂದ ಅಂಶವೆಂದರೆ ವಲಸೆ ಹೋದ ಪುರುಷರ ಹೆಂಡತಿ ಅಥವಾ ವಲಸೆ ಹೋದವರ ಜೊತೆಗೆ ತುಂಬ ಹತ್ತಿರದ ಸಂಬಂಧವಿರುವ ಮಹಿಳೆಯ ಮೇಲೆ ಹೆಚ್ಚು ಜವಾಬ್ದಾರಿಗಳು, ಕರ್ತವ್ಯಗಳು ಇರುತ್ತವೆ. ಮನೆಯ ನಿರ್ವಹಣೆ ಜೊತೆಗೆ ಜೀವನೋಪಾಯ ನಿರ್ವಹಣೆ, ಕೃಷಿಯನ್ನು ನೋಡಿ ಕೊಳ್ಳಬೇಕಾಗುತ್ತದೆ. ಅಲ್ಲದೆ ಸಂತಾನೋತ್ಪತ್ತಿ ಚಟುವಟಿಕೆಗಳನ್ನು ನಿರ್ವಹಿಸಬೇಕಾಗುತ್ತದೆ.

ಈ ಅಧ್ಯಯನದಿಂದ ಕಂಡುಬಂದ ಇನ್ನೊಂದು ಅಂಶವೆಂದರೆ ವಲಸೆಯು ಲಿಂಗ ಮತ್ತು ವಯಸ್ಸಿನ ಜೊತೆಗೆ ಸಂಬಂಧವನ್ನು ಹೊಂದಿದೆ. ಈ ಕ್ಷೇತ್ರದಲ್ಲಿ ಮಹಿಳೆಯರಿಗಿಂತ ಪುರುಷರು ಹೆಚ್ಚು ವಲಸೆ ಹೋಗುತ್ತಾರೆ, ವರ್ಷದಿಂದ ವರ್ಷಕ್ಕೆ ವಲಸೆ ಹೋಗುವವರ ಸಂಖ್ಯೆ ಹೆಚ್ಚಾಗುತ್ತಿದೆ ಮತ್ತು ಪುರುಷರ ಜೊತೆಗೆ ಮಹಿಳೆಯರು ವಲಸೆ ಹೋಗುತ್ತಿರುವುದು ಇದೆ. ೨೦–೩೦ ವಯಸ್ಸಿನವರು ಹೆಚ್ಚು ಹೆಚ್ಚಾಗಿ ವಲಸೆ ಹೋಗುತ್ತಿದ್ದಾರೆ ಮತ್ತು ಕುಟುಂಬಗಳಲ್ಲಿ ಪುರುಷರನ್ನು ಸರಳವಾಗಿ ಯಾವುದೇ ಅಡ್ಡಿಗಳಲ್ಲದೆ ವಲಸೆ ಹೋಗಲು ಬಿಡುತ್ತಾರೆ. ಆದರೆ ಮಹಿಳೆಯರನ್ನು ಸರಳವಾಗಿ, ಸುಲಭವಾಗಿ ವಲಸೆ ಹೋಗಲು ಬಿಡುವುದಿಲ್ಲ.

ಪುರುಷರ ವಲಸೆಯಿಂದ ಕೃಷಿಯ ಉತ್ಪಾದನೆ ಕುಂಠಿತಗೊಳ್ಳುತ್ತದೆ ಅಲ್ಲದೆ ಮಹಿಳೆಯರ ಮೇಲೆ ಕೆಲಸದ ಹೊರೆಯು ಹೆಚ್ಚಾಗುತ್ತದೆ ಮತ್ತು ಆರೋಗ್ಯದ ಮೇಲೆ ಪರಿಣಾಮ ಬೀರುತ್ತದೆ. ಅಲ್ಲದೆ ಮಹಿಳೆಯರ ಮೇಲೆ ಜೀವನೋಪಾಯಕ್ಕಾಗಿ ಸಣ್ಣ-ಪುಟ್ಟ ಕೆಲಸಗಳನ್ನು ಮಾಡುವುದು, ಆದಾಯವನ್ನು ಉತ್ತಮಗೊಳಿಸಿಕೊಳ್ಳುವುದನ್ನು ಮಾಡಿಕೊಳ್ಳುವುದು ಕಂಡುಬಂದಿದೆ. ಕುಟುಂಬದ ಜವಾಬ್ದಾರಿಗಳ ಹೆಚ್ಚಳ, ಕುಟುಂಬದ ಒತ್ತಡಗಳಿಂದ ಮಹಿಳೆಯರ ಕೃಷಿಯೇತರ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆಯು ಕಡಿಮೆ ಆಗುತ್ತದೆ. ಆದರೂ ಸಹ ಯಾವುದೇ ಪರ್ಯಾಯಗಳಿಲ್ಲದೆ ಮಹಿಳೆಯರು ಪ್ರತಿದಿನ ಹೆಚ್ಚು ಸಮಯವನ್ನು ಕೆಲಸಕ್ಕಾಗಿ ಕಳೆಯಬೇಕಾಗುತ್ತದೆ.

ಪುರುಷರು ನಗರಗಳಿಗೆ ವಲಸೆ ಹೋಗುತ್ತಿರುವುದರಿಂದ ಮಹಿಳೆಯರು ಮನೆಯ ಮುಖ್ಯಸ್ಥರಾಗುತ್ತಿರುವುದು ಕಂಡುಬರುತ್ತಿದೆ. ಇನ್ನೊಂದು ಪ್ರಮುಖ ಅಂಶವೆಂದರೆ ಮಹಿಳೆಯರ ಪುರುಷರು ಇಲ್ಲದಿರುವ ಕೊರತೆಯನ್ನು ಮನೆಯಲ್ಲಿ ತುಂಬಬೇಕಾಗುತ್ತದೆ. ಹಾಗೆಯೇ ಸಮುದಾಯದಲ್ಲಿ ಸಹ ಅವರ ಪಾತ್ರವನ್ನು ತುಂಬಬೇಕಾಗುತ್ತದೆ. ಇದರಿಂದ ಮಹಿಳೆಯರ ಜವಾಬ್ದಾರಿ ಹೆಚ್ಚಾಗುತ್ತದೆ. ಆದರೆ ಮಹಿಳೆಯ ಸಾಮಾಜಿಕ-ಆರ್ಥಿಕ ಸ್ಥಾನಮಾನದಲ್ಲಿ ಯಾವುದೇ ತೆರನಾದ ಬದಲಾವಣೆಯಾಗುವುದಿಲ್ಲ, ಮಹಿಳೆಯ ಸ್ವಾಯತ್ತತೆ, ಸ್ವಾತಂತ್ರ್ಯದಲ್ಲಿ ಬದಲಾವಣೆ ಆಗಿಲ್ಲ. ಮಹಿಳೆ ಪುರುಷನಿಗೆ ಅಧೀನ ಬದುಕನ್ನು ಸಾಗಿಸುತ್ತಿರುವುದನ್ನು ಅಧ್ಯಯನವು ಗುರುತಿಸುತ್ತದೆ.

ಒಟ್ಟು ಈ ಅಧ್ಯಯನ ಲಿಂಗವ್ಯವಸ್ಥೆ ವಲಸೆಯನ್ನು ಹೇಗೆ ಪ್ರಭಾವಿಸುತ್ತದೆ ಎಂಬುದನ್ನು ವಿವಿಧ ಆಯಾಮಗಳಿಂದ ವಿಶ್ಲೇಷಿಸುತ್ತದೆ. ಗ್ರಾಮೀಣ-ನಗರ ವಲಸೆಯಿಂದಾಗಿ ಮಹಿಳೆಯ ಜೀವನೋಪಾಯ ಮತ್ತು ಕುಟುಂಬದ ಮೇಲಾಗುವ ಪರಿಣಾಮಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಯೋಜನೆಗಳಲ್ಲಿ ಲಿಂಗ ಅಂತರವು ಕಂಡು ಬರುತ್ತದೆ. ಪಿತೃಪ್ರಧಾನ ಚಿಂತನೆಗಳಿಗೆ, ಮಹಿಳೆ-ಪುರುಷ ಪ್ರಧಾನ ಮತ್ತು ಅಧೀನ ಸಂಬಂಧಗಳಿಗೆ ಯಾವುದೇ ತೆರನಾದ ಸವಾಲುಗಳನ್ನು ಹಾಕುವ ಸ್ಥಿತಿ ಕಂಡುಬಂದಿಲ್ಲ. ಹಾಗೆಯೇ ಅಧಿಕಾರರಹಿತತೆ ಮತ್ತು ಸಹನಶೀಲತೆ ಸರ್ಕಾರವು ಗ್ರಾಮೀಣ ಜನಸಂಖ್ಯೆಯನ್ನು ನಿರ್ಲಕ್ಷಿಸಿರುವುದನ್ನು ಗುರುತಿಸಬಹುದು.

ಈ ಪ್ರದೇಶದಲ್ಲಿ ಮಹಿಳೆಯರನ್ನು ಸಬಲೀಕರಣ ಮಾಡಲು ಸರ್ಕಾರ ಹಲವು ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ ಆದರೂ ಅವು ವಲಸೆಯನ್ನು ತಡೆಗಟ್ಟಲು ಮತ್ತು ಸುಸ್ಥಿರ ಜೀವನೋಪಾಯವನ್ನು ಕೊಡುವಲ್ಲಿ ಸೋತಿವೆ ಎನ್ನಬಹುದು. ಲಿಂಗ ಸೂಕ್ಷ್ಮ ಮತ್ತು ಲಿಂಗ ಸಮತೋಲಿತ ಅಭಿವೃದ್ಧಿಯನ್ನು ಮಾಡಬೇಕಾದ ಅಗತ್ಯತೆ ಇದೆ ಎಂದು ಹೇಳಬಹುದು.

## ೬.೨. ಅಧ್ಯಯನದ ಮಿತಿಗಳು

ಸದರಿ ಅಧ್ಯಯನವು ಬಳ್ಳಾರಿ ಜಿಲ್ಲೆಯನ್ನು ಗ್ರಾಮೀಣ ಪ್ರದೇಶವನ್ನು ಮಾತ್ರ ಕೇಂದ್ರೀಕರಿಸಿಕೊಂಡಿದ್ದು, ಇದಕ್ಕೆ ಮೂರು ಮಿತಿಗಳಿವೆ. ಒಂದು ಅಧ್ಯಯನವು ನಗರ ಪ್ರದೇಶದ ನಮೂನೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿಲ್ಲ. ಎರಡು ಈ ಜಿಲ್ಲೆಗೆ ಬೇರೆ ಜಿಲ್ಲೆಯಿಂದ ಬಂದ ವಲಸಿಗರನ್ನು ಅಧ್ಯಯಯನವು ಒಳಗೊಂಡಿಲ್ಲ. ಮೂರು ಪ್ರಕರಣದ ತರಹ ಅಧ್ಯಯನವನ್ನು ಮಾಡಿಲ್ಲ. ಇದು ಈ ಅಧ್ಯಯನದ ಮಿತಿಯಾಗಿದೆ.

## ೬.೩. ಮುಂದಿನ ಅಧ್ಯಯನದ ಸಾಧ್ಯತೆಗಳು

ಈ ಅಧ್ಯಯನ ವ್ಯಾಪ್ತಿಯನ್ನು ಮೀರಿ ಇನ್ನು ಹಲವು ಅಧ್ಯಯನ ಮಾಡಬೇಕಾಗಿದೆ. ಮೊದಲನೆಯದು ಭೂಮಿಯ ಒಡೆತನ ಮತ್ತು ಲಿಂಗ ಆಯಾಮದ ಕುರಿತು ಸರ್ಕಾರ ಯೋಜನೆಯೊಂದನ್ನು ರೂಪಿಸಬೇಕಾಗಿದೆ. ಇದು ಸೂಕ್ಷ್ಮ ಮತ್ತು ಚರ್ಚೆ ವಿಷಯವಾಗಿರುವುದರಿಂದ ಇದನ್ನು ಸರ್ಕಾರ ಅಧ್ಯಯನ ಮಾಡಬೇಕಾದ ತುರ್ತು ಎದ್ದು ಕಾಣುತ್ತದೆ.

ಬಳ್ಳಾರಿ ಜಿಲ್ಲೆಯ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಮತ್ತು ಅಭಿವೃದ್ಧಿ ಯೋಜನೆಗಳ ಅನುಷ್ಠಾನ ಮತ್ತು ಬೆಳವಣಿಗೆ ಮತ್ತು ಲಿಂಗ ಅಸಮಾನತೆಯನ್ನು ಅದು ಬೀರುವ ಪರಿಣಾಮಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಬಹುದು.

ಈ ಅಧ್ಯಯನ ಲಿಂಗವ್ಯವಸ್ಥೆ, ವಲಸೆ ಮತ್ತು ಗ್ರಾಮೀಣ ಜೀವನೋಪಾಯ ಕುರಿತು ಕರ್ನಾಟಕದಲ್ಲಿರುವ ಬೇರೆ ಬೇರೆ ಜಿಲ್ಲೆಗಳ ಗ್ರಾಮೀಣ ಪ್ರದೇಶಕ್ಕೆ ವಿಸ್ತರಿಸಿ ಸಮಗ್ರವಾಗಿ ಅಧ್ಯಯನ ಮಾಡಬಹುದು ಎಂದು ಹೇಳಬಹುದು.

# ಅನುಬಂಧಗಳು

ಅನುಬಂಧ ೧: ಪ್ರಶ್ನಾವಳಿ

ಅನುಬಂಧ ೨: ವಕ್ತೃ ವಿವರ

ಅನುಬಂಧ ೩: ಛಾಯಾಚಿತ್ರಗಳು

ಅನುಬಂಧ ೧.

# ಪ್ರಶ್ನಾವಳಿ

## ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ

**(ಬಳ್ಳಾರಿ ಜಿಲ್ಲೆಯ್ನು ಅನುಲಕ್ಷಿಸಿ)**

ಕನ್ನಡ ವಿಶ್ವವಿದ್ಯಾಲಯ, ಮಾನವಶಾಸ್ತ್ರ ವಿಭಾಗದಲ್ಲಿ ೨೦೧೫-೧೬ನೇ ಸಾಲಿನಲ್ಲಿ ಸಮಾಜಶಾಸ್ತ್ರ ಪಿಎಚ್.ಡಿ. ಅಧ್ಯಯನ ಭಾಗವಾಗಿ ಲಿಂಗವ್ಯವಸ್ಥೆ, ವಲಸೆ ಮತ್ತು ಜೀವನಾಧಾರ ಎಂಬ ವಿಷಯದಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಈ ಅಧ್ಯಯನಕ್ಕೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಯಿಂದ ಯಾವುದೇ ಫೆಲೋಶಿಫ್/ಅನುದಾನವನ್ನು ಪಡೆಯಲಾಗಿಲ್ಲ. ಈ ಅಧ್ಯಯನ ಹೈದರಾಬಾದ್ ಕರ್ನಾಟಕ ಪ್ರದೇಶದ ಬಳ್ಳಾರಿ ಜಿಲ್ಲೆಯ ಗ್ರಾಮೀಣ ಪ್ರದೇಶವನ್ನು ಅನುಲಕ್ಷಿಸಿ, ವಲಸೆ, ಅದಕ್ಕೆ ಕಾರಣಗಳು ಮತ್ತು ಅವು ಲಿಂಗವ್ಯವಸ್ಥೆ ಮೇಲೆ ಉಂಟು ಮಾಡುವ ಪರಿಣಾಮಗಳ ಬಗ್ಗೆ ತಿಳಿಸುತ್ತದೆ. ಮಾಹಿತಿಯನ್ನು ವಲಸೆ ಹೋಗಿರುವ ಕುಟುಂಬದ ಸದಸ್ಯರಿಂದ ಸಂಗ್ರಹಿಸಲಾಗುವುದು.

ತಾವುಗಳು ದಯವಿಟ್ಟು ಬೆಂಬಲ ಮತ್ತು ಸಹಕಾರದೊಂದಿಗೆ ಈ ಅಧ್ಯಯನ ಯಶಸ್ವಿಯಾಗಲು ಸರಿಯಾದ ಮಾಹಿತಿಯನ್ನು ಒದಗಿಸಬೇಕೆಂದು ಈ ಮೂಲಕ ಕೋರಲಾಗಿದೆ. ನೀವು ನೀಡುವ ಮಾಹಿತಿ ಸರಿ-ತಪ್ಪು ಎಂಬುದಿಲ್ಲ, ಆದರೆ ನಿಜವಾದ, ನಿಮಗೆ ಅನಿಸಿದ ಭಾವನೆಗಳನ್ನು ವ್ಯಕ್ತಪಡಿಸಬಹುದು. ನೀವು ನೀಡಿದ ಮಾಹಿತಿಯನ್ನು ಗೌಪ್ಯವಾಗಿ ಇಡಲಾಗುವುದು. ಯಾವುದೇ ಉದ್ದೇಶಗಳಿಗಾಗಿ ನಿಮ್ಮ ಹೆಸರು, ವಿಳಾಸ ಇತ್ಯಾದಿ ವಿವರಗಳನ್ನು ಬಹಿರಂಗಪಡಿಸುವುದಿಲ್ಲ ಎಂದು ಈ ಮೂಲಕ ತಮಗೆ ತಿಳಿಸುತ್ತೇನೆ.

---

**ಸಂಶೋಧನ ವಿದ್ಯಾರ್ಥಿ**

**(ಯರ್ರಿಸ್ವಾಮಿ ಈ.)**

---

| | | |
|---|---|---|
| ವಕ್ತೃ ಹೆಸರು: | | ಸಂಖ್ಯೆ: |
| ಮನೆ ನಂ: | | ಗ್ರಾಮ ಹೆಸರು: |
| ವಾರ್ಡ್: | | ಗ್ರಾಮ ಪಂಚಾಯತ್ : |
| ತಾಲೂಕು: | | ಜಿಲ್ಲೆ: |
| ಸಂದರ್ಶಕರ ಹೆಸರು: | | |
| ಸಂದರ್ಶನದ ದಿನಾಂಕ: | | |

